ಖುರೇಶ್ ವಿಗ್ರಹಕಾರರು ಅಲ್ಲಾ ಮಸೀದಿಗಳಿಂದ ಜನರನ್ನು ತಡೆದು ಅವರನ್ನು ನಾಶಮಾಡಲು ಬಯಸಿದ್ದರು. ಇಬ್ನ್ ಜರೀರ್ ಅವರು ಇಬ್ನ್ ಜಾಯ್ದ್ ರವರಿಗೆ ಅಲ್ಲಾ ಹೇಳಿಕೆಯ ಪ್ರಕಾರ ವರದಿ ಮಾಡಿದ್ದಾರೆ,

ಅಲ್ಲಾ ಯಹೂದಿಗಳನ್ನು ಮತ್ತು ಕ್ರಿಶ್ಚಿಯನ್ನರನ್ನು ಶಿಕ್ಷಿಸಿದ ನಂತರ, ......... ವಿಗ್ರಹಗಾರರನ್ನು ಸಹ ಅವರು ಟೀಕಿಸಿದರು. ಅವರು ತಮ್ಮ ವಿಗ್ರಹಗಳು ಮತ್ತು ಬಹುದೇವತೆಗಳಿಗಾಗಿ ಅಲ್-ಮಸೀದಿ ಅಲ್-ಹರಾಮ್ (ಈಗಿನ ಮಕ್ಕಾ ಮಸೀದಿ) ಅನ್ನು ಪ್ರತ್ಯೇಕವಾಗಿ ಇಟ್ಟುಕೊಂಡಿದ್ದರು."

ಇಲ್ಲಿ ಖುರಾನಿನಲ್ಲಿ ಹೇಳಿರುವಂತೆ ಮಕ್ಕಾ ಮಸೀದಿ ಪ್ರಥಮ ಮಸೀದಿಯಾಗಿರುತ್ತದೆ. ಖುರಾನ್ 2:114 ರ ವ್ಯಾಖ್ಯಾನದಂತೆ ಅದು ಮೊದಲಿಗೆ ಖುರೇಶಿ ಜನಾಂಗದ ಮಂದಿರವಾಗಿತ್ತು. ಅಲ್ಲಿ ವಿಗ್ರಹಗಳ ಆರಾಧನೆ ನಡೆಯುತ್ತಿತ್ತು. ಅಲ್ಲಿನ ವಿಗ್ರಹಾರಾದನಾ ಜಾಗದಲ್ಲಿ ಮೊದಲ ಮಸೀದಿ ಕಟ್ಟಲಾಗಿದೆ. ಅಂದರೆ ಇನ್ನೊಬ್ಬರ ನಂಬಿಕೆಗಳನ್ನು ಧ್ವಂಸಗೊಳಿಸಿ ಈ ಮತದ ಪ್ರಥಮ ಮಸೀದಿ ನಿರ್ಮಾಣವಾಗಿದೆ. ಜಗತ್ತಿನಾದ್ಯಂತೆ ಇದುವೇ ಮಾರ್ಗದರ್ಶಿಯಾಗಿದೆ ಮುಸ್ಲೀಮರಿಗೆ. ವಿಗ್ರಹಾರಾಧಕರ ದೇವಾಲಯಗಳನ್ನು ಮಸೀದಿಗಳನ್ನಾಗಿಸಿ ಎಂದು ತಫ್ಸೀರ್ ನಲ್ಲಿ ಅನುವಾದವಿದೆ.

"2.114 ಕತೀರ್ – ಇಬ್ನ್ ಅಲ್ ಕತೀರ್ – ಅಲ್ಲಾ ಯಹೂದಿಗಳನ್ನು ಮತ್ತು ಕ್ರಿಶ್ಚಿಯನ್ನರನ್ನು ಶಿಕ್ಷಿಸಿದ ನಂತರ, ಅಲ್-ಮಸೀದಿ ಅಲ್-ಹರಾಮ್ ನಿಂದ ಸಂದೇಶವಾಹಕರು ಮತ್ತು ಅವರ ಸಹಚರರು ಅಲ್ಲಾಹನ ಪ್ರಾರ್ಥಿಸುವುದನ್ನು ತಡೆಗಟ್ಟಲು ಹೊರಹಾಕಿದ್ದ ವಿಗ್ರಹಗಾರರನ್ನು ಸಹ ಅವರು ಟೀಕಿಸಿದರು. ಅವರು ತಮ್ಮ ವಿಗ್ರಹಗಳು ಮತ್ತು ಬಹುದೇವತೆಗಳಿಗಾಗಿ ಅಲ್-ಮಸೀದಿ ಅಲ್-ಹರಾಮ್ (ಈಗಿನ ಮಕ್ಕಾ ಮಸೀದಿ) ಅನ್ನು ಪ್ರತ್ಯೇಕವಾಗಿ ಇಟ್ಟುಕೊಂಡಿದ್ದರು.

ಈ ಅಯಾತು, "ನಂಬಿಕೆಯಿಲ್ಲದವರನ್ನು ಅನುಮತಿಸಬೇಡ – ಮಸೀದಿಗಳನ್ನು ಪ್ರವೇಶಿಸಲು, ಕದನವಿರಾಮ ಅಥವಾ ಒಪ್ಪಂದದ ನಿಯಮಗಳನ್ನು ತೃಪ್ತಿಪಡಿಸಲು ಹೊರತುಪಡಿಸಿ." "ಅಲ್ಲಾಹುವಿನ ಸಂದೇಶವಾಹಕನು .... ಮಕಾವನ್ನು ವಶಪಡಿಸಿಕೊಂಡಾಗ, ಯಾರಾದರೊಬ್ಬರು ಮಿನಾದಲ್ಲಿ ಈ ರೀತಿ ಸಾರುವಂತೆ ಆದೇಶಿಸಿದರು "ಪ್ರಸ್ತುತ ವರ್ಷದ ನಂತರ, ಯಾವುದೇ ವಿಗ್ರಹಕಾರರು ಹಜ್ಜನ್ನು ನಿರ್ವಹಿಸಬಾರದು ಮತ್ತು ಸದರಿ ಗೃಹದ ಸುತ್ತ ನಗ್ನ ವ್ಯಕ್ತಿಗಳು ತವಾಫ್ (ಪ್ರದಕ್ಷಿಣೆ)

ಮಾಡಬಾರದು, ಒಪ್ಪಂದವನ್ನು ಹೊಂದಿರುವವರು ಹೊರತುಪಡಿಸಿ. ಈ ಸಂದರ್ಭದಲ್ಲಿ, ಒಪ್ಪಂದವನ್ನು ಅದರ ಪದದ ಅಂತ್ಯಕ್ಕೆ ತರಲಾಗುತ್ತದೆ."

ಮುಸ್ಲಿಮರಿಗೆ ಅಲ್ಲಾರಿಂದ ಸುವಾರ್ತೆಯನ್ನು ಕೊಡಲ್ಪಟ್ಟಿದೆ ಈ ಅಯಾತ್ (2: 114) ಎಂದು ಹೇಳಲಾಗುತ್ತದೆ – ಅವರು ಅಲ್–ಮಸೀದಿ ಅಲ್–ಹರಾಮ್ ಮತ್ತು ಎಲ್ಲಾ ಮಸೀದಿಗಳನ್ನು ಸ್ವಾಧೀನಪಡಿಸಿಕೊಳ್ಳಲು ಮತ್ತು ವಿಗ್ರಹಕಾರರನ್ನು ಅವಮಾನಿಸುವಂತೆ ಮಾಡುತ್ತದೆ. ಸದರಿ ಅಯಾತ್ ತಿಳಿಸಿದಂತೆ ಆಕ್ಷಣದಿಂದ ವಿಗ್ರಹಾರಾಧಕನು, ಇಸ್ಲಾಂ ಧರ್ಮವನ್ನು ತಬ್ಬಿಕೊಳ್ಳದ ಹೊರತು, ಅಥವ ಕೊಲಲ್ಪಡುತ್ತೇನೆಂಬ ಬಯದಿಂದ ಹೊರತು ಮನೆ ಪ್ರವೇಶಿಸುವಂತಿಲ್ಲ, ಅಲ್ಲಾ ಈ ಭರವಸೆಯನ್ನು ನೆರವೇರಿಸಿದರು ಮತ್ತು ನಂತರ ವಿಗ್ರಹಕಾರರನ್ನು ಅಲ್–ಮಸೀದಿ ಅಲ್–ಹರಾಮ್ಗೆ ಪ್ರವೇಶಿಸಲು ಅನುಮತಿಸುವುದಿಲ್ಲ ಎಂದು ಆದೇಶಿಸಿದರು."

ಅಂದರೆ ಇವರ ಪ್ರಕಾರ ಇವರ ಶಾಂತಿ ಸಾರುವ ಮತ ಇನ್ನೊಬ್ಬರ ನಂಬಿಕೆಗಳನ್ನು ಹಾಳು ಮಾಡಲು ಪ್ರೇರೇಪಿಸುತ್ತದೆ. ಇನ್ನೊಬ್ಬರ ದೇವಾಲಯಗಳನ್ನು ಧ್ವಂಸಗೊಳಿಸಲು ಪ್ರೇರೇಪಿಸುತ್ತದೆ. ಇಂತಹ ಬೋದನೆ ಇರುವ ಖುರಾನ್ ಮೂಲವೇ ಸಂವಿಧಾನ ಬದ್ದವಾಗಿದೆ ಎಂದು ಹೇಗೆ ತಾನೆ ಹೇಳುವುದು. ಇದು ಅಂದಿನ ಕಾಲಕ್ಕೆ ಎನ್ನುವವರಿದ್ದಾರೆ. ಅಂದಿನ ಕಾಲಕ್ಕಾದರೇ ನೀವು ಇನ್ನು ಅಂದಿನ ಕಾಲದ ಆದೇಶಗಳನ್ನು ಇಂದಿಗೂ ಏಕೆ ಜೀವಂತ ಇಟ್ಟಿದ್ದೀರಿ ? ಏಕೆ ಇಂದಿಗೂ ಮಸೀದಿ ಮದರಸಾಗಳಲ್ಲಿ ಭೋದಿಸುತ್ತಿದ್ದೀರಿ, ಸಂವಿಧಾನವನ್ನು ಒಪ್ಪಿಕೊಂಡು ಅದರಲ್ಲಿನ ಎಲ್ಲಾ ಸವಲತ್ತುಗಳನ್ನು ಪಡೆಯುವಾಗ, ಅಂತಹ ಸಂವಿಧಾನದ ಆಶಯಗಳಿಗೆ ವಿರುದ್ದವಾಗಿರುವ ನಿಮ್ಮ ಧರ್ಮ ಬೋದನೆಗಳ ಬಗ್ಗೆ 1400 ವರ್ಷಗಳ ನಂತರವೂ ಸಮಾಜಸುಧಾರಕ ಪ್ರಯತ್ನವೇಕೆ ಜರುಗಿಲ್ಲ. ಅಂತಹ ಅವಶ್ಯಕತೆ ಇಲ್ಲ ನಾವು 1400 ವರ್ಷದ ಹಿಂದೆಯೇ ಇರುತ್ತೇವೆ ಅನ್ನುವ ದೋರಣೆಯೇ?

**ಇಸ್ಲಾಮ್ ಚರಿತ್ರೆ ಹಿಂದೆ ಯಹೂದಿಯರ ದೇವರು ಮತ್ತು ಪ್ರವಾದಿಗಳ ಅನುಕರಣೆ**

ಇಸ್ಲಾಮ್ ಮತವು ಯಾವ ಕಾಲದಲ್ಲಿ ಉದಯವಾಯಿತು ಅದರ ಮಹಾ ಪೋಷಕನ ಕಾಲದಲ್ಲಿ ಇದ್ದ ಪರಿಸ್ಥಿತಿ ಏನು ಎಂಬುದರ ಬಗ್ಗೆ ಅವಲೋಕಿಸೋಣ. ಇಸ್ಲಾಮ್ ಮತ ಸ್ಥಾಪಕರು ಪ್ರವಾದಿ ಮಹಮದ್ ಪೈಗಂಬರ್ ಎನ್ನುವುದರಲ್ಲಿ ವಿವಾದವಿಲ್ಲ. ಮೊಹಮ್ಮದ್ ಇಸ್ಲಾಮ್ ಮತದ ಏಕೈಕ ದೇವರಾದ ಅಲ್ಲಾಹರ ಸಂದೇಶವಾಹಕರು ಮತ್ತು ಆತನ ಸೇವಕರು ಎಂದು ಖುರಾನಿನಲ್ಲೇ ಚಿತ್ರಿಸಲಾಗಿದೆ. ಖುರಾನ್ ವ್ಯಾಖ್ಯಾನಕಾರರ ಪ್ರಕಾರ ಮೊಹಮ್ಮದ್ ಕೊನೆಯ ಮತ್ತು ಅಂತಿಮ

ಪ್ರವಾದಿ. ಖುರಾನ್ ಅಂತಿಮ ಗ್ರಂಥ. ಸದರಿ ಖುರಾನನ್ನು ಜಗತ್ತಿನ ಎಲ್ಲರೂ ಒಪ್ಪುವ ವರೆಗೂ ಅದರ ಅನುಯಾಯಿಗಳು ಶ್ರಮಿಸಬೇಕು ಎನ್ನುವ ಮೂಲಭೂತ ಭೋದನೆ ಇರುವ ಗ್ರಂಥ. ಖುರಾನ್ ಪ್ರಕಾರ ದೇವರ ಹೆಸರು 'ಅಲ್ಲಾಹ' ಅವನೊಬ್ಬನೆ ದೇವರು ಬೇರೆ ದೇವರಿಲ್ಲ.

ಇದನ್ನು ಅರ್ಥ ಮಾಡಿಕೊಳ್ಳಬೇಕಾದರೆ ಜಗತ್ತಿನ ಅನೇಕ ಭಾಷೆಯಲ್ಲಿ ದೇವರು ಎಂದರೆ ಏನೆಂದು ಕೂಗುತ್ತಾರೆ ಗಮನಿಸಿ:-

| ಬಾಷೆ | ದೇವರ ಹೆಸರು | ಬಾಷೆ | ದೇವರ ಹೆಸರು |
|---|---|---|---|
| ಹೆಬ್ರು | ಈಲೋಹಿಮ್/ ಈಲ್ | ಆಂಗ್ಲ | ಗಾಡ್ |
| ಫ್ರೆಂಚ್ | ಡಿಯ್ಯ್ಯ | ಜೆರ್ಮನ್ | ಗಾಟ್ |
| ಗ್ರೀಕ್ | ಥೆಯುಸ್ | ಇಂಡೋನೇಷ್ಯ | ಅಲ್ಲಾಹ್ |
| ಐರಿಷ್ | ದಿಯಾ | ಇಟಲಿ | ದಿಯೊ |
| ಲ್ಯಾಟಿನ್ | ದಿಯೊಸ್ | ನಾರ್ವೆ | ಗುಡ್ |
| ಪೋಲಿಷ್ | ಬೊಗ್ | ರಷ್ಯ | ಗೊರ್ |
| ಸೊಮಾಲಿ | ಇಯಾಹ್ | ಸುಂಡಾನೀಸ್ | ಅಲ್ಲಾಹ್ |
| ಟರ್ಕಿಶ್ | ತನ್ರಿ | ಕನ್ನಡ | ದೇವ/ ದೇವರು |
| ಅರೆಬ್ಬಿ | ಅಲ್ಲಾಹ್ | ಪಂಜಾಬಿ | ದೇವತ |
| ಬೆಂಗಾಲಿ | ದೇಬತ | ಚೈನಾ | ಶೆನ್ |
| ಗುಜರಾತಿ | ಭಗವಾನ / ದೇವ | ಮಲೆಯಾಳಂ | ದೈವಮ್ |
| ಮರಾಠಿ | ಜಗನ್ನಿಯಂತ/ ದೇವ | ನೇಪಾಳಿ | ಬಗವಾನ್ |
| ಮೈನ್ಮಾರ್ (ಬರ್ಮೀಸ್) | ಭುರರ್ ಸಿಹಿಕ್ | ವಿಯೆಟ್ನಾಮ್ | ಥುಆಂಗ್ ದೇ |
| ಉರ್ದು | ಖುದಾ | ತಮಿಳು | ತೇವನ್ |
| ತೆಲುಗು | ದೇವುಡು | ಕೊರಿಯಾ | ಹನನಿಮ್ |
| ಮಂಗೋಲಿಯನ್ | ಬುರ್ಕಾನ್ | ಜಪಾನಿ | ಕಾಮಿ |

| ಜೆಕೋಸ್ಲವಾಕಿಯಾ | ಬೂಹ್ | ಚಿಚೇವ | ಮುಲುಂಗು |
|---|---|---|---|
| ಅಮಹಾರಿಕ್ | ಇಜಿಝಿ ಅಬಿಹೆರಿ | ಅರ್ಮೇನಿಯನ್ | ಅಸ್ತವತ್ಸ್ |
| ಅಝುರ್ಬೈಜಾನಿ | ಅಲ್ಲಾಹ್ | ಜಾರ್ಜಿಯನ್ | ಘರ್ಮೇರ್ತಿ |
| ಮಾಲ್ತೀಸ್ | ಅಲ್ಲಾ | ಮಲ್ಯೈ | ತುಹಾನ್ |
| ಲಿಥುಆನಿಯನ್ | ದೈವಾಸ್ | ಖುರ್ದಿಶ್ | ಕ್ವೈಡೆ |
| ಖ್ಮೇರ್ | ಪ್ರಿಯಹ್ | ಕಜಾಕ್ | ಖುದೆ |
| ಜವಾನೀಸ್ | ಪೆಂಗೆರಾನ್ | ಹಂಗೆರಿ | ಇಸ್ತಾನ್ |
| ಹವೈಆನ್ | ಕೇ ಅಕುವಾ | ಪೋರ್ಚುಗೀಸ್ | ದಿಯೂಸ್ |

ದೇವರನ್ನು "ದೇವರೆ" ಎಂದು ಕೂಗುವ ವಿಧಾನ ಬಾಷೆಗೊಂದರಂತೆ ಇರುವಾಗ ಸುಮಾರು 4200[16] ಮತಗಳು ಈ ಜಗತ್ತಿನಲ್ಲಿ ಇರುವಾಗ, 100 ಕ್ಕೂ ಹೆಚ್ಚು ಸಂಪರ್ಕಿಸಲಾಗದ ಬುಡಕಟ್ಟು ಜನಾಂಗಗಳಿರುವಾಗ, ಯುನೈಟೆಡ್ ನೇಷನ್ಸ್ ಅಂದಾಜಿನ ಪ್ರಕಾರ 37 ಕೋಟಿ ಜನ 90 ದೇಶದಲ್ಲಿ ಬುಡಕಟ್ಟು ಜನಾಂಗ ವಾಸವಾಗಿದ್ದಾರೆ, ಅವರು ಪ್ರಪಂಚದ ಜನಸಂಖ್ಯೆಯಲ್ಲಿ ಶೇಖಡ 5% ಇದ್ದಾರೆ. ಜಗತ್ತಿನ 7000 ಬಾಷೆಗಳಿವೆ ಮತ್ತು 5000 ಸಂಸ್ಕೃತಿಗಳಿವೆ.[17] ಇದರಲ್ಲಿ ಬರೀ 50 ಭಾಷೆಯಲ್ಲಿ ದೇವರ ಹೆಸರನ್ನು ವಿಭಿನ್ನತೆಯಲ್ಲಿ ಕೂಗುತ್ತಾರೆ. ಅಂದರೆ ಇನ್ನು ಸುಮಾರು 6950 ಭಾಷೆಯಲ್ಲಿ ಹೇಗೇಗೆ ಕೂಗ ಬಹುದು ಯೋಚಿಸಿ. 4200 ಮತಗಳಲ್ಲಿ ಎಷ್ಟು ದೇವರಿದ್ದಾವೆ.

**ಹಿಂದು ವೇದಗಳ ಉಲ್ಲೇಕದ ಪ್ರಕಾರ ದೇವರು ಒಬ್ಬನೆ:-**

**ಯಜುರ್ವೇದ 40:8**

स पर्य्यगाच्छुक्रमकायमव्रणमास्नाविरँ शुद्धमपापविद्धम् । कविर्मनीषी परिभूः स्वयम्भूर्याथातथ्यतोऽर्थान् व्यदधाच्छाश्वतीभ्यः समाभ्यः॥ यजु० ४०.८॥

"ದೇವರು ಸರ್ವಶ್ರೇಷ್ಠ, ಸರ್ವಶಕ್ತನಾಗಿದ್ದು, ಯಾವುದೇ ವೈಫಲ್ಯವಿಲ್ಲದೆ, ಮೂರ್ತರೂಪವಿಲ್ಲದೆ, ಶುದ್ಧ ಪಾಪರಹಿತ, ಕಾಲ್ಪನಿಕ ಕಾವ್ಯಾತ್ಮಕ ಸೃಷ್ಟಿಕರ್ತ ಮತ್ತು ಸರ್ವಜ್ಞ, ಎಲ್ಲರ ಹೃದಯ ಮತ್ತು ಮನಸ್ಸಿನಲ್ಲಿ ಅಸ್ತಿತ್ವದಲ್ಲಿರುವವನು, ಅತೀಂದ್ರಿಯನು,

---

[16]https://en.wikipedia.org/wiki/List-of-religions-and-spiritual-traditions

[17]https://www.un.org/development/desa/indigenouspeoples/mandated-areas1/culture.html

ಸ್ವಯಂ ಅಸ್ತಿತ್ವದಲ್ಲಿರುವವನು, ಯಾರು ಅನಂತತೆಯ ಅನಂತ ವಯಸ್ಸು ಸೃಷ್ಟಿಸುವ, ಅಸ್ತಿತ್ವದ ಎಲ್ಲಾ ರೂಪಗಳನ್ನು ಸಂಘಟಿಸುವವ, ಬಹಿರಂಗಪಡಿಸುವವ ಮತ್ತು ಎಲ್ಲಾ ವಿದಗಳ ಇರುವಿಕೆಯನ್ನು ಹೇಗೆದ್ದಾವೋ ಹಾಗೆ ಮತ್ತು ಹೇಗಿರಬೇಕೋ ಹಾಗೆ ಉಳಿಸುವವ."

ಋಗ್ ವೇದ 6:45:16 ರಲ್ಲಿ (ದೇವನೊಬ್ಬನೆ ಎನ್ನುತಾರೆ)

य एक इत तमु षटुहि कर्ष्टीनां विचर्षणिः ।पतिर्जज्ञे वर्षक्रतुः ॥

(ಎಲ್ಲೈ ಸ್ತೋತೃವೇ– ಸ್ತುತಿಸುವವನೆ) ಎಲ್ಲವನ್ನೂ ನೋಡಬಲ್ಲವನು ವೃಷ್ಟಿಕರ್ಮವುಳ್ಳವನೂ ಆದ ಯಾವ ದೇವನು ಅದ್ವಿತೀಯನಾಗಿ ಪ್ರಜೆಗಳಿಗೆಲ್ಲಾ ಒಡೆಯನಾಗಿ ಉತ್ಪನ್ನನಾದನೋ ಅದೇ ಅವನನ್ನು ಸ್ತುತಿಸು.

ಅಥರ್ವ ವೇದ 2:2:1 ಮತ್ತು 2 (ಏಕ ದೇವರು ಪ್ರಪಂಚಕ್ಕೆ)

**दिव्यो गन्धर्वो भुवनस्य यस्पतिरेक एव नमस्यो विक्ष्वीड्यः ।**
**तं त्वा यौमि ब्रह्मणा दिव्य देव नमस्ते अस्तु दिवि ते सधस्थम् ॥१ ॥**

"ಪ್ರಪಂಚದ ದೇವರು, ದೈವಿಕ ಗಂಧರ್ವ, ಅವನು ಏಕ ಮಾತ್ರ ಲೋಕದಲ್ಲಿ ಗೌರವಿಸಿ ಪೂಜಿಸಲಾಗುತ್ತದೆ. ಆಕಾಶ ದೇವರೇ, ನನ್ನ ಮಂತ್ರದೊಂದಿಗೆ ವೇಗವಾಗಿ ನಾನು ನಿನ್ನನ್ನು ಹಿಡಿದಿರುತ್ತೇನೆ. ನಿನಗೆ ಆರಾಧಿಸುತ್ತೇನೆ, ನಿನ್ನ ಮನೆ ಸ್ವರ್ಗದಲ್ಲಿದೆ."

**दिवि स्पृष्टो यजतः सूर्यत्वगवयाता हरसो दैव्यस्य ।**
**मृडाद् गन्धर्वो भुवनस्य यस्पतिरेक एव नमस्यः सुशेवाः ॥२ ॥**

"ಆಕಾಶ ತಲುಪುವ, ಪ್ರಕಾಶಮಾನವಾಗಿ ಸೂರ್ಯನಂತೆ, ಪವಿತ್ರ, ಯಾರು ನಮ್ಮಲ್ಲಿ ದೇವರುಗಳ ಅತೃಪ್ತಿ ನಿವಾರಿಸುತ್ತಾನೋ, ಪ್ರಪಂಚದ ಒಡೆಯನೇ, ಗಂಧರ್ವನೇ ನನ್ನ ಅನುಗ್ರಹಿಸು, ಸ್ನೇಹದ ದೇವರಾದ ಅವನನ್ನು ಮಾತ್ರ ಪೂಜಿಸಬೇಕು."

ಋಗ್ವೇದ 1:164:46

इन्द्रं मित्रं वरुणमग्निमाहुरथो दिव्यः स सुपर्णो गरुत्मान् ।
एकं सद्विप्रा बहुधा वदन्त्यग्निं यमं मातरिश्वानमाहुः॥ ऋ० १.१६४.४६॥

ಒಬ್ಬನೇ ಆದಿತ್ಯನನ್ನು ಅವರು ಇಂದ್ರ, ಮಿತ್ರ, ವರುಣ, ಅಗ್ನಿ ಎಂದು ಕರೆಯುತ್ತಾರೆ, ಮತ್ತು ಅವರು ಸ್ವರ್ಗದ ಶ್ರೀಗಂಡದ (ಗರುಡ ಪಕ್ಷಿಗೆ ಸಂಬಂಧಿಸಿದ) ಶ್ರೇಷ್ಠ ರೆಕ್ಕೆಯವರು, ಆ ಒಬ್ಬನಿಗೆ, ಅಗ್ನಿಯೆಂದು, ಯಮನೆಂದು, ವಾಯುವೆಂದು ಮುನಿಗಳು ಬಹಳ ಹೆಸರುಗಳನ್ನು ಕೊಟ್ಟರು."

ಋಗ್ವೇದ 10:114:5 (ಒಬ್ಬನೇ ದೇವರು)

सुपर्णं विप्राः कवयो वचोभिरेकं सन्तं बहुधा कल्पयन्ति॥
ऋ० १०.११४.५॥

ಕಲಿತ ಮತ್ತು ಬುದ್ಧಿವಂತರು ಅಸ್ತಿತ್ವದಲ್ಲಿರುವ ಒಬ್ಬನೇ ದೇವರನ್ನು ಅನೇಕ ಮುಖಭಾವದ ರೂಪಗಳಲ್ಲಿ ವಿವರಿಸಿದರು.

ಋಗ್ವೇದ 10:82:3 (ಅವನೊಬ್ಬನೇ ವಾಸ್ತವಿಕನು)

यो न पिता जनिता यो विधाता, धामानि वेद भुवनानि विश्वा।
यो देवाना नामधा एक एव तं संप्रश्नं भुवना यन्त्यन्या॥ ऋ० १०.८२.३॥

"ನಮ್ಮ ತಂದೆಯೇ ಯಾರು ಎಲ್ಲಾ ದೇವರ ರಚಿಸಿದವನು ಮತ್ತು ಅವನು ಕ್ರಮವಾಗಿ ಇಡುವವನು, ಅಸ್ತಿತ್ವದಲ್ಲಿರುವ ಎಲ್ಲಾ ಲೋಕಗಳು ಮತ್ತು ಎಲ್ಲಾ ವಿಷಯಗಳು ತಿಳಿದಿರುವವನು; ಅವರು ಒಂದೇ ಒಂದು ವಾಸ್ತವಿಕದವನು, ಎಲ್ಲಾ ದೇವತೆಗಳ ಹೊಳೆಯುವ ವಸ್ತುಗಳ ಹೆಸರು ನೀಡುವವನು – ಅವನನ್ನು ಮಾತ್ರ ಇತರ ಜೀವಿಗಳು ಹೊಂದುತ್ತಾರೆ, ಅವರು ನಮ್ಮ ಎಲ್ಲಾ ವಿಚಾರಣೆಗಳ ಏಕೈಕ ಪರಿಹಾರವಾಗಿದೆ."

ಋಗ್ವೇದ 10:81:3 (ಏಕೈಕ ದೇವರು)

विश्वतश्चक्षुरुत विश्वतोमुखो विश्वतो बाहुरुत विश्वतस्पात्।
सं बाहुभ्यां धमति सं पतत्रैर्द्यावाभूमी जनयन्देव एकः॥ ऋ० १०.८१.३॥

"ಎಲ್ಲಾ ಕಡೆಗಳಲ್ಲಿ ಕಣ್ಣುಗಳನ್ನು ಹೊಂದಿದವನು, ಎಲ್ಲಾ ಕಡೆಗಳಲ್ಲಿ ಬಾಯಿ ಹೊಂದಿದವನು, ಎಲ್ಲಾ ಬದಿಗಳಲ್ಲಿಯೂ ಕೈ ಕಾಲುಗಳನ್ನು ಹೊಂದಿದವನು, ಅವನು, ಏಕೈಕ ದೇವರು, ಭೂಮಿಯನ್ನು ಮತ್ತು ಸ್ವರ್ಗವನ್ನು ಉತ್ಪಾದಿಸುತ್ತಾನೆ, ಅವುಗಳನ್ನು ಅವರ ಕೈಗಳನ್ನು ರೆಕ್ಕೆಗಳಂತೆ ಒಟ್ಟಾಗಿ ಬೆರೆಸುತ್ತಾನೆ."

ಋಗ್ ವೇದ 1.139.11 "ಎಲೈ ದೇವತೆಗಳೇ, ನೀವು ದ್ಯುಲೋಕದಲ್ಲಿ ಹನ್ನೊಂದು ಸಂಖ್ಯೆಯುಳ್ಳವರಾಗಿಯೂ, ಪೃಥ್ವಿಯ ಮೇಲೆ ಹನ್ನೊಂದು ಸಂಖ್ಯೆಯುಳ್ಳವರಾಗಿಯೂ, ಅಂತರಿಕ್ಷವಾಸಿಗಳಾಗಿ ಹನ್ನೊಂದು ಸಂಖ್ಯೆಯುಳ್ಳವರಾಗಿಯೂ ಇದ್ದೀರಿ. ಇವೆಲ್ಲವೂ ನಿಮ್ಮ ಮಹಾತ್ಮ್ಯವನ್ನು ತೋರಿಸುತ್ತವೆ, ನೀವೆಲ್ಲರೂ ಸೇರಿಕೊಂಡು ಬಂದು ನಮ್ಮ ಈ ಯಜ್ಞವನ್ನು ಸೇವಿಸಿರಿ." – ये देवासो दिव्य एकादश सथ पर्थिव्याम अध्य एकादश सथ। अप्सुक्षितो महिनैकादश सथ ते देवासो यज्ञम इमं जुषध्वम॥

ಮುಕ್ಕೋಟಿ ದೇವರು 33 ಕೋಟಿ ದೇವರು ಎಂಬುದೆಲ್ಲಾ ಹಿಂದುಗಳನ್ನು ದಿಕ್ಕು ತಪ್ಪಿಸಲು ಮಾಡಿದ ಕಾರ್ಯಗಳಾಗಿದ್ದು, ಒಂದೊಂದು ಮಹಾತ್ಮೆಯನ್ನು ಸೂಚಿಸುವ ಹೆಸರುಳ್ಳ ದೇವರುಗಳು ಎಂದು ಋಗ್ವೇದ ಹೇಳುತ್ತೆ ಹೊರತು ದೇವನೊಬ್ಬನೆ ಎನ್ನುವ ಬೇರೆ ಶ್ಲೋಕಗಳಿಗೆ ವ್ಯತಿರಿಕ್ತವಾಗಿ ಹೇಳುವುದಿಲ್ಲ. ಶತಪಥ

ಬ್ರಾಹ್ಮಣದಲ್ಲಿನ ವಿವರಣೆಯಂತೆ 33 ದೇವತೆಗಳು ಎಂದರೆ 8 ವಸುಸ್ (1. ಬಿಸಿಯಾದ ಅಂತರಿಕ್ಷ ದೇಹಗಳು, 2. ಗ್ರಹಗಳು, 3. ವಾಯುಮಂಡಳಗಳು 4. ಅತಿದೊಡ್ಡದಾದ ಪ್ರಪಂಚ 5. ಸೂರ್ಯ 6. ಅಲೌಕಿಕ ಅಂತರಿಕ್ಷದ ಕಿರಣಗಳು 7. ಉಪಗ್ರಹಗಳು 8. ನಕ್ಷತ್ರಗಳು) 11 ರುದ್ರ ( ಮನುಜನಲ್ಲಿರುವ ಹತ್ತು ಪ್ರಾಣ ವಾಯುಗಳು – ಪ್ರಾಣ,(ಹುಸಿರಾಟದ ವಾಯು) ಅಪಾನ (ದ್ರವರೂಪದ ವಾಯು, ಮಲಮೂತ್ರ) ಉದಾನ (ಮಾತಿನ ವಾಯು) ಸಮಾನ (ದೇಹ ಶಕ್ತಿ ರೂಪದ ವಾಯು ಜೀರ್ಣ ಕ್ರಿಯೆ ಇತ್ಯಾದಿ) ವ್ಯಾನ (ದೇಹ ಪೂರ್ತಿ ರಕ್ತದಲ್ಲಿ ಆಮ್ಲಜನಕ ಪಸರಿಸುವ ವಾಯು), ಎರಡನೇ ದರ್ಜೆಯದ್ದು ನಾಗ (ಒಟ್ಟೆ ಉಬ್ಬರ) ಕುರ್ಮಾ (ಸೈನಸ್ ವಾಯು) ತ್ರಕರ (ಕಣ್ಣು ಮಿಟುಕಿಸಲು ಸಹಾಯಕ) ದೇವದತ್ತ (ಅಕಳಿಕೆ) ದನಂಜಯ (ದೇಹ ಬಾಗ ತಿರುಚಿಕೊಳ್ಳುವುದು) + ಆತ್ಮ ಸೇರಿ ಹನ್ನೊಂದನ್ನು ರುದ್ರ ದೇವರು ಎನ್ನಲಾಗಿದೆ. 12 ಅಧಿತ್ಯಗಳು ಇವು ಸೂರ್ಯನ 12 ತಿಂಗಳು ಕಾಲವನ್ನು ನಿರ್ದರಿಸುವುದು, ಇಂದ್ರ ಎಲ್ಲದರಲ್ಲೂ ವ್ಯಾಪಿಸುವ ವಿದ್ಯುತ್ ಶಕ್ತಿ, ಪ್ರಜಾಪತಿ ಯಜ್ಞವು (ಬೋಧನೆ ಅಥವಾ ಕಲಿಕೆಯ ಉದ್ದೇಶಕ್ಕಾಗಿ ಇತರ ಜನರೊಂದಿಗೆ ಸಂಬಂಧ ವಿಡುವುದೇ ಯಜ್ಞ). ಇವುಗಳನ್ನು 33 ದೇವರು ಮನುಜನಲ್ಲಿ ಇರುವುದನ್ನೇ ಅವನ ಸುತ್ತಲಿನ ಪರಿಸರವನ್ನೇ ಕುರಿತದ್ದಾಗಿದ್ದು ಅದನ್ನು ತಪ್ಪು ಅರ್ಥೈಸಲಾಗಿದೆ ಎಂದು ನಂಬಬಹುದಾಗಿದೆ.[18]

ಅಂತಹ ದೇವತಾರ್ಥದ ಜೊತೆಗೆ ಬೆಳೆದ ಹಿಂದು ಸಮಾಜದಲ್ಲಿ ಇಂದು, ಇಷ್ಟ ದೇವತೆ, ಗ್ರಾಮ ದೇವತೆ, ಕುಲ ದೇವತೆ, ಕುಲ ಗುರು, ಆರಾಧ್ಯ ದೈವ, ನಂಬಿದ ದೈವ, ಮನೆ ದೇವರು, ರೋಗಗಳನ್ನು ವಾಸಿ ಮಾಡುವ ದೇವರು, ಹೀಗೆ ಪ್ರಪಂಚದ ಮೊದಲ ಧರ್ಮವಾದ ಹಿಂದು ಧರ್ಮದಲ್ಲಿ ಸೃಷ್ಠಿ ಮತ್ತು ಜೀವಾತ್ಮವನ್ನು ಪೂಜಿಸುವ ಬಹುದೇವಾರಾಧಕರಾಗಿ ಬಹುದೇವರು ಬೆಳೆದಿರುವುದರಲ್ಲಿ ಆಶ್ಚರ್ಯವಿಲ್ಲ. ಯಾರು ಏಕ ದೇವರು ಎನ್ನುತ್ತ ಬಹುದೇವರ ಕಡೆ ವಾಲಿದರೋ ಅವರದ್ದೇ ಒಂದು ರೋಚಕ ಉದಯ/ ರೋಚಕ ವಿಸ್ತರಣೆ/ ರೋಚಕ ಗೊಂದಲಗಳು/ ರೋಚಕ ದಾರಿ ತಪ್ಪುವಿಕೆ/ ರೋಚಕ ಅಂತ್ಯಗಳು/ ರೋಚಕ ಪುನರ್ ಸ್ಥಾಪನೆಗಳು/ ರೋಚಕ ಪ್ರವಾದಿಗಳು. ಇದರ ಶೋಧವೆ/ ಪುನರ್ ಪರಿಶೀಲನೆಯೇ ನನ್ನ ಈ ಗ್ರಂಥದ ಮೂಲ ಉದ್ದೇಶ.

---

[18] http://www.vjsingh.info/part12.html

ಇಸ್ಲಾಮ್ ಉದಯವಾಗುವ ಅಂದಿನ ಕಾಲಘಟ್ಟದಲ್ಲಿ ಅದಾಗಲೇ ಯಹೋವ, ಅದಾಮ್, ನೋಹ, ಅಬ್ರಹಾಮ್, ಮೋಸಸ್, ಮೇರಿ, ಜೀಸಸ್, ಇತ್ಯಾದಿ ದೇವರು/ಪ್ರವಾದಿಗಳು ದೇವರ ವಾಣಿಯನ್ನು ಹೊತ್ತು ತಂದು ತಮ್ಮದೇ ಆದ ಸಂದೇಶಗಳನ್ನೊಳಗೊಂಡ ಪಾಲನಾ ಕ್ರಮಗಳಿರುವ ಕಾನೂನುಗಳನ್ನು, ಗ್ರಂಥಘಳನ್ನು ತಮ್ಮ ಹಿಂಬಾಲಕರಿಗೆ ನೀಡಿದ್ದರು ಜಗತ್ತು ಅನೇಕ ರೀತಿಯ ನಂಬಿಕೆಯುಳ್ಳ ಬಹು ಸಂಸ್ಕೃತಿಯಿಂದ ತುಂಬಿ ಹೋಗಿತ್ತು. ಅದು ಇಸ್ಲಾಮ್ ಉದಯವಾದ ಅರೆಬ್ಬಿ ಪ್ರಾಂತದಲ್ಲೂ ಹಾಗೆ ಇತ್ತು.




ಇದು ಅಫ್ಘಾನಿಸ್ತಾನದಿಂದ ಪಾಕಿಸ್ತಾನದ ವರೆಗೆ ಹಿಂದೆ ಇದ್ದ ಯಹೂದಿ ಮರುಭೂಮಿ

ಅರೆಬ್ಬಿ ಪ್ರಾಂತ್ಯವೂ ಮರುಭೂಮಿಯಿಂದ ತುಂಬಿತ್ತು, ಇಸ್ಲಾಮ್ ಬರುವ ಮುಂಚೆ ಅಲ್ಲಿ ಅರಮೈಕ್, ಪರ್ಶಿಯಾ, ಹಿಬ್ರೂ, ಸಿರಿಯಾಕ್, ಅಕ್ಕಾದೀನ್ ಇನ್ನು ಬಹು ಬಾಷೆ ಚಾಲ್ತಿಯಲ್ಲಿ ಇತ್ತು. ಅಲ್ಲಿ ಬಹುಜನರು ಬಹುದೇವಾರಾಧಕರಾಗಿ ಬುಡಕಟ್ಟು ಜನಾಂಗಗಳಾಗಿದ್ದರು, ಅವರಲ್ಲಿ ಖುರೇಶ್, ಅಬ್ದುಲ್ ಖುಯೇಸ್, ಬಹರಾ, ಜುದಾಮ್, ತಾಕೀಫ್, ದಾವ್ಸ್, ಹಿಲಾಲ್, ಜೊತೆಗೆ ಪಗಾಣರು, ಯಹೂದಿಗಳು, ಕ್ರೈಸ್ತ ಮತಾಂತರ ಹೊಂದಿದವರು. ಈ ಕೆಳಗಿನ ಚಿತ್ರ ಅಂತಹ ಜನಾಂಗದ ಪಟ್ಟಿ ಮೆಕ್ಕಾ ಸುತ್ತಲಿನದನ್ನು ತೋರಿಸುತ್ತದೆ.




ಅಂದಿನ ಧಾರ್ಮಿಕ ಅನುಯಾಯತೆಯಲ್ಲಿ ಬಹುದೇವಾರಾದನೆ ಸಾಮಾನ್ಯವಾಗಿತ್ತು, ಇದರಲ್ಲಿ ಅನೇಕ ದೇವರುಗಳನ್ನು ಮತ್ತು ಆತ್ಮಗಳನ್ನು ಆರಾಧಿಸುತ್ತಿದ್ದ ಜನಾಂಗಗಳಿದ್ದರು. ಇದರ ಮದ್ಯೆ ಏಕ ದೇವಾರಾಧಕರಾದ ಜೋರಾಷ್ಟ್ರಿಯನರು, (ಇರಾನ್ ಮೂಲ ಕ್ರಿ.ಪೂ 2000-1001 ರಲ್ಲಿ ಉದಯವಾಗಿರುವವರು) ಇವರ ಮೂಲ ಇರಾನ್, ಇವರನ್ನು ಇಸ್ಲಾಮ್ ಉದಯದ ನಂತರ ಕ್ಷೀಣವಾಗುತ್ತ ಬಂದು ಹಾಲಿ ಭಾರತದಲ್ಲಿ ಮತ್ತು ಇರಾನಿನಲ್ಲಿ ಇದ್ದಾರೆನ್ನಲಾಗಿದೆ. ಇವರು ಏಕ ದೇವಾಪಾಸನೆ ಮಾಡಿದವರಾಗಿದ್ದರು. ಇವರು ಅವೇಸ್ತನ್ ಎಂಬ ದೇವರನ್ನು ಆರಾಧಿಸುತ್ತಿದ್ದರು. ಭಾರತದಲ್ಲಿನ ಪಾರ್ಸಿಗಳು ಅವರೇ, ಆದರೆ ಇವರು ಮತಾಂತರಕ್ಕೆ ವಿರೋದಿಗಳು ಆದರೆ ಝೊರಾಷ್ಟ್ರಿಯನರು ಮತಾಂತರ ಮಾಡುತ್ತಿದ್ದರು. ಇವರು ಸತ್ಯ ಅನ್ವೇಷಕರು. ಇವರೂ ಯಹೂದಿಗಳ ಜುಡಾಯಿಸಮ್ ನಂತೆ ಏಕದೇವೋಪಾಸಕರು. ನಂತರದ ಧರ್ಮವೇ ಯಹೂದಿ, ಅದರ ನಂತರದ ಧರ್ಮವೇ ಕ್ರೈಸ್ತರ ಧರ್ಮ, ಇವುಗಳಿಂದ ಮತ್ತು ಅನೇಕ ಬುಡಕಟ್ಟು ಬಹುದೇವಾರಾಧಕರಿಂದ ತುಂಬಿದ್ದ ಮರಳುಗಾಡಿನ ಪ್ರದೇಶದಲ್ಲಿನ ಅಂದಿನ ಬುಡಕಟ್ಟು ಜನಾಂಗದಲ್ಲಿ ಹೊಡೆದಾಟ ಸಾಮಾನ್ಯವಾಗಿತ್ತು, ಕಾರಣ ಅಲ್ಲಿ ಲಭ್ಯವಿದ್ದ ಅಲ್ಪ ಸಂಪತ್ತುಗಳು. ಹೆಚ್ಚು ಜನಂಖ್ಯೆ ಅವಶ್ಯಕತೆಯು ಸಂತಾನಾಭಿವೃದ್ಧಿಗೆ ಅಲ್ಲ, ತಮ್ಮ ಅಸ್ತಿತ್ವವನ್ನು ಕಾಪಾಡಿಕೊಳ್ಳುವ ಶಕ್ತಿಯಂತೆ ಹೊಂದಲಾಗುವ ಸಮಯ ಅದಾಗಿತ್ತು. ಮಕ್ಕಳಲ್ಲಿಯೇ ಮದುವೆ ಮಾಡಿ ಸಂತಾನವನ್ನು ಹೆಚ್ಚಿಸುವ ಕಾಲ ಘಟ್ಟದ ಚಿಂತನೆ ಅಂದಿಗೆ ಇತ್ತು. ಕೆಲವು ರೂಡಿಗಳಾದ ಮಹಿಳೆಯರಿಗೆ ಅಪ್ರಾಮುಖ್ಯತೆ, ಮಕ್ಕಳು ಹೆರುವುದೇ ಅವರ ಕೆಲಸ, ಮನೆಗೆಲಸ ಮತ್ತು ಕಾಮದ ವಸ್ತುಗಳಾಗಿ ಮಹಿಳೆಯರ ಬಳಕೆ, ಕಣ್ಣಿಗೆ ಕಣ್ಣು ಹಲ್ಲಿಗೆ ಹಲ್ಲು ಎಂಬ ಸೇಡಿನ ಮನೋಭಾವಗಳು,

ರಕ್ತ ಪ್ರತೀಕಾರಗಳು, ಬಹುಪತ್ನಿತ್ವ, ವಿಗ್ರಹಾರಾಧನೆ, ಹಿರಿಯರ ಗೌರವಕ್ಕೆ ತಮ್ಮ ಮನೆಗಳ ಬಳಿಯೇ ಘೋರಿ ಕಟ್ಟಿ ಪೂಜಿಸುವುದು, ಗುಲಾಮಗಿರಿ, ಜೀತಪದ್ಧತಿ, ಹೀಗೆ ಅನೇಕ ಸಂಸ್ಕೃತಿ ಸಂಸ್ಕಾರಗಳು ತಾಂಡವವಾಡುತ್ತಿದ್ದವು. ಮೊಹಮ್ಮದ್ ಮಕ್ಕಾದಲ್ಲಿ ಕ್ರಿ.ಶ ಏಪ್ರಿಲ್ 570 ರಲ್ಲಿ ಜನಿಸಿದ್ದರಂತೆ. ಮೊಹಮ್ಮದ್ ಖುರೈಶ್ ಬುಡಕಟ್ಟು ಜನಾಂಗಕ್ಕೆ ಸೇರಿದವರಾಗಿದ್ದರು. ಈ ಜನಾಂಗದವರು ಅಂದಿನ ಮೆಕ್ಕಾದ ಸಾಹುಕಾರ ಆಡಳಿತಾತ್ಮಕ ಮನೆತನಗಳಾಗಿದ್ದವು. ಈ ಜನಾಂಗವು ಕಾಬಾದಲ್ಲಿನ 360 ವಿಗ್ರಹಗಳನ್ನು ನಿರ್ವಹಿಸುವ ಜವಾಬ್ದಾರಿಯನ್ನು ಹೊಂದಿತ್ತು. ಇವರು ಅಲ್ಲಿನ ಕಾಬಾ ಪ್ರವೇಶ ಶುಲ್ಕವನ್ನು ಪಡೆಯುತ್ತಾ ಅಲ್ಲಿನ ಆಡಳಿತವನ್ನು ಹೊಂದಿದ್ದರು. ಮೊಹಮ್ಮದ್ ತಂದೆಯ ಹೆಸರು ಅಬ್ದುಲ್ಲಾ ಎಂದು – ಅಬ್ದುಲ್ಲಾ ಎಂದರೆ ಅಲ್ಲಾಹನ (ದೇವರ) ಸೇವಕ ಎಂದು ಅನುವಾದಿಸಲಾಗುತ್ತದೆ. ಅಲ್ಲಾಹನು ಚಂದ್ರ ದೇವರಾಗಿದ್ದು ಅದು ಖುರೈಶ್ ಜನಾಂಗದ ಮುಖ್ಯ ವಿಗ್ರಹವಾಗಿತ್ತು.[19] ಅಲ್ಲಾಹನ ಚಿಹ್ನೆ ಅರ್ದಚಂದ್ರಾಕೃತಿ ಇಸ್ಲಾಮಿನ ನಂತರದ ವಿಶ್ವವ್ಯಾಪಿ ಚಿಹ್ನೆಯಾಯಿತು. ಮೊಹಮ್ಮದ್ ತನ್ನ ತಂದೆಯನ್ನು ತಾಯಿಯ ಗರ್ಬದಲ್ಲಿ ಇರುವಾಗಲೇ ಕಳೆದುಕೊಂಡನು, ತಾಯಿಯನ್ನು ಆರು ವರ್ಷದವನಿದ್ದಾಗ ಕಳೆದುಕೊಂಡನು. ನಂತರ ತಾತನ ಬಳಿ ತಂದೆಯ ಸಹೋದರನ ಬಳಿ ಬೆಳೆದನು. ಚಿಕ್ಕಪ್ಪನ ವ್ಯಾಪಾರದಲ್ಲಿ ಊರೂರು ಸುತ್ತುತ್ತ ಅನೇಕರ/ ಅನೇಕ ಸಮುದಾಯಗಳ ಸಂಪರ್ಕಕ್ಕೆ ಬರುತ್ತಿದ್ದನು. ತನ್ನ ವೃತ್ತಿಯಲ್ಲಿ ಪ್ರಾಮಾಣಿಕತೆಯಿಂದ ಹೆಸರು ಮಾಡಿದ್ದನು. ಅತ ಖಹದೀಜ ಅನ್ನುವ ಮಹಿಳೆಯ ಬಳಿ ಕೆಲಸದಲ್ಲಿದ್ದನು. ಆಕೆ ವಿಚ್ಛೇದನ ಹೊಂದಿರುವ ಮಹಿಳೆ ಮಕ್ಕಳನ್ನು ಹೊಂದಿದ್ದಳು. ಆಕೆಯ 40 ರ ವಯಸ್ಸಿನಲ್ಲಿರುವಾಗ ಮೊಹಮ್ಮದ್ 25 ರಲ್ಲಿ ಇದ್ದನು, ಇಬ್ಬರ ಮದುವೆ ಆಯಿತು. ಮೊಹಮ್ಮದ್ ಮೆಕ್ಕಾ ಹತ್ತಿರದ ಮೌಂಟ್ ಹಿರಾ ಎಂಬ ಬೆಟ್ಟದ ಗುಹೆಗಳಲ್ಲಿ ತಮ್ಮ 40 ರ ವಯಸ್ಸಿನಲ್ಲಿ ಧ್ಯಾನವನ್ನು ಮಾಡುತ್ತಿದ್ದರು. ಆಗ ಇವರಿಗೆ ಗೇಬ್ರಿಯಲ್ ಎಂಬ ದೇವದೂತ ಖುರಾನ್ ಓದಿ ಮೊದಲಿಗೆ ತಿಳಿಸಿರುವುದೆಂತಲೂ ಅದು ಅಲ್ಲಾಹರು ನೇರವಾಗಿ ತಿಳಿಸಿಲ್ಲವಾದರೂ ತಮ್ಮ ದೇವತೆ ಗೇಬ್ರಿಯಲ್ ಮುಖೇನ ಪ್ರವಾದಿ ಮೊಹಮ್ಮದರಿಗೆ ತಿಳಿಸಿರುವುದೆಂತಲೂ ನಿರ್ವಿವಾದಿತವಾಗಿರುತ್ತದೆ. ಇದು 22 ವರ್ಷ ಕಾಲ ಪ್ರವಾದಿಯವರಿಗೆ ಇಳಿಸಿಕೊಟ್ಟ ಖುರಾನ್ ಸಂದೇಶವಾಗಿರುತ್ತದೆ. ಪ್ರವಾದಿಯವರು ತಪ್ಪಸಿನಲ್ಲೇ ಈ ಎಲ್ಲಾ ಸಂದೇಶವನ್ನು ಪಡೆದಿರುವುದಿಲ್ಲ. ಪ್ರವಾದಿಯವರ ಕನಸ್ಸಿನಲ್ಲಿ ಬಂದದ್ದು ದೇವತೆ (ಏಂಜಲ್) ಹೇಳಿದ್ದು ಎಂದು ಹೀಗೆ

---

[19] https://en.wikipedia.org/wiki/Allah-as-a-lunar-deity

ಖುರಾನಿನಲ್ಲಿ ಹೇಳಲಾಗಿದೆ. ಎಲ್ಲಿಯೂ ಇದು ಪ್ರವಾದಿ ಹೇಳಿದ್ದು/ ಅಲ್ಲಾಹ ಪ್ರವಾದಿಗೆ ನೇರವಾಗಿ ಹೇಳಿದ್ದು ಎಂದು ಇಲ್ಲ. ಮೊದಲಿಗೆ ಅಲ್ಲಾಹನ ದೇವತೆಗೆ ಸಂದೇಶವಾಹಕರಾಗಿ ಸೇವಕರಾಗಿ ಇದ್ದ ಪ್ರವಾದಿ ಮೊಹಮ್ಮದ್ ರವರು ಅಲ್ಲಾಹ ಬಿಟ್ಟರೆ ನಂತರದ ಸ್ಥಾನಕ್ಕೆ ಬರುವುದನ್ನು ಖುರಾನಿನಲ್ಲಿ ಗಮನಿಸಬಹುದಾಗಿದೆ. ಖುರಾನಿನ 16:49 ರಲ್ಲಿ ದೇವತೆಗಳು (ಗೇಬ್ರಿಯಲ್ ಸಮಾನರು) ಭೂಮಿಯಲ್ಲಿನ ವಾಸಿಗಳು ಎಂದು ಚಿತ್ರಿಸಲಾಗಿದೆ. 16:49. ಹೀಗೆಂದಿದೆ "ಆಕಾಶಗಳಲ್ಲಿ ಇರುವ ಎಲ್ಲವೂ ಮತ್ತು ಭೂಮಿಯಲ್ಲಿರುವ ಎಲ್ಲ ಜೀವಿಗಳು ಹಾಗೂ ಮಲಕ್‌ಗಳು (ಎಂಜಲ್ಸ್) (ದೇವತೆ) (ಅರಬ್ಬಿಯಲ್ಲಿ ಮಲಾಯಿಕತು) ಅಲ್ಲಾಹನಿಗೇ ಸಾಷ್ಟಾಂಗ ವೆರಗುತ್ತಾರೆ ಮತ್ತು ಅವರು ಅಹಂಕಾರ ತೋರುವುದಿಲ್ಲ." – ಅಲ್ಲಿಗೆ ದೇವತೆಗಳು ಭೂಮಿಯಲ್ಲಿ ಇರುವವರು ಎಂದಾಯಿತು. ಖುರಾನ್ 16: 2. ರಲ್ಲಿ "ನನ್ನ ಹೊರತು ಬೇರೆ ಯಾರೂ ಪೂಜಾರ್ಹರಲ್ಲ ನನಗೆ ಮಾತ್ರ ಅಂಜಿರಿ" – ಎಂದು (ಜನರನ್ನು) ಎಚ್ಚರಿಸಲಿಕ್ಕಾಗಿ ಅವನು ತನ್ನ ಆದೇಶದಂತೆ ದಿವ್ಯವಾಣಿಯನ್ನು ಕೊಟ್ಟು, ತನ್ನ ದಾಸರ ಪೈಕಿ ತಾನಿಚ್ಛಿಸಿದವರ ಬಳಿಗೆ, ಮಲಕ್‌ಗಳನ್ನು (ದೇವತೆಗಳನ್ನು) ಇಳಿಸಿಕೊಡುತ್ತಾನೆ. ಖುರಾನ್ 2:98 ರಲ್ಲಿ ಗೇಬ್ರಿಯಲ್ ಮತ್ತು ಮಿಕೇಲ್ ಎಂಬ ದೇವತೆಗಳ ಬಗ್ಗೆ ಉಲ್ಲೇಕವಿದೆ. ಅಲ್ಲಾಹರು ಪ್ರವಾದಿ ಮೊಹಮ್ಮದ್ ಜೊತೆ ಮಾತನಾಡಿರುವ ಬಗ್ಗೆ ಖುರಾನಿನಲ್ಲಿ ಉಲ್ಲೇಕವಿಲ್ಲ. ಆದರೆ ಖುರಾನ್ 4:164 ರಲ್ಲಿ ಮೋಸಸ್ ರವರೊಡನೆ ಅಲ್ಲಾಹರು ಹಿಂದೆ ನೇರವಾಗಿ ಮಾತನಾಡಿದ್ದರು ಎಂದು ಬರೆಯಲಾಗಿದೆ. (ಮೋಸಸ್ ಯಹೂದಿಗಳ ಪ್ರವಾದಿ) ಮುಸ್ಲಿಮರ ಪ್ರಕಾರ ಇವರು ಮೊಹಮದ್ ನಾಲ್ಕನೇಯ ಪ್ರವಾದಿ ಮತ್ತು ಕೊನೆಯ ಪ್ರವಾದಿಯಂತೆ, ಇವರ ಮೊದಲಿನ ಪ್ರವಾದಿಗಳು ಅಬ್ರಹಾಮ್ ನಂತರ ಮೋಸಸ್ ನಂತರ ಜೀಸಸ್ ನಂತರ ಮೊಹಮದ್, ಎಲ್ಲರೂ ಏಕದೇವೋಪಾಸಕರು ಅಲ್ಲಾಹನ ಪ್ರವಾದಿಗಳು ಎಂದು ಮುಸ್ಲಿಮರು ವಾದಿಸುತ್ತಾರೆ. (ಇಲ್ಲಿ ಜೋರಾಸ್ಟ್ರರ್ ಅವರನ್ನು ಲೆಕ್ಕಕ್ಕೆ ತೆಗೆದು ಕೊಂಡಿಲ್ಲ)

ಜುದಾಯಿಸಮ್ ಅಥವ ಯಹೂದಿ ಧರ್ಮ ಜಗತ್ತಿನ ಅತ್ಯಂತ ಹಳೆಯ ಏಕದೇವತಾವಾದಿ ಧರ್ಮ. ಯಹೂದಿಗಳು ತಮ್ಮ ಮೂಲವನ್ನು ಅಬ್ರಹಾಂ ನ ಜೊತೆಗೆ ಸಮೀಕರಿಸುತ್ತಾರಾದರೂ ಕೂಡ, ಪ್ರವಾದಿ ಮೋಸಸ್ ಅನ್ನು ಯಹೂದಿ ಧರ್ಮದ ಪ್ರಮುಖ ಸಂಸ್ಥಾಪಕನೆಂದು ಹೇಳಲಾಗುತ್ತದೆ. ಟೊರ ಅಥವ ಖುರಾನಿನಲ್ಲಿ ಬರೆದು ಉಲ್ಲೇಕಿಸಿರುವ ತೌರತ್ ಅನ್ನುವುದು ಆ ಧರ್ಮದ ಅತ್ಯಂತ ಪ್ರಮುಖ ಧಾರ್ಮಿಕ ಗ್ರಂಥ. ಇದರಲ್ಲಿ ಯಹೋವನ ಎಂಬ ದೇವರನ್ನು (ಈಲ್) ಆರಾಧಿಸುತ್ತಾರೆ. ಈತನ ಮೊದಲನೇ ಸೃಷ್ಟಿ ಅದಾಮ್ (ಖುರಾನಿನಲ್ಲೂ ಅದೇ ಅನುಮೋದನೆ ಇದೆ). ನಂತರ

ನೋಹ ಎಂಬ ಪ್ರವಾದಿಯ ಉಲ್ಲೇಕವಿದೆ (ಖುರಾನಿನಲ್ಲೂ ಅದೇ ಅನುಮೋದನೆ ಇದೆ). ನಂತರ ಬರುವವರೆ ಅಬ್ರಹಾಮ್ (ಖುರಾನಿನಲ್ಲೂ ಅದೇ ಅನುಮೋದನೆ ಇದೆ).




ಈ ಚಿತ್ರ ಇಂದಿನ ಇಸ್ರೇಲ್ ಮತ್ತು ಅಂದಿನ ಅರೆಬ್ಬಿ ಇರಾನ್ ದೇಶಗಳ ತೋರುತ್ತೆ.

ಬಹಳ ಪ್ರಾಚೀನ ಏಕ ದೇವೋಪಾಸನೆ ಅನುಸರಿಸಿದ ಯಹೂದಿ ಮತ ಇಂದು ಅಷ್ಟು ಸಣ್ಣ ದೇಶಕ್ಕೆ ಹುದುಗಿ ಹೋಗಲು ಇವರ ಚರಿತ್ರೆ ಬಹಳ ವಿಸ್ತಾರವಾಗಿದೆ. ಯಹೂದಿಯರ ಐದು ಟೋರಾ ಪುಸ್ತಕಗಳ ಬಗ್ಗೆ ತಿಳಿಯದೆ ನಂತರದ ಕ್ರೈಸ್ತರು ಮತ್ತು ಇಸ್ಲಾಮೀಯರು ಅವರು ನಡೆಸಿದ ಕಾರ್ಯಗಳ ಬುನಾದಿ ಪ್ರಶ್ನೆಯಾಗೇ ಉಳಿದು ಬಿಡುತ್ತದೆ. ಯಹೂದಿಗಳ ಗ್ರಂಥಗಳಾದ ಮೊದಲಿಗೆ ಐದು ಗ್ರಂಥಗಳನ್ನು ತೌರತ್/ಟೋರಾ ಎಂದು ಕರೆಯಲಾಗುತ್ತೆ. ಇವರ ಗ್ರಂಥಗಳ ಬೋಧನಾ ಮಾರ್ಗದಲ್ಲೇ ಕ್ರೈಸ್ತರ ಹೊಸ ಬೈಬಲ್ ಬಂದಿದ್ದು ಮತ್ತು ಮುಸ್ಲಿಮರ ಖುರಾನ್ ರಚಿತವಾಗಿರುವುದು. ಇವುಗಳ ತುಲನಾತ್ಮಕ ವಿಮರ್ಶೆ ಮಾಡಿ ಸಾಮ್ಯತೆ, ಅದರಲ್ಲಿ ಬರುವ ವ್ಯಕ್ತಿಗಳು, ಕತೆಗಳು, ನೀತಿಗಳು ಉಲ್ಲೇಕಗಳು ಗಮನಿಸಿದರೆ ಸತ್ಯ ಶೃತುವಾಗುತ್ತದೆ.

**ಟೋರಾ/ತೌರತ್/ಹಳೇ ಒಡಂಬಡಿಕೆ ಬೈಬಲ್ ಬಗ್ಗೆ ಖುರಾನಿನಲ್ಲಿ ಉಲ್ಲೇಕಗಳು**

ಖುರಾನ್ 3: 3. (ದೂತರೇ,) ಅವನು ನಿಮಗೆ ಈ ಗ್ರಂಥವನ್ನು ಸತ್ಯದೊಂದಿಗೆ ಇಳಿಸಿಕೊಟ್ಟಿರುವವನು. ಇದು ತನ್ನ ಹಿಂದಿನವುಗಳನ್ನು (ಗತ ಕಾಲದ ದಿವ್ಯ ಗ್ರಂಥಗಳನ್ನು) ಸಮರ್ಥಿಸುತ್ತದೆ. (ಈ ಹಿಂದೆ) ತೌರಾತ್ ಮತ್ತು ಇಂಜೀಲ್‌ಗಳನ್ನು ಇಳಿಸಿ ಕೊಟ್ಟವನೂ ಅವನೇ.

3: 48. (ಮಲಕ್‌ಗಳು ಹೇಳಿದರು;) "ಅವನು (ಅಲ್ಲಾಹನು) ಅವರಿಗೆ ಗ್ರಂಥವನ್ನು ಮತ್ತು ಯುಕ್ತಿಯನ್ನು ಹಾಗೂ ತೌರಾತ್ ಮತ್ತು ಇಂಜೀಲ್‌ಗಳನ್ನು ಕಲಿಸುವನು".

3: 50. "ನಾನು ನನಗಿಂತ ಹಿಂದೆ ಇದ್ದ ತೌರಾತ್‌ನ ಭಾಗವನ್ನು ಸಮರ್ಥಿಸುವವನಾಗಿದ್ದೇನೆ ಹಾಗೂ ನಿಮ್ಮ ಮೇಲೆ ನಿಷಿದ್ಧ ಗೊಳಿಸಲಾಗಿದ್ದ ಕೆಲವು

ವಿಷಯಗಳನ್ನು ನಿಮ್ಮ ಪಾಲಿಗೆ ಸಮ್ಮತಗೊಳಿಸಲಿಕ್ಕಾಗಿ ಬಂದಿರುತ್ತೇನೆ. ನಾನು ನಿಮ್ಮ ಬಳಿಗೆ ನಿಮ್ಮ ಒಡೆಯನ ಕಡೆಯಿಂದ ಪುರಾವೆಯನ್ನು ತಂದಿರುತ್ತೇನೆ. (ಆದುದರಿಂದ) ನೀವು ಅಲ್ಲಾಹನಿಗೆ ಅಂಜಿರಿ ಮತ್ತು ನನ್ನ ಆದೇಶ ಪಾಲಿಸಿರಿ".

3: 65. (ಮತ್ತು ಹೇಳಿರಿ:) "ಗ್ರಂಥದವರೇ, ನೀವೇಕೆ ನಮ್ಮೊಡನೆ ಇಬ್ರಾಹೀಮ್‌ರ ಕುರಿತು ಜಗಳಾಡುತ್ತೀರಿ? ತೌರಾತ್ ಮತ್ತು ಇಂಜೀಲ್‌ಗಳನ್ನು ಅವರ ಅನಂತರವಷ್ಟೇ ಇಳಿಸಲಾಗಿತ್ತು. ನೀವು ಆಲೋಚಿಸುವುದಿಲ್ಲವೇ?"

3: 93. ಇಸ್ರಾಈಲರ ಸಂತತಿಗಳ ಪಾಲಿಗೆ (ಅವರಿಂದು ನಿಷಿದ್ಧವೆನ್ನುತ್ತಿರುವ) ಎಲ್ಲ ಭೋಜನಗಳೂ ಸಮ್ಮತವಾಗಿದ್ದುವು – ತೌರಾತ್ ಗ್ರಂಥದ ಆಗಮನಕ್ಕೆ ಮುನ್ನ ಇಸ್ರಾಈಲರು (ಪ್ರವಾದಿ ಯಅ್ಕೂಬರು, ಅನಾರೋಗ್ಯದ ಕಾರಣ) ಸ್ವತಃ ತಮ್ಮ ಮೇಲೆ ನಿಷೇಧಿಸಿಕೊಂಡವುಗಳ ಹೊರತು. "ನೀವು ಸತ್ಯವಂತರಾಗಿದ್ದರೆ ತೌರಾತನ್ನು ತಂದು ಅದನ್ನು ಓದಿ ತೋರಿಸಿರಿ" ಎಂದು (ಅವರೊಡನೆ) ಹೇಳಿರಿ.

5: 43. ಅವರ ಬಳಿ, ಅಲ್ಲಾಹನ ಆದೇಶವಿರುವ ತೌರಾತ್ ಗ್ರಂಥವಿರುವಾಗ ಅವರು ನಿಮ್ಮನ್ನು ತೀರ್ಪುಗಾರರಾಗಿ ಮಾಡುವುದಾದರೂ ಹೇಗೆ? ಆದರೆ ಆ ಬಳಿಕ ಅವರು ತಿರುಗಿ ನಿಲ್ಲುತ್ತಾರೆ – ಇನ್ನು ಅವರು ನಂಬುವವರಂತೂ ಅಲ್ಲ.

5: 44. ಖಂಡಿತವಾಗಿಯೂ ತೌರಾತ್‌ಅನ್ನು ನಾವೇ ಇಳಿಸಿದೆವು. ಅದರಲ್ಲಿ ಮಾರ್ಗದರ್ಶನ ಮತ್ತು ಪ್ರಕಾಶವಿದೆ. ನಮ್ಮ ಆಜ್ಞಾಪಾಲಕರಾಗಿದ್ದ ದೇವದೂತರುಗಳು ಅದರ (ತೌರಾತ್‌ನ) ಮೂಲಕವೇ ಯಹೂದಿಗಳಿಗೆ ಆದೇಶಗಳನ್ನು ನೀಡುತ್ತಿದ್ದರು. (ಅವರಲ್ಲಿನ) ದೇವಭಕ್ತರು ಮತ್ತು ವಿದ್ವಾಂಸರು ಕೂಡ ಹಾಗೆಯೇ ಮಾಡುತ್ತಿದ್ದರು. ಏಕೆಂದರೆ ಅವರನ್ನು ಅಲ್ಲಾಹನ ಗ್ರಂಥದ ರಕ್ಷಕರಾಗಿ ಮಾಡಲಾಗಿತ್ತು ಮತ್ತು ಅವರು ಅದರ ಪರ ಸಾಕ್ಷಿಗಳಾಗಿದ್ದರು. ನೀವು ಜನರಿಗೆ ಅಂಜಬೇಡಿ. ನನಗೆ ಮಾತ್ರ ಅಂಜಿರಿ. ಹಾಗೆಯೇ ನೀವು ನನ್ನ ವಚನಗಳನ್ನು ಸಣ್ಣ ಬೆಲೆಗೆ ಮಾರಬೇಡಿ. ಅಲ್ಲಾಹನು ಇಳಿಸಿ ಕೊಟ್ಟಿರುವುದರ (ಅವನ ನಿಯಮದ) ಪ್ರಕಾರ ತೀರ್ಪು ನೀಡದವರು ಧಿಕ್ಕಾರಿಗಳಾಗಿರುತ್ತಾರೆ.

5: 45. ಅದರಲ್ಲಿ (ತೌರಾತ್‌ನಲ್ಲಿ) ನಾವು ಅವರಿಗೆ – ಜೀವಕ್ಕೆ ಜೀವ, ಕಣ್ಣಿಗೆ ಕಣ್ಣು, ಮೂಗಿಗೆ ಮೂಗು, ಕಿವಿಗೆ ಕಿವಿ ಮತ್ತು ಹಲ್ಲಿಗೆ ಹಲ್ಲು ಪರಿಹಾರವೆಂದು ಮತ್ತು ಗಾಯಗಳಿಗೂ ಪರಿಹಾರವಿದೆ ಎಂದು, ಹಾಗೆಯೇ ಪ್ರತೀಕಾರದ ಹಕ್ಕನ್ನು ಕ್ಷಮಿಸಿ ಬಿಟ್ಟವನಿಗೆ ಅದಕ್ಕಾಗಿ ಪರಿಹಾರ ಧನ ಉಂಟೆಂದು ವಿಧಿಸಿದ್ದೆವು. ಇನ್ನು ಅಲ್ಲಾಹನು ಇಳಿಸಿ ಕೊಟ್ಟಿರುವುದರ (ಅವನ ನಿಯಮದ) ಪ್ರಕಾರ ತೀರ್ಪು ನೀಡದವರು ಅಕ್ರಮಿಗಳಾಗಿರುತ್ತಾರೆ.

5: 46. ಅವರ (ಗತಕಾಲದ ದೂತರುಗಳ) ಹೆಜ್ಜೆ ಗುರುತುಗಳ ಮೇಲೆ ನಾವು ಮರ್ಯಮರ ಪುತ್ರ ಈಸಾರನ್ನು ಕಳಿಸಿದೆವು – ತೌರಾತ್‌ನ ಪೈಕಿ ಅವರ (ಯಹೂದಿಗಳ) ಬಳಿ ಉಳಿದಿದ್ದ ಭಾಗವನ್ನು ದೃಢೀಕರಿಸುವವರಾಗಿ. ಹಾಗೆಯೇ ನಾವು ಅವರಿಗೆ (ಈಸಾರಿಗೆ) ಇಂಜೀಲ್ ಅನ್ನು ನೀಡಿದೆವು. ಅದರಲ್ಲಿ ಮಾರ್ಗದರ್ಶನ ಮತ್ತು ಪ್ರಕಾಶವಿದೆ. ಅದು ತೌರಾತ್‌ನ ಪೈಕಿ ಅವರ ಬಳಿ ಉಳಿದಿರುವ ಭಾಗವನ್ನು ಸಮರ್ಥಿಸುತ್ತದೆ ಮತ್ತು ಅದು ದೇವಭಕ್ತರ ಪಾಲಿಗೆ ಮಾರ್ಗದರ್ಶಿ ಹಾಗೂ ಉಪದೇಶವಾಗಿದೆ.

5: 66. ಒಂದು ವೇಳೆ ಅವರು ತೌರಾತ್ ಮತ್ತು ಇಂಜೀಲ್‌ಗಳನ್ನು ಹಾಗೂ (ಇದೀಗ) ಅವರಿಗೆ ಅವರೊಡೆಯನ ಕಡೆಯಿಂದ ಏನನ್ನು ಇಳಿಸಿಕೊಡಲಾಗಿದೆಯೋ ಅದನ್ನು (ಕುರ್‌ಆನನ್ನು) ಸ್ಥಾಪಿಸಿರುತ್ತಿದ್ದರೆ ಅವರ ಮೇಲಿಂದಲೂ ಅವರ ಕಾಲಡಿಯಿಂದಲೂ ಅವರಿಗೆ ಆಹಾರವು ಹರಿದು ಬರುತ್ತಿತ್ತು. ಅವರಲ್ಲಿ ಮಧ್ಯಮ ನಿಲುವಿನ ಒಂದು ಪಂಗಡವಿದೆ. ಆದರೆ ಅವರಲ್ಲಿ ಹೆಚ್ಚಿನವರು ಕೆಟ್ಟದ್ದನ್ನೇ ಮಾಡುವವರಾಗಿದ್ದಾರೆ.

5: 68. ಹೇಳಿರಿ; "ಗ್ರಂಥದವರೇ, ನೀವು ತೌರಾತ್ ಅನ್ನು, ಇಂಜೀಲ್ ಅನ್ನು ಮತ್ತು ನಿಮ್ಮ ಒಡೆಯನು ನಿಮ್ಮೆಡೆಗೆ ಇಳಿಸಿಕೊಟ್ಟಿರುವುದನ್ನು ಸಂಸ್ಥಾಪಿಸುವ ತನಕ ನಿಮಗೆ ಯಾವ ನೆಲೆಯೂ ಇಲ್ಲ." ನಿಜವಾಗಿ, ನಿಮ್ಮ ಒಡೆಯನ ಕಡೆಯಿಂದ ನಿಮ್ಮೆಡೆಗೆ ಇಳಿಸಿ ಕೊಡಲಾಗಿರುವ ಸಂದೇಶವು ಅವರಲ್ಲಿ (ಗ್ರಂಥದವರಲ್ಲಿ) ಹೆಚ್ಚಿನವರ ವಿದ್ರೋಹ ಮತ್ತು ಧಿಕ್ಕಾರವನ್ನು ಮತ್ತಷ್ಟು ಹೆಚ್ಚಿಸಿದೆ. ನೀವು ಧಿಕ್ಕಾರಿಗಳ ವಿಷಯದಲ್ಲಿ ಬೇಸರಿಸಬೇಡಿ.

5: 110. ಅಲ್ಲಾಹನು ಹೇಳಿದನು; "ಓ ಮರ್ಯಮರ ಪುತ್ರ ಈಸಾ! ನಿಮ್ಮ ಮೇಲೆ ಹಾಗೂ ನಿಮ್ಮ ತಾಯಿಯ ಮೇಲೆ ನಾನು ತೋರಿದ ಅನುಗ್ರಹವನ್ನು ಸ್ಮರಿಸಿರಿ. ನಾನು ಪವಿತ್ರ ಆತ್ಮ (ಜಿಬ್ರೀಲ್)ನ ಮೂಲಕ ನಿಮಗೆ ನೆರವಾದಾಗ, ನೀವು ತೊಟ್ಟಿಲಿಂದಲೂ, (ಆ ಬಳಿಕ) ಬೆಳೆದ ಬಳಿಕವೂ ಜನರೊಡನೆ ಮಾತನಾಡಿದಿರಿ. ಹಾಗೆಯೇ, ನಾನು ನಿಮಗೆ ಗ್ರಂಥ ಹಾಗೂ ಜಾಣ್ಮೆಯನ್ನು ಮತ್ತು ತೌರಾತ್ ಹಾಗೂ ಇಂಜೀಲ್‌ಗಳನ್ನು ಕಲಿಸಿಕೊಟ್ಟೆನು

2: 53. ಮತ್ತು ನಾವು ಮೂಸಾರಿಗೆ ಗ್ರಂಥವನ್ನು ಹಾಗೂ 'ಫುರ್ಕಾನ್' ಅನ್ನು ನೀಡಿದ ಸಂದರ್ಭ (ನೆನಪಿರಲಿ)– ನೀವು ಸರಿದಾರಿಯಲ್ಲಿ ನಡೆಯಬೇಕೆಂದು (ಅದನ್ನು ನೀಡಲಾಗಿತ್ತು).

2: 63. ಮತ್ತು ನಾವು ತೂರ್ ಪರ್ವತವನ್ನು ನಿಮ್ಮ (ಇಸ್ರಾಈಲರ ಸಂತತಿಗಳ) ಮೇಲೆ ಎತ್ತರಿಸಿ, ನಿಮ್ಮಿಂದ ಕರಾರು ಪಡೆದ ಸಂದರ್ಭದಲ್ಲಿ –"ನಾವು ನಿಮಗೆ ಕೊಡುತ್ತಿರುವುದನ್ನು (ಮಾರ್ಗದರ್ಶಕ ಗ್ರಂಥವನ್ನು) ನೀವು ಭದ್ರವಾಗಿ ಹಿಡಿದುಕೊಳ್ಳಿರಿ

ಮತ್ತು ಇದರಲ್ಲಿರುವ ವಿಷಯಗಳನ್ನು ನೆನಪಿಟ್ಟುಕೊಳ್ಳಿರಿ, ನೀವು ಧರ್ಮನಿಷ್ಠರಾಗಬಹುದು" (ಎಂದು ನಾವು ಹೇಳಿದ್ದೆವು).

2: 87. ನಾವು (ಅಲ್ಲಾಹ್) ಮೂಸಾರಿಗೆ ಗ್ರಂಥವನ್ನು ನೀಡಿದ್ದೆವು ಮತ್ತು ಆ ಬಳಿಕವೂ ಬೆನ್ನು ಬೆನ್ನಿಗೆ ದೂತರನ್ನು ಕಳಿಸುತ್ತಲೇ ಇದ್ದೆವು. ಮತ್ತು ನಾವು ಮರ್ಯಮರ ಪುತ್ರ ಈಸಾರಿಗೆ ಸ್ಪಷ್ಟ ಪುರಾವೆಗಳನ್ನು ನೀಡಿದೆವು ಹಾಗೂ ಪವಿತ್ರ ಆತ್ಮದ ಮೂಲಕ ಅವರಿಗೆ ಶಕ್ತಿಯನ್ನೊದಗಿಸಿದೆವು. ಆದರೆ ನೀವೇನು, ದೂತರು ನಿಮ್ಮ ಚಿತ್ತಕ್ಕೆ ಇಷ್ಟವಿಲ್ಲದ್ದನ್ನು ತಂದಾಗಲೆಲ್ಲಾ ಅಹಂಕಾರ ತೋರುವಿರಾ? ಅವರಲ್ಲಿ ಕೆಲವರನ್ನು ನೀವು ಧಿಕ್ಕರಿಸಿದಿರಿ ಮತ್ತು ಕೆಲವರನ್ನು ಕೊಂದು ಬಿಟ್ಟಿರಿ.

2: 89. ಈ ಹಿಂದೆ, ಧಿಕ್ಕಾರಿಗಳ ವಿರುದ್ಧ ತಮಗೆ ವಿಜಯ ನೀಡಬೇಕೆಂದು ಪ್ರಾರ್ಥಿಸುತ್ತಿದ್ದ ಅದೇ ಮಂದಿ – ಇದೀಗ, ಅಲ್ಲಾಹನ ಕಡೆಯಿಂದ, ಈಗಾಗಲೇ ತಮ್ಮ ಬಳಿ ಇರುವ ಗ್ರಂಥಗಳನ್ನು ಸಮರ್ಥಿಸುವ ಗ್ರಂಥವು ತಮ್ಮ ಬಳಿಗೆ ಬಂದಿರುವಾಗ ಮತ್ತು ತಮಗೆ ಪರಿಚಯವಿರುವ ಸತ್ಯ ಗ್ರಂಥವು ತಮ್ಮ ಬಳಿಗೆ ಬಂದಿರುವಾಗ, ಅದನ್ನು ಧಿಕ್ಕರಿಸುತ್ತಿದ್ದಾರೆ. ಧಿಕ್ಕಾರಿಗಳ ಮೇಲೆ ಅಲ್ಲಾಹನ ಶಾಪವಿದೆ.

2: 101. ಮತ್ತು ಈ ಹಿಂದೆ ಗ್ರಂಥ ನೀಡಲಾಗಿದ್ದವರ ಪೈಕಿ ಒಂದು ಗುಂಪಿನವರು, ಈಗಾಗಲೇ ತಮ್ಮ ಬಳಿಯಿರುವ ಸತ್ಯವನ್ನು ಸಮರ್ಥಿಸುವ ದೂತನೊಬ್ಬನು ಅಲ್ಲಾಹನ ಕಡೆಯಿಂದ ತಮ್ಮ ಬಳಿಗೆ ಬಂದಾಗಲೆಲ್ಲಾ, ಆ ಕುರಿತು ತಮಗೆ ಏನೂ ತಿಳಿಯದು ಎಂಬಂತೆ, ಅಲ್ಲಾಹನ ಗ್ರಂಥವನ್ನು ತಮ್ಮ ಬೆನ್ನ ಹಿಂದಕ್ಕೆ ಎಸೆದು ಬಿಟ್ಟರು.

2: 105. ಗ್ರಂಥದವರಲ್ಲಿನ ಧಿಕ್ಕಾರಿಗಳು ಮತ್ತು ಬಹುದೇವಾರಾಧಕರು, ನಿಮ್ಮ ಒಡೆಯನ ಕಡೆಯಿಂದ ನಿಮ್ಮೆಡೆಗೆ ಯಾವುದೇ ಒಳಿತು ಇಳಿದು ಬರುವುದನ್ನು ಇಷ್ಟಪಡುವುದಿಲ್ಲ. ಆದರೆ ಅಲ್ಲಾಹನಂತು ತನ್ನ ಅನುಗ್ರಹದಿಂದ ತಾನಿಚ್ಛಿಸಿದವರನ್ನು ಆರಿಸಿಕೊಳ್ಳುತ್ತಾನೆ. ಅಲ್ಲಾಹನು ಮಹಾ ಉದಾರಿಯಾಗಿದ್ದಾನೆ.

2: 109. ಗ್ರಂಥದವರಲ್ಲಿ ಹೆಚ್ಚಿನವರು, ನೀವು ವಿಶ್ವಾಸಿಗಳಾದ ಬಳಿಕ ನಿಮ್ಮನ್ನು ಮತ್ತೆ ಧಿಕ್ಕಾರದೆಡೆಗೆ ಮರಳಿಸಬಯಸಿದ್ದರು. ಸತ್ಯವು ಅವರಿಗೆ ಸ್ಪಷ್ಟವಾದ ಬಳಿಕವೂ ಅವರು ತಮ್ಮೊಳಗಿನ ಅಸೂಯೆಯಿಂದಾಗಿ (ಹೀಗೆ ಮಾಡುತ್ತಿದ್ದಾರೆ). ನೀವು ಮಾತ್ರ, ಈ ಕುರಿತು ಅಲ್ಲಾಹನು ತನ್ನ ಆದೇಶವನ್ನು ಪ್ರಕಟಿಸುವ ತನಕವೂ (ಅವರನ್ನು) ಕ್ಷಮಿಸುತ್ತಲೂ (ಅವರ ತಪ್ಪನ್ನು) ಕಡೆಗಣಿಸುತ್ತಲೂ ಇರಿ. ಅಲ್ಲಾಹನು ಖಂಡಿತ ಎಲ್ಲವನ್ನು ಮಾಡಬಲ್ಲವನಾಗಿದ್ದಾನೆ.

2: 113. ಕ್ರೈಸ್ತರ ಬಳಿ ಏನೂ (ಯಾವ ಸತ್ಯವೂ) ಇಲ್ಲವೆಂದು ಯಹೂದಿಗಳು ಹೇಳುತ್ತಾರೆ ಮತ್ತು ಯಹೂದಿಗಳ ಬಳಿ ಏನೂ ಇಲ್ಲವೆಂದು ಕ್ರೈಸ್ತರು ಹೇಳುತ್ತಾರೆ.

ಹಾಗೆಂದು, ಅವರು (ಇಬ್ಬರೂ) ಗ್ರಂಥವನ್ನು ಓದುವವರಾಗಿದ್ದಾರೆ. ತಿಳುವಳಿಕೆ ಇಲ್ಲದವರೂ ಇದೇ ರೀತಿ, ಅವರು ಆಡುತ್ತಿರುವಂತಹ ಮಾತನ್ನೇ ಆಡುತ್ತಾರೆ. ಅವರು ಭಿನ್ನತೆಗೊಳಗಾಗಿದ್ದ ವಿಷಯಗಳಲ್ಲಿ ಪುನರುತ್ಥಾನ ದಿನ, ಅಲ್ಲಾಹನೇ ಅವರ ನಡುವೆ ತೀರ್ಪು ನೀಡುವನು.

2: 121. ನಾವು ಯಾರಿಗೆ ಗ್ರಂಥವನ್ನು ನೀಡಿರುವೆವೋ ಅವರು ಅದನ್ನು ಓದಬೇಕಾದ ರೀತಿಯಲ್ಲಿ ಓದುತ್ತಾರೆ (ಮತ್ತು) ಅವರು ಅದನ್ನು ನಂಬುತ್ತಾರೆ. ಇನ್ನು, ಅದನ್ನು ಯಾರು ತಿರಸ್ಕರಿಸುವರೋ ಅವರೇ ನಿಜವಾಗಿ ನಷ್ಟಕ್ಕೊಳಗಾಗುವವರು.

4: 47. ಗ್ರಂಥ ನೀಡಲ್ಪಟ್ಟವರೇ, (ಇದೀಗ) ನಾವು ಇಳಿಸಿಕೊಟ್ಟಿರುವುದರಲ್ಲಿ (ಕುರ್‌ಆನ್‌ನಲ್ಲಿ) ನಂಬಿಕೆ ಇಡಿರಿ – ಅದು, ಹಿಂದಿನಿಂದಲೇ ನಿಮ್ಮ ಬಳಿ ಇರುವುದನ್ನು (ತೌರಾತ್ ಹಾಗೂ ಇಂಜೀಲ್ ಗ್ರಂಥಗಳನ್ನು) ಸಮರ್ಥಿಸುತ್ತದೆ. ನಾವು ಅವರ (ಧಿಕ್ಕಾರಿಗಳ) ಮುಖಗಳನ್ನು ವಿಕೃತಗೊಳಿಸಿ ಅವುಗಳನ್ನು ಹಿಂದಕ್ಕೆ ತಿರುಚಿ ಬಿಡುವ ಅಥವಾ (ಈ ಹಿಂದೆ) 'ಶನಿವಾರದವರನ್ನು' ಶಪಿಸಿದಂತೆ ಅವರನ್ನು ಶಪಿಸಿ ಬಿಡುವ ಮುನ್ನ (ಅವರು ನಂಬಿಕೆ ಇಡಲಿ). ಅಲ್ಲಾಹನ ಆದೇಶವಂತೂ ಖಂಡಿತ ಅನುಷ್ಠಾನವಾಗುತ್ತದೆ.

4: 54. ಅವರೇನು, ಅಲ್ಲಾಹನು ತನ್ನ ಅನುಗ್ರಹದಿಂದ ಜನರಿಗೆ ನೀಡಿರುವುದಕ್ಕಾಗಿ ಅವರ (ಜನರ) ಕುರಿತು ಅಸೂಯೆ ಪಡುತ್ತಿದ್ದಾರೆಯೆ? ನಾವು ಇಬ್ರಾಹೀಮರ (ಅಬ್ರಹಾಮರ) ಸಂತತಿಗೆ (ದಿವ್ಯ) ಗ್ರಂಥವನ್ನು ಹಾಗೂ ಯುಕ್ತಿಯನ್ನು ನೀಡಿರುವೆವು ಮತ್ತು ಅವರಿಗೊಂದು ಭವ್ಯ ಸಾಮ್ರಾಜ್ಯವನ್ನೂ ನೀಡಿದ್ದೆವು.

4: 55. ಅವರಲ್ಲಿ ಕೆಲವರು ಅದನ್ನು (ದಿವ್ಯ ಗ್ರಂಥವನ್ನು) ನಂಬಿದರು ಮತ್ತು ಕೆಲವರು ಅದರಿಂದ ದೂರ ಉಳಿದುಕೊಂಡರು. (ಅಂಥವರಿಗೆ) ಭುಗಿಲೆದ್ದು ಉರಿಯುವ ನರಕಾಗ್ನಿಯೇ ಸಾಕು.

4: 131. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಎಲ್ಲವೂ ಅಲ್ಲಾಹನಿಗೇ ಸೇರಿವೆ. "ಅಲ್ಲಾಹನಿಗೆ ಅಂಜಿರಿ. ನೀವು ಧಿಕ್ಕಾರಿಗಳಾದರೆ, ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಎಲ್ಲವೂ ಅಲ್ಲಾಹನಿಗೇ ಸೇರಿವೆ (ಎಂಬುದನ್ನು ಮರೆಯಬೇಡಿ)" ಎಂದು ಈ ಹಿಂದೆ ಗ್ರಂಥ ನೀಡಲಾಗಿದ್ದವರಿಗೆ ನಾವು ಉಪದೇಶಿಸಿದ್ದೆವು ಮತ್ತು ನಿಮಗೂ ಉಪದೇಶಿಸುತ್ತಿದ್ದೇವೆ. ಅಲ್ಲಾಹನಂತೂ ಎಲ್ಲ ಅಗತ್ಯಗಳಿಂದ ಮುಕ್ತನೂ ಎಲ್ಲ ಪ್ರಶಂಸೆಗಳಿಗೆ ಅರ್ಹನೂ ಆಗಿರುವನು.

4: 136. ವಿಶ್ವಾಸಿಗಳೇ, ಅಲ್ಲಾಹನಲ್ಲಿ, ಅವನ ದೂತರಲ್ಲಿ, ಅವನ ದೂತರಿಗೆ ಇಳಿಸಿಕೊಡಲಾಗಿರುವ ಗ್ರಂಥದಲ್ಲಿ ಮತ್ತು ಈ ಹಿಂದೆ ಇಳಿಸಿಕೊಡಲಾಗಿದ್ದ ಗ್ರಂಥಗಳಲ್ಲಿ

ನಂಬಿಕೆ ಇಡಿರಿ. ಅಲ್ಲಾಹನನ್ನು, ಅವನ ಮಲಕ್‍ಗಳನ್ನು, ಅವನ ದೂತರನ್ನು ಮತ್ತು ಅಂತಿಮ ದಿನವನ್ನು ಧಿಕ್ಕರಿಸಿದವನು ದಾರಿಗೆಟ್ಟು, ದಾರಿಗೇಡಿತನದಲ್ಲಿ ತುಂಬಾ ದೂರ ಹೋಗಿಬಿಟ್ಟನು.

4: 159. ಖಂಡಿತವಾಗಿಯೂ, ಗ್ರಂಥದವರಲ್ಲಿ ಯಾರೂ ತನ್ನ ಮರಣಕ್ಕೆ ಮುನ್ನ, ಅವರಲ್ಲಿ (ಈಸಾರಲ್ಲಿ) ನಂಬಿಕೆ ಇಡದೆ ಇರಲಾರನು ಮತ್ತು ಪುನರುತ್ಥಾನ ದಿನ ಅವರು (ಈಸಾ) ಅವರ (ಗ್ರಂಥದವರ) ವಿರುದ್ಧ ಸಾಕ್ಷಿಯಾಗುವರು.

4: 171. ಗ್ರಂಥದವರೇ, ನಿಮ್ಮ ಧರ್ಮದಲ್ಲಿ ಅತಿಶಯವೆಸಗಬೇಡಿ ಮತ್ತು ಅಲ್ಲಾಹನ ಕುರಿತು, ಸತ್ಯವಲ್ಲದ ಏನನ್ನೂ ಹೇಳಬೇಡಿ. ಮರ್ಯಮರ ಪುತ್ರ ಈಸಾ ಮಸೀಹ್, ಅಲ್ಲಾಹನ ದೂತರಾಗಿದ್ದರು ಹಾಗೂ ಅವನು ಮರ್ಯಮರಿಗೆ ಕರುಣಿಸಿದ, ಅವನ ವಚನವಾಗಿದ್ದರು ಮತ್ತು ಅವನ ಕಡೆಯಿಂದ ಕಳಿಸಲಾಗಿದ್ದ ಒಂದು ಆತ್ಮವಾಗಿದ್ದರು. ನೀವು "(ದೇವರು) ಮೂವರಿದ್ದಾರೆ" ಎನ್ನಬೇಡಿ. ಹಾಗೆ ಹೇಳದಿರುವುದೇ ನಿಮ್ಮ ಪಾಲಿಗೆ ಉತ್ತಮ. ಅಲ್ಲಾಹನೊಬ್ಬನು ಮಾತ್ರ ಪೂಜಾರ್ಹನು. ಅವನಿಗೊಬ್ಬ ಪುತ್ರನಿರಲು, ಅವನಂತೂ ತುಂಬಾ ಪಾವನನಾಗಿದ್ದಾನೆ. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿ ಇರುವುದೆಲ್ಲವೂ ಅವನಿಗೇ ಸೇರಿವೆ. ಕಾರ್ಯ ಸಾಧನಕನಾಗಿ (ಎಲ್ಲರಿಗೂ) ಅಲ್ಲಾಹನೇ ಸಾಕು.

6: 89. ಅವರಿಗೆ ನಾವು – ಗ್ರಂಥವನ್ನು, ಅಧಿಕಾರವನ್ನು ಮತ್ತು ದೂತ ಪದವಿಯವನ್ನು ನೀಡಿದ್ದೆವು. ಇದೀಗ ಆ ಜನರು ಇದನ್ನು (ಸತ್ಯವನ್ನು) ಧಿಕ್ಕರಿಸಿದರೆ, ಇದನ್ನು ಧಿಕ್ಕರಿಸದ ಇನ್ನೊಂದು ಜನಾಂಗಕ್ಕೆ ನಾವಿದನ್ನು ಒಪ್ಪಿಸುವೆವು.

6: 91. ಅವರು ಅಲ್ಲಾಹನನ್ನು ಅರಿಯಬೇಕಾದ ರೀತಿಯಲ್ಲಿ ಅರಿಯಲಿಲ್ಲ. "ಅಲ್ಲಾಹನು ಯಾವ ಮಾನವನಿಗೂ ಏನನ್ನೂ ಇಳಿಸಿ ಕೊಟ್ಟಿಲ್ಲ" – ಎಂದು ಅವರು ಹೇಳಿದಾಗ, ನೀವು ಹೇಳಿರಿ; "ಮೂಸಾ ಅವರು ತಂದಿದ್ದ , ಎಲ್ಲ ಜನರಿಗಾಗಿ ಪ್ರಕಾಶ ಮತ್ತು ಸನ್ಮಾರ್ಗವಿದ್ದ ಗ್ರಂಥವನ್ನು ಇಳಿಸಿದವರು ಯಾರು? ನೀವು (ಇಸ್ರಾಈಲರ ಸಂತತಿಗಳು) ಅದನ್ನು (ಆ ಗ್ರಂಥವನ್ನು) ಕೇವಲ ಛಿದ್ರ ಹಾಳೆಗಳಾಗಿ ಪರಿವರ್ತಿಸಿದಿರಿ – ಅದರ ತುಸು ಭಾಗವನ್ನು ಮಾತ್ರ ಬಹಿರಂಗ ಪಡಿಸಿ ಹೆಚ್ಚಿನ ಭಾಗವನ್ನು ಬಚ್ಚಿಟ್ಟಿರಿ. ನಿಮಗಾಗಲಿ, ನಿಮ್ಮ ಪೂರ್ವಜರಿಗಾಗಲಿ ತಿಳಿದಿರದ ಅನೇಕ ವಿಷಯಗಳನ್ನು (ಆ ಗ್ರಂಥದ ಮೂಲಕ) ನಿಮಗೆ ಕಲಿಸಿಕೊಟ್ಟವನು ಯಾರು?" ಹೇಳಿರಿ; "ಅಲ್ಲಾಹನು." ತರುವಾಯ ನೀವು ಅವರನ್ನು ಬಿಟ್ಟು ಬಿಡಿರಿ – ಅವರು ತಮ್ಮ ಕುಚೇಷ್ಟೆಗಳಲ್ಲೇ ಮಗ್ನರಾಗಿರಲಿ.

6: 92. ಇದು, ನಾವು ಇಳಿಸಿಕೊಟ್ಟಿರುವ ಸಮೃದ್ಧಿ ತುಂಬಿದ ಗ್ರಂಥ – ತನಗಿಂತ ಮೊದಲು ಬಂದಿದ್ದ ಗ್ರಂಥಗಳನ್ನು ಇದು ಸಮರ್ಥಿಸುತ್ತದೆ. ಇದರ ಮೂಲಕ ನೀವು ಮಕ್ಕಾದವರನ್ನು ಮತ್ತು ಅದರ ಸುತ್ತ ಮುತ್ತಲಿನವರನ್ನು ಎಚ್ಚರಿಸಬೇಕೆಂದು (ಇದನ್ನು ಕಳಿಸಲಾಗಿದೆ). ಪರಲೋಕದಲ್ಲಿ ನಂಬಿಕೆ ಉಳ್ಳವರು, ಇದರಲ್ಲಿ ನಂಬಿಕೆ ಇರಿಸುತ್ತಾರೆ ಮತ್ತು ಅವರು ತಮ್ಮ ನಮಾಝ್‌ಗಳನ್ನು ಕಾಪಾಡುತ್ತಾರೆ.

6: 154. ನಾವು ಮೂಸಾರಿಗೆ ಗ್ರಂಥವನ್ನು ನೀಡಿದೆವು – ಸತ್ಕರ್ಮಿಯ ಪಾಲಿಗೆ ನಮ್ಮ ಅನುಗ್ರಹವನ್ನು ಪರಿಪೂರ್ಣಗೊಳಿಸಲಿಕ್ಕಾಗಿ, ಎಲ್ಲ ವಿಷಯಗಳ ವಿವರವನ್ನು ಒದಗಿಸಲಿಕ್ಕಾಗಿ ಮತ್ತು ಮಾರ್ಗದರ್ಶನ ಹಾಗೂ ಅನುಗ್ರಹವಾಗಿ – ಅವರು ತಮ್ಮ ಒಡೆಯನನ್ನು ಭೇಟಿಯಾಗಲಿಕ್ಕಿರುವುದನ್ನು ನಂಬಲೆಂದು.

6: 155. (ಇದೀಗ) ಈ ಸಮೃದ್ಧಿ ತುಂಬಿದ ಗ್ರಂಥವನ್ನು ನಾವು ಇಳಿಸಿಕೊಟ್ಟಿರುವೆವು. ಇದನ್ನು ಅನುಸರಿಸಿರಿ ಮತ್ತು ಧರ್ಮ ನಿಷ್ಠರಾಗಿರಿ – ನೀವು ಕರುಣೆಗೆ ಪಾತ್ರರಾಗ ಬಹುದು."

6: 156. ಈಗ ನೀವು – "ನಮಗಿಂತ ಹಿಂದಿನ ಎರಡು ಗುಂಪುಗಳಿಗೆ ಗ್ರಂಥವನ್ನು ಇಳಿಸಿಕೊಡಲಾಗಿತ್ತು. ಆದರೆ ಅವರಿಗೆ ನೀಡಲಾಗಿದ್ದ ಬೋಧನೆಗಳ ಕುರಿತು ನಮಗೇನೂ ತಿಳಿದಿರಲಿಲ್ಲ" – ಎಂದು ಹೇಳುವಂತಿಲ್ಲ.

9: 111. ಖಂಡಿತವಾಗಿಯೂ ಅಲ್ಲಾಹನು ವಿಶ್ವಾಸಿಗಳಿಂದ ಅವರ ಜೀವಗಳನ್ನು ಮತ್ತು ಅವರ ಸೊತ್ತುಗಳನ್ನು ಖರೀದಿಸಿರುವನು – ಅವರಿಗೆ ಸ್ವರ್ಗವನ್ನು ನೀಡಲಿಕ್ಕಾಗಿ. ಅವರು ಅಲ್ಲಾಹನ ಮಾರ್ಗದಲ್ಲೇ ಹೋರಾಡುತ್ತಾರೆ, ವಧಿಸುತ್ತಾರೆ ಮತ್ತು ವಧಿಸಲ್ಪಡುತ್ತಾರೆ. ತೌರಾತ್, ಇಂಜೀಲ್ ಮತ್ತು ಕುರ್‌ಆನ್‌ನಲ್ಲಿ ಅವರಿಗೆ ನೀಡಲಾಗಿರುವ ವಾಗ್ದಾನವು ಸತ್ಯವಾಗಿದೆ. ಅಲ್ಲಾಹನಿಗಿಂತ ಉತ್ತಮವಾಗಿ ತನ್ನ ಕರಾರನ್ನು ಪಾಲಿಸುವವನು ಯಾರಿದ್ದಾನೆ? ಆದ್ದರಿಂದ ಅವನ ಜೊತೆ ನೀವು ಮಾಡಿಕೊಂಡಿರುವ ವ್ಯವಹಾರಕ್ಕಾಗಿ ಸಂಭ್ರಮಿಸಿರಿ. ಇದು ನಿಜಕ್ಕೂ ಮಹಾ ವಿಜಯವಾಗಿದೆ.

7:157. ಅವರು ನಿರಕ್ಷರಿ ಪ್ರವಾದಿಯನ್ನು ಅನುಸರಿಸುತ್ತಾರೆ. ಅವರ (ಆ ಪ್ರವಾದಿಯ) ಕುರಿತು ತಮ್ಮ ಬಳಿ ಇರುವ ತೌರಾತ್ ಮತ್ತು ಇಂಜೀಲ್‌ಗಳಲ್ಲಿ (ಈ ರೀತಿ) ಬರೆದಿರುವುದನ್ನು ಅವರು ಕಾಣುತ್ತಾರೆ; "ಅವರು (ಆ ಪ್ರವಾದಿ) ಅವರಿಗೆ, ಒಳಿತನ್ನು ಆದೇಶಿಸುವರು, ಅವರನ್ನು ಕೆಡುಕಿನಿಂದ ತಡೆಯುವರು, ನಿರ್ಮಲವಾದವುಗಳನ್ನು ಅವರ ಪಾಲಿಗೆ ಸಮ್ಮತಗೊಳಿಸುವರು, ಮಲಿನ ವಸ್ತುಗಳನ್ನು ಅವರ ಪಾಲಿಗೆ

ನಿಷೇಧಿಸುವವರು, ಅವರಿಂದ ಅವರ ಭಾರಗಳನ್ನು ಇಳಿಸುವವರು ಮತ್ತು ಅವರ ಮೇಲಿದ್ದ ನೊಗಗಳನ್ನು ಕಳಚುವರು – ಅವರಲ್ಲಿ ನಂಬಿಕೆ ಇಟ್ಟು ಅವರನ್ನು ಸಮರ್ಥಿಸುವವರು, ಅವರಿಗೆ ನೆರವಾಗುವವರು ಮತ್ತು ಅವರ ಜೊತೆಗೆ ಇಳಿಸಲಾಗಿರುವ ಪ್ರಕಾಶವನ್ನು ಅನುಸರಿಸುವವರೇ ವಿಜಯಿಗಳು."

10: 94. (ದೂತರೇ,) ಒಂದು ವೇಳೆ ನಾವು ನಿಮ್ಮೆಡೆಗೆ ಇಳಿಸಿ ಕೊಟ್ಟಿರುವ ಸಂದೇಶದ ಕುರಿತು ನಿಮಗೆ ಸಂಶಯವಿದ್ದರೆ, ನಿಮಗಿಂತ ಹಿಂದೆ ಬಂದ ಗ್ರಂಥಗಳನ್ನು ಓದುತ್ತಿರುವವರೊಡನೆ ವಿಚಾರಿಸಿರಿ. ನಿಮ್ಮ ಒಡೆಯನ ಕಡೆಯಿಂದ ನಿಮ್ಮ ಬಳಿಗೆ ಸತ್ಯವು ಬಂದು ಬಿಟ್ಟಿದೆ. ನೀವಿನ್ನು ಸಂಶಯಿಸುವವರಾಗಬೇಡಿ.

ಇಷ್ಟೆಲ್ಲಾ ಹೇಳಿದ ಮೇಲೂ ಖುರಾನಿನ ಅರ್ಥವಾಗದ ತರ್ಕವೆಂದರೆ ಇಸ್ರಾಈಲರು ಅನ್ನುತ್ತಾರೆ, ಹಿಂದಿನ ಮತ ಅನ್ನುತ್ತಾರೆ, ಅವರೆಲ್ಲಾ (ಯಹೂದಿಯರು) ಮುಸ್ಲಿಮರಲ್ಲ ಅನ್ನುತ್ತಾರೆ, ಆದರೂ ಅಲ್ಲಾಹನೆ ಯಹೂದಿಯರಿಗೆ ಗ್ರಂಥಕೊಟ್ಟದ್ದು ಅಂತ ವಾದಿಸುತ್ತಾರೆ.

ಖುರಾನ್ ಉಲ್ಲೇಕದ ಪ್ರಕಾರ ಖುರಾನ್ ಮೂಲ ಗ್ರಂಥ ಅರೆಬ್ಬಿಯಲ್ಲಿ ಇಲ್ಲ? ಹಾಗಾದರೆ ಖುರಾನ್ ಉಲ್ಲೇಕದ ಪ್ರಕಾರ ಮೂಲ ಗ್ರಂಥ ಬೇರೆ ಬಾಷೆಯಲ್ಲಿ ಇದೆ ಅದು ಯಾವ ಭಾಷೆ – ಅದು ಇನ್ನು ಯುಕ್ತ ಪೂರ್ಣವಾಗಿದೆ ಅನ್ನುತ್ತಾರೆ. ಹಾಗಾದರೆ ಇವರು ಹೇಳಿದ್ದು ಹಳೆ ಒಡಂಬಡಿಕೆ ಮತ್ತು ಹೊಸ ಒಡಂಬಡಿಕೆ ಬೈಬಲ್ ಅಲ್ಲದೆ ಮತ್ತಿನ್ನೇನು ಆಗಲು ಸಾಧ್ಯವಿಲ್ಲ. – ಹಾಗಾದರೆ ಖುರಾನ್ ಹೊಸ ಅವಿಷ್ಕಾರ ಅಲ್ಲ – ಖುರಾನ್ ಹಿಂದೆಯೇ ಇಳಿಸಿಕೊಟ್ಟಿದ್ದ ಸೂಕ್ತಗಳು – ಅದು ಅಲ್ಲಾಹರೇ ಕೊಟ್ಟಿದಿದ್ದು ಎಂಬುದೊಂದೇ ಮುಸ್ಲಿಮರ ವಾದ.

43:3. ನಾವಿದನ್ನು ಅರಬೀ ಭಾಷೆಯ ಕುರ್‌ಆನ್ ಆಗಿ ಕಳಿಸಿರುವೆವು, ನೀವು ಅರಿಯಬೇಕೆಂದು.

43:4. ಅದು ಖಂಡಿತ ನಮ್ಮ ಬಳಿ ಮೂಲ ಗ್ರಂಥದಲ್ಲಿದೆ. ಅದು ಉನ್ನತ ಹಾಗೂ ಯುಕ್ತಿ ಪೂರ್ಣವಾಗಿದೆ. (ಇದು ಯಾವ ಗ್ರಂಥ?)

13: 39. ಅಲ್ಲಾಹನು ತಾನಿಚ್ಛಿಸಿದ್ದನ್ನು ಅಳಿಸಿ ಬಿಡುತ್ತಾನೆ ಮತ್ತು (ತಾನಿಚ್ಛಿಸಿದ್ದನ್ನು) ಉಳಿಸುತ್ತಾನೆ. ಗ್ರಂಥಗಳ ಮಾತೆಯು (ಮೂಲ ಗ್ರಂಥವು) ಅವನ ಬಳಿ ಇದೆ. (ಅಲ್ಲಿಗೆ ಅಲ್ಲಾಹನು ಮೂಲ ಗ್ರಂಥದಿಂದ ತಾನಿಚ್ಛಿಸಿದ್ದನ್ನು ಮಾತ್ರ ಖುರಾನಾಗಿ ಮುಂದಿಟ್ಟಿದ್ದಾನೆ.)

21: 10. ನಾವಿದೋ ನಿಮ್ಮೆಡೆಗೆ ನಿಮ್ಮ ಪ್ರಸ್ತಾಪವಿರುವ (ಯಹೂದರು ಮತ್ತು ಕ್ರೈಸ್ತರ ಬಗ್ಗೆ ಪ್ರಸ್ಥಾಪವಿರುವ) ಒಂದು ಗ್ರಂಥವನ್ನು (ಕುರಾನ್) ಇಳಿಸಿರುವೆವು. ನೀವೇನು ಅರ್ಥಮಾಡಿಕೊಳ್ಳುವುದಿಲ್ಲವೇ?

42: 7. ಈ ರೀತಿ ನಾವು ನಿಮಗೆ ದಿವ್ಯವಾಣಿಯ ಮೂಲಕ ಅರಬೀ ಭಾಷೆಯ ಕುರ್‌ಆನ್‌ಅನ್ನು ನೀಡಿರುವೆವು. ನೀವು ಕೇಂದ್ರ ನಗರ (ಮಕ್ಕಾ)ದವರನ್ನು ಮತ್ತು ಅದರ ಸುತ್ತಮುತ್ತಲಿನವರನ್ನು ಎಚ್ಚರಿಸಬೇಕೆಂದು ಹಾಗೂ ನೀವು, ನಿಸ್ಸಂದೇಹವಾಗಿ ಬರಲಿರುವ ಸಮ್ಮೇಳನದ ದಿನ (ಪುನರುತ್ಥಾನ)ದ ಕುರಿತು ಮುನ್ನೆಚ್ಚರಿಕೆ ನೀಡಬೇಕೆಂದು. ಕೊನೆಗೆ ಒಂದು ಪಂಗಡವು ಸ್ವರ್ಗದಲ್ಲಿರುವುದು ಮತ್ತು ಇನ್ನೊಂದು ಪಂಗಡವು ನರಕದಲ್ಲಿರುವುದು.

12: 2. ನೀವು ಅರ್ಥಯಿಸಬೇಕೆಂದು ನಾವು ಇದನ್ನು ಅರಬೀ ಭಾಷೆಯ ಕುರ್‌ಆನ್ ಆಗಿ ಇಳಿಸಿರುವೆವು.

13: 37. ಇದೇ ರೀತಿ ನಾವು ಈ ಕುರ್‌ಆನ್‌ಅನ್ನು ಅರಬೀ ಭಾಷೆಯಲ್ಲಿರುವ ಆದೇಶದ ರೂಪದಲ್ಲಿ ಇಳಿಸಿರುವೆವು. ನಿಮ್ಮ ಬಳಿಗೆ ಜ್ಞಾನವು ಬಂದ ಬಳಿಕವೂ ನೀವು ಅವರ ಅಪೇಕ್ಷೆಗಳನ್ನು ಅನುಸರಿಸಿದರೆ ನಿಮಗೆ ಅಲ್ಲಾಹನೆದುರು ಸಹಾಯಕರಾಗಿ ಮತ್ತು ರಕ್ಷಕರಾಗಿ ಯಾರೂ ಸಿಗಲಾರರು.

14: 4. ನಾವು ಜನರಿಗೆ (ಸತ್ಯವನ್ನು) ವಿವರಿಸಲಿಕ್ಕಾಗಿ ಪ್ರತಿಯೊಬ್ಬ ದೂತನನ್ನೂ ಆತನ ಸಮುದಾಯದ ಭಾಷೆಯಲ್ಲೇ ಕಳಿಸಿರುವೆವು. ಅಲ್ಲಾಹನು ತಾನಿಚ್ಛಿಸಿದವರನ್ನು ದಾರಿಗೆಡಿಸುತ್ತಾನೆ ಮತ್ತು ತಾನಿಚ್ಛಿಸಿದವರನ್ನು ಸರಿದಾರಿಯಲ್ಲಿ ನಡೆಸುತ್ತಾನೆ. ಅವನು ಅತ್ಯಂತ ಪ್ರಬಲನೂ ಯುಕ್ತಿವಂತನೂ ಆಗಿದ್ದಾನೆ.

39: 28. ಅರಬೀ ಭಾಷೆಯಲ್ಲಿರುವ, ಯಾವ ವಕ್ರತೆಯೂ ಇಲ್ಲದ ಕುರ್‌ಆನ್. ಅವರು ಧರ್ಮನಿಷ್ಠರಾಗಬೇಕೆಂದು (ಇದನ್ನು ಕಳುಹಿಸಲಾಗಿದೆ.).

41: 3. ಇದು, ಸವಿಸ್ತಾರವಾಗಿ ವಿವರಿಸಿದ ವಚನಗಳಿರುವ ಗ್ರಂಥ – ಬುದ್ಧಿವಂತರಿಗಾಗಿ, ಅರಬೀ ಭಾಷೆಯಲ್ಲಿರುವ ಕುರ್‌ಆನ್.

6: 92. ಇದು, ನಾವು ಇಳಿಸಿಕೊಟ್ಟಿರುವ ಸಮೃದ್ಧಿ ತುಂಬಿದ ಗ್ರಂಥ – ತನಗಿಂತ ಮೊದಲು ಬಂದಿದ್ದ ಗ್ರಂಥಗಳನ್ನು ಇದು ಸಮರ್ಥಿಸುತ್ತದೆ. ಇದರ ಮೂಲಕ ನೀವು ಮಕ್ಕಾದವರನ್ನು ಮತ್ತು ಅದರ ಸುತ್ತ ಮುತ್ತಲಿನವರನ್ನು ಎಚ್ಚರಿಸಬೇಕೆಂದು (ಇದನ್ನು ಕಳಿಸಲಾಗಿದೆ). ಪರಲೋಕದಲ್ಲಿ ನಂಬಿಕೆ ಉಳ್ಳವರು, ಇದರಲ್ಲಿ ನಂಬಿಕೆ ಇರಿಸುತ್ತಾರೆ ಮತ್ತು ಅವರು ತಮ್ಮ ನಮಾಝ್‌ಗಳನ್ನು ಕಾಪಾಡುತ್ತಾರೆ.

26: 192. ಇದು (ಕುರ್‌ಆನ್) ಎಲ್ಲ ಲೋಕಗಳ ಒಡೆಯನಿಂದಲೇ ಇಳಿಸಲ್ಪಟ್ಟಿದೆ.

26: 193. ನಂಬಲರ್ಹನಾದ ಆತ್ಮನು (ಜಿಬ್ರೀಲ್) ಇದನ್ನು ಹೊತ್ತು ಇಳಿದಿರುವನು

26: 194. – ನಿಮ್ಮ (ದೂತರ) ಮನದ ಮೇಲೆ, ನೀವು ಎಚ್ಚರಿಸುವವರಾಗಬೇಕೆಂದು

26: 195. – ಸ್ಪಷ್ಟವಾದ ಅರಬೀ ಭಾಷೆಯಲ್ಲಿ.

26: 196. ಖಂಡಿತವಾಗಿಯೂ ಇದು (ಈ ಮಾಹಿತಿ) ಗತಕಾಲದವರ ಗ್ರಂಥಗಳಲ್ಲೂ ಇದೆ.

26: 197. ಇದನ್ನೆಲ್ಲಾ ಇಸ್ರಾಈಲರ ಸಂತತಿಯ ವಿದ್ವಾಂಸರು ಬಲ್ಲರು ಎಂಬುದು ಅವರ ಪಾಲಿಗೆ ಒಂದು ಪುರಾವೆಯಲ್ಲವೇ?

ಖುರಾನ್ ಅಲ್ಲಾಹ ಬರೆದಿಲ್ಲ ಗೌರವಾನ್ವಿತರು ಶ್ರೇಷ್ಠರು ಬರೆದದ್ದು ಎಂದು ಒಪ್ಪಿಕೊಳ್ಳುವ ಖುರಾನ್ ಸಾಲುಗಳು – ಇದು ಮೌಖಿಕವಾಗಿ ಬಂದಿದ್ದು ನಂತರ ಬರೆಯಲ್ಪಟ್ಟಿದ್ದು ಎಂಬುದು ಸುಳ್ಳು – ಅಧ್ಯಾಯ-80:-

11. ಹಾಗಲ್ಲ, ಇದು (ಕುರ್‌ಆನ್) ಒಂದು ಉಪದೇಶವಾಗಿದೆ.

12. ಇಷ್ಟ ಉಳ್ಳವನು ಇದರಿಂದ ಉಪದೇಶ ಪಡೆಯಲಿ.

13. ಇದು ಗೌರವಾರ್ಹ ಹಾಳೆಗಳಲ್ಲಿ ಲಿಖಿತವಾಗಿದೆ. (ಲಿಖಿತವಾಗಿದೆ ಬಾಯಿಂದ ಬಾಯಿಗೆ ಬಂದದ್ದಲ್ಲ.)

14. ಉನ್ನತ ಸ್ಥಾನದಲ್ಲಿದ್ದು, ಪಾವನವಾಗಿದೆ.

15. ಅದು ಬರೆಯುವವರ ಕೈಯಲ್ಲಿದೆ.

16. ಅವರು ಗೌರವಾನ್ವಿತರು ಮತ್ತು ಶ್ರೇಷ್ಠರು.

ಶಾಹಿ ಬುಕಾರಿ ಸಂಪುಟ-4, ಪುಸ್ತಕ-56, ಹದಿತ್-693 ರಲ್ಲಿ ಪ್ರಾವಾದಿ ಮೊಹಮ್ಮದ್ ಹೀಗೆ ಹೇಳುತ್ತಾರೆ, ನಾವು ಕೊನೆಯ ಪ್ರವಾದಿ ಆಗಿದ್ದೇವೆ ಮತ್ತು ಪುನರುಥಾನದ ದಿನ (ಸತ್ತಾಗ) ನಾವೇ ಮುಂದಿರುತ್ತೇವೆ, ರಾಷ್ಟ್ರಗಳಿಗೆ ಪವಿತ್ರ ಗ್ರಂಥಗಳನ್ನು ನಮಗೆ ಮುಂಚೆ ಕೊಡಲಾಗಿತ್ತು, ನಮಗೆ ನಂತರ ಪವಿತ್ರ ಗ್ರಂಥವನ್ನು ಕೊಡಲ್ಪಟ್ಟಿತು. ಅವರು ನಮಗೆ ದಿನದಲ್ಲಿ (ಶುಕ್ರವಾರ) ವ್ಯತ್ಯಾಸದವರಾಗಿದ್ದಾರೆ, ನಂತರದ (ಶನಿವಾರ) ಯಹೂದಿಗಳಿಗೆ ಕೊಡಲಾಗಿತ್ತು, ನಂತರದ ದಿನ (ಭಾನುವಾರ) ಕ್ರೈಸ್ತರಿಗೆ ಕೊಡಲಾಗಿತ್ತು. ಮುಸ್ಲಿಮರಿಗೆ ಏಳುದಿನದಲ್ಲಿ ಒಂದು ದಿನ (ಶುಕ್ರವಾರ) ತಲೆ ಮತ್ತು ದೇಹವನ್ನು ತೊಳೆದುಕೊಳ್ಳುವುದು ಅಗತ್ಯಗೊಳಿಸಲಾಗಿತ್ತು". ಅಲ್ಲಿಗೆ ಮೊಹಮ್ಮದರ ಬಾಯಲ್ಲೇ ಬಂತಲ್ಲಾ ನಿಜ ಸತ್ಯ

ಮಷೆಯ್ಯನ ನಿರೀಕ್ಷೆಯಲ್ಲಿ ಪ್ರವಾದಿಗಳ / ಮತಗಳ ಉದಯವಾಯಿತೆ ?

ಈ ಜಗತ್ತು ಭವಿಷ್ಯ ಪುರಾಣದಲ್ಲಿ ಅನಾದಿಯಿಂದಲೂ ನಂಬಿಕೆ ಇಟ್ಟಿದೆ, ಹಾಗಾಗಿ ಎಲ್ಲಾ ಜಾತಿ ಮತ ಧರ್ಮಗಳಲ್ಲೂ ಅನೇಕ ಭವಿಷ್ಯ ಪುರಾಣಗಳು ರಚನೆಯಾಗಿವೆ. ಯಹೂದಿ ಧರ್ಮ ಅನೇಕ ಮರು ಮತಗಳಿಗೆ ಜನ್ಮನೀಡಿರುವುದಾಗಿದೆ. ಇದರಲ್ಲಿ ಮಷಯ್ಯನ ಬಗ್ಗೆ ಇರುವ ಭವಿಷ್ಯ ಪುರಾಣವೇ ಅನೇಕ ಪ್ರವಾದಿಗಳ ಉದಯಕ್ಕೆ ಅನೇಕ ಮತಗಳ ಆರಂಬಕ್ಕೆ ಕಾರಣವಾಗಿರ ಬಹುದು. ಆದರೆ ಇವೆಲ್ಲವಕ್ಕೂ ಒಂದೇ ಆಸೆ ಜಗತ್ತು ಆ ಏಕ ಮಾತ್ರ ದೇವರ ಆರಾಧಕರಾಗಬೇಕು ಎಂಬ ಅಂತಿಮ ಆಸೆ. ಹಾಗಾಗಿ ಇದೇನಿದು ಮಷಯ್ಯನ ಭವಿಷ್ಯವಾಣಿ ನೋಡೋಣ.

ಯಹೂದಿಗಳ ಮೂಲ ನಂಬಿಕೆ ತತ್ವಗಳು

ಯಹೂದಿಗಳಲ್ಲಿ ನಂಬಿಕೆಯ 13 ಮೂಲ ತತ್ವಗಳಾದ; 1. ದೇವರು ಇದ್ದಾನೆ, 2. ದೇವನು ಒಬ್ಬನೇ ಮತ್ತು ವಿಶಿಷ್ಟವಾದವನು (ಅನನ್ಯ, ಏಕಮಾತ್ರ,), 3. ದೇವರು ಅಸಂಬದ್ದನು (ಅಭುತಿಕನು), 4. ದೇವರು ಶಾಶ್ವತನು (ಸನಾತನನು, ಚಿರವಾದವನು, ಎಂದೆದಿಗೂ ಇರುವವನು, ಶಾಶ್ವತವಾದವನು), 5. ಪ್ರಾರ್ಥನೆಯು ದೇವರಿಗೆ ಮಾತ್ರವೇ ಸಲ್ಲಬೇಕು ಬೇರೆಯದಕ್ಕೆ ಅಲ್ಲ, 6. ಪ್ರವಾದಿಗಳ ಪದಗಳು ಸತ್ಯವಾಗಿವೆ, 7. ಮೋಸೆಸ್ ಭವಿಷ್ಯವಾಣಿ ಸತ್ಯವಾಗಿದೆ, ಮೋಸೆಸ್ ಎಲ್ಲಾ ಪ್ರವಾದಿಗಳಿಗಿಂತ ಹೆಚ್ಚಿನವನು, 8. ಬರೆದಿರುವ ಟೋರಾ (ಮೊದಲ 5 ಬೈಬಲ್ ಪುಸ್ತಕಗಳು) ಮತ್ತು ಮೌಖಿಕ ಟೋರಾ (ಬೋದನೆಗಳು ಹಾಲಿ ತಲ್ಮುದ್ ಮತ್ತು ಇತರೆ ಬರಹಗಳಲ್ಲಿ ಇರುವುದು) ಮೋಸಸ್ ರವರಿಗೆ ಕೊಡಲಾಗಿರುವುದು. 9. ಬೇರೆಯ ಯಾವುದೇ ಟೋರಾ ಇಲ್ಲ. 10. ದೇವರು ಮಾನವನ ಆಲೋಚನೆಗಳನ್ನು ಮತ್ತು ಕಾರ್ಯಗಳು (ಕೆಲಸ, ಕರಾರು ಪತ್ರ) ಬಲ್ಲವನಾಗಿದ್ದಾನೆ 11. ದೇವರು ಒಳ್ಳೆಯವರಿಗೆ ಬಹುಮಾನವನ್ನು ಕೆಟ್ಟವರಿಗೆ ದಂಡನೆಯನ್ನು ಕೊಡುತ್ತಾನೆ. 12. ಮೆಷಯ್ಯನು ಬರುತ್ತಾನೆ. 13. ಸತ್ತವರನ್ನು ಪುನಸ್ಥಾಪಿಸುತ್ತಾನೆ (ಪುನರುಜ್ಜೀವಗೊಳಿಸುತ್ತಾನೆ).[20] ಮೆಷಯ್ಯ/ಮೋಸಸ್ ಎಂಬುದು 5 ಟೋರಾ ಪುಸ್ತಕಗಳಲ್ಲಿ ಇಲ್ಲ, ಆದರೆ ಇತರೆ ಪುಸ್ತಕಗಳಲ್ಲಿ ಕೊಟ್ಟಿರುವಂತೆ ಮೆಷಯ್ಯನು ಬರುವುದು ರಾಜಕೀಯ ನಾಯಕನಾಗಿ, ಯಹೂದಿ ಕಾನೂನು ನಿಪುಣನಾಗಿ, ಉತ್ತಮ ನ್ಯಾಯಧರ್ಮಿಯಾಗಿ, ಚದುರಿದ ಯಹೂದ್ಯರನ್ನು ಕೂಡಿಸಲಿಕ್ಕಾಗಿ, ಯಹೋವನ ವಿಗ್ರಹವನ್ನು ಆರಾಧಿಸುವರು,

[20] http://www.jewfaq.org/beliefs.htm

ಯಹೂದ್ಯರ ಪವಿತ್ರ ದೇವರ ಬೆಟ್ಟ, ದೇವಾಲಯ ಪುನರ್ಸ್ಥಾಪನೆ, ಯುದ್ಧದ ಸಮಾಪ್ತಿ, ಬೆಳೆ ಬೆಳೆಯುವ ಔನತ್ಯ, ಮನುಷ್ಯನ ಅಹಂಕಾರ ತಗ್ಗುವಿಕೆ, ಯಹೋವನ ಏಕದೇವೋಪಾಸನೆ ಮತ್ತು ಧರ್ಮ ಬೋದನೆ ಜಗತ್ತಿನಲ್ಲಿ ಉಂಟಾಗುವುದು – ಎಂದಿರುವ ಗ್ರಂಥಗಳ ಉಲ್ಲೇಕ – ಇದರ ನಿರೀಕ್ಷೆಯಲ್ಲಿ ಅನೇಕ ಮತಗಳು ಉದಯ ಆಗಿರಬಹುದು?

ಯೆರೆಮಿಯ 23:5 ಯೆಹೋವನು ಹೀಗನ್ನುತ್ತಾನೆ – ಇಗೋ, ನಾನು ಮುಂದಿನ ಕಾಲದಲ್ಲಿ ದಾವೀದನೆಂಬ ಮೂಲದಿಂದ ಸದ್ಧರ್ಮಿಯಾದ ಮೊಳಕೆಯನ್ನು ಚಿಗುರಿಸುವೆನು; ಅವನು ರಾಜನಾಗಿ ಆಳುತ್ತಾ ವಿವೇಕದಿಂದ ಕಾರ್ಯವನ್ನು ಸಾಧಿಸುತ್ತಾ ದೇಶದಲ್ಲಿ ನೀತಿನ್ಯಾಯಗಳನ್ನು ನಿರ್ವಹಿಸುವನು. (ರಾಜಕೀಯ ನಾಯಕ)

ಯೆಶಾಯ 11 ನೇ ಅಧ್ಯಾಯ – 1 ಇಷಯನ ಬುಡದಿಂದ ಒಂದು ಚಿಗುರು ಒಡೆಯುವುದು ಮತ್ತು ಅದರ ಬೇರಿನಿಂದ ಹೊರಟ ಕೊಂಬೆಯು ಫಲಿಸುವುದು. 2. ಆ ಅಂಕುರದ ಮೇಲೆ ಜ್ಞಾನ ವಿವೇಕದಾಯಕ ಆತ್ಮ, ಆಲೋಚನಾ ಪರಾಕ್ರಮಗಳನ್ನು ಹುಟ್ಟಿಸುವ ಆತ್ಮ, ತಿಳುವಳಿಕೆಯನ್ನೂ ಮತ್ತು ಯೆಹೋವನ ಭಯವನ್ನೂ ಉಂಟುಮಾಡುವ ಆತ್ಮ, ಅಂತು ಯೆಹೋವನ ಆತ್ಮವೇ ನೆಲೆಗೊಂಡಿರುವುದು. 3 ಆತನು ಯೆಹೋವನ ಭಯದಲ್ಲಿ ಆನಂದಿಸುವನು. ಆತನು ಕಣ್ಣಿಗೆ ಕಂಡಂತೆ ತೀರ್ಪು ಮಾಡುವುದಿಲ್ಲ. ಕಿವಿಗೆ ಬಿದ್ದಂತೆ ನಿರ್ಣಯಿಸುವುದಿಲ್ಲ. 4 ಆದರೆ ಬಡವರಿಗೋಸ್ಕರ ನ್ಯಾಯವಾಗಿ ತೀರ್ಪುಮಾಡುವನು. ಲೋಕದ ದೀನರಿಗಾಗಿ ಧರ್ಮವನ್ನು ನಿರ್ಣಯಿಸುವನು. ಭೂಮಿಯನ್ನು ತನ್ನ ಬಾಯಿಯ ಕೋಲಿನಿಂದ ದಂಡಿಸುವನು. ದುಷ್ಟನನ್ನು ತನ್ನ ಬಾಯಿ ಉಸಿರಿನಿಂದ ಕೊಲ್ಲುವನು. 5 ಧರ್ಮವೇ ಅವನಿಗೆ ನಡುಕಟ್ಟು, ಪ್ರಾಮಾಣಿಕತೆಯೇ ಸೊಂಟಪಟ್ಟಿ. (ಯಹೂದಿಗರ ಕಾನೂನಿನಲ್ಲಿ ನಿಪುಣನಾಗಿರುವನು)

ಯೆರೆಮಿಯ 33:15 ಆ ದಿನಗಳಲ್ಲಿ, ಆ ಕಾಲದಲ್ಲಿ, ದಾವೀದನೆಂಬ ಮೂಲದಿಂದ ಸದ್ಧರ್ಮಿಯಾದ ಮೊಳಕೆಯನ್ನು ಚಿಗುರಿಸುವೆನು; ಅವನು ದೇಶದಲ್ಲಿ ನೀತಿನ್ಯಾಯಗಳನ್ನು ನಿರ್ವಹಿಸುವನು. (ಉತ್ತಮ ನ್ಯಾಯಾಧೀಶನು)

ಯೆಹೆಜ್ಕೇಲನು 38:16 ನನ್ನ ಜನರಾದ ಇಸ್ರಾಯೇಲರ ಮೇಲೆ ಬಿದ್ದು, ಕಾರ್ಮುಗಿಲಿನಂತೆ ದೇಶವನ್ನು ಮುಚ್ಚಿಬಿಡುವಿ; ಗೋಗನೇ, ಜನಾಂಗಗಳ ಕಣ್ಣೆದುರಿಗೆ ನಿನ್ನ ನಾಶನದಿಂದ ನನ್ನ ಗೌರವವನ್ನು ಕಾಪಾಡಿಕೊಂಡು ನಾನೇ ಯೆಹೋವನೆಂದು

ಜನಾಂಗಗಳಿಗೆ ಗೋಚರವಾಗುವಂತೆ ನಾನು ನಿನ್ನನ್ನು ಕಾಲಾನುಕಾಲಕ್ಕೆ ನನ್ನ ದೇಶದ ಮೇಲೆ ಬೀಳಮಾಡುವೆನು. (ಆತನು ಬರುವ ಮುಂಚೆ ಯುದ್ಧ ಆಗಿರುತ್ತೆ)

ಯೆಶಾಯ 11 ನೇ ಅಧ್ಯಾಯ – 11 ಆ ದಿನದಲ್ಲಿ ಕರ್ತನು ಉಳಿದ ತನ್ನ ಜನರನ್ನು ಬಿಡಿಸಿಕೊಳ್ಳುವುದಕ್ಕೆ ಎರಡನೆಯ ಸಾರಿ ಕೈಹಾಕಿ, ಅಶ್ಶೂರ, ಐಗುಪ್ತ, ಪತ್ರೋಸ್, ಕೂಷ್, ಏಲಾಮ್, ಶಿನಾರ್, ಹಮಾಥ್ ಸಮುದ್ರದ ಕರಾವಳಿ ದ್ವೀಪಗಳಿಂದಲೂ ಉಳಿದವರನ್ನು ಬರಮಾಡಿಕೊಳ್ಳುವನು. 12 ಅವನು ಜನಾಂಗಗಳಲ್ಲಿ ಧ್ವಜವನ್ನೆತ್ತಿ, ಇಸ್ರಾಯೇಲರಲ್ಲಿ ಸೆರೆಗೆ ಒಯ್ಯಲ್ಪಟ್ಟವರನ್ನೂ, ಯೆಹೂದದಿಂದ ಚದರಿದವರನ್ನೂ ಭೂಮಿಯ ನಾಲ್ಕು ಕಡೆಗಳಿಂದಲೂ ಕೂಡಿಸುವನು.

ಯೆರೆಮಿಯ 23: 8 ಪ್ರಮಾಣಮಾಡುವದನ್ನು ಬಿಟ್ಟು ಇಸ್ರಾಯೇಲ್ ಮನೆತನವೆಂಬ ಸಂತಾನವನ್ನು ಬಡಗಣ ದೇಶದಿಂದಲೂ ತಾನು ಅವರನ್ನು ತಳ್ಳಿಬಿಟ್ಟಿದ್ದ ಸಕಲಸೀಮೆಗಳಿಂದಲೂ ಬರಮಾಡಿ ಉದ್ಧರಿಸಿದ ಯೆಹೋವನ ಜೀವದಾಣೆ ಎಂದು ಪ್ರಮಾಣಮಾಡುವರು; ಅವರು ಸ್ವದೇಶದಲ್ಲಿ ಸುಖವಾಸಿಗಳಾಗುವರು. ಇದು ಯೆಹೋವನ ನುಡಿ.

ಯೆರೆಮಿಯ 30 : 3 ಇಗೋ ನಾನು ನನ್ನ ಜನರಾದ ಇಸ್ರಾಯೇಲ್ಯರನ್ನೂ ಯೆಹೂದ್ಯರನ್ನೂ ಅವರ ದುರವಸ್ಥೆಯಿಂದ ತಪ್ಪಿಸುವ ದಿನಗಳು ಬರುವವು. ಆಗ ನಾನು ಅವರನ್ನು ಅವರ ಪಿತೃಗಳಿಗೆ ಅನುಗ್ರಹಿಸಿದ ದೇಶಕ್ಕೆ ಪುನಃ ಬರಮಾಡುವೆನು. ಅವರು ಅದನ್ನು ಅನುಭವಿಸುವರು. ಇದು ಯೆಹೋವನ ನುಡಿ.

ಹೋಶೇ 3: 4–5 ಇದರಂತೆ ರಾಜಮುಖಂಡ, ಯಜ್ಞ, ಸ್ತಂಭ, ಏಫೋದು, ವಿಗ್ರಹ, ಇವುಗಳಿಲ್ಲದೆ ಇಸ್ರಾಯೇಲ್ಯರು ಬಹು ದಿವಸ ತಾಳಿಕೊಂಡಿರುವರು; ಅನಂತರ ಅವರು ತಮ್ಮ ದೇವರಾದ ಯೆಹೋವನನ್ನೂ ತಮ್ಮ ರಾಜನಾದ ದಾವೀದನನ್ನೂ ಪುನಃ ಆಶ್ರಯಿಸುವರು; ಹೌದು, ಅಂತ್ಯಕಾಲದಲ್ಲಿ ಯೆಹೋವನನ್ನೂ ಆತನ ದಯೆಯನ್ನೂ ಭಯಭಕ್ತಿಯಿಂದ ಮರೆಹೊಗುವರು.

ಯೆಶಾಯ ಅಧ್ಯಾಯ 2 : 2–3 ಅಂತ್ಯಕಾಲದಲ್ಲಿ ಯೆಹೋವನ ಮಂದಿರದ ಬೆಟ್ಟವು ಗುಡ್ಡಬೆಟ್ಟಗಳಿಗಿಂತ ಉನ್ನತೋನ್ನತವಾಗಿ ಬೆಳೆದು ನೆಲೆಗೊಳ್ಳುವುದು. ಆಗ ಸಕಲ ದೇಶಗಳವರು ಅದರ ಕಡೆಗೆ ಪ್ರವಾಹಗಳಂತೆ ಬರುವರು. ಹೊರಟು ಬಂದ ಬಹು ಜನಾಂಗದವರು, ಬನ್ನಿರಿ, ಯೆಹೋವನ ಪರ್ವತಕ್ಕೆ, ಯಾಕೋಬ್ಯರ ದೇವರ ಮಂದಿರಕ್ಕೆ ಹೋಗೋಣ, ಆತನು ತನ್ನ ಮಾರ್ಗಗಳ ವಿಷಯವಾಗಿ ನಮಗೆ ಬೋಧನೆ ಮಾಡುವನು. ನಾವು ಆತನ ದಾರಿಗಳಲ್ಲಿ ನಡೆಯುವೆವು ಎಂದು ಹೇಳುವರು. ಏಕೆಂದರೆ

ಚೀಯೋನಿನಿಂದ ಧರ್ಮೋಪದೇಶವೂ, ಯೆರೂಸಲೇಮಿನಿಂದ ಯೆಹೋವನ ವಾಕ್ಯವೂ ಹೊರಡುವವು.

ಯೆಶಾಯ 11 ನೇ ಅಧ್ಯಾಯ – 10 ಆ ದಿನದಲ್ಲಿ ಜನಾಂಗಗಳು ತಮಗೆ ಧ್ವಜಪ್ರಾಯನಾಗಿ ನಿಂತಿರುವ ಇಷಯನ ಅಂಕುರದವನನ್ನು ಆಶ್ರಯಿಸುವರು; ಅವನ ವಿಶ್ರಾಂತಿಯ ಸ್ಥಳವು ವೈಭವವುಳ್ಳದ್ದಾಗಿರುವುದು.

ಮಿಕ ಅಧ್ಯಾಯ 4: 2 ಹೊರಟುಬಂದ ಬಹು ದೇಶಗಳವರು, ಬನ್ನಿರಿ, ಯೆಹೋವನ ಪರ್ವತಕ್ಕೆ, ಯಾಕೋಬ್ಯರ ದೇವರ ಮಂದಿರಕ್ಕೆ ಹೋಗೋಣ, ಆತನು ತನ್ನ ಮಾರ್ಗಗಳ ವಿಷಯವಾಗಿ ನಮಗೆ ಬೋಧನೆ ಮಾಡುವನು, ನಾವು ಆತನ ದಾರಿಗಳಲ್ಲಿ ನಡೆಯುವೆವು ಎಂದು ಹೇಳುವರು. ಏಕೆಂದರೆ ಚೀಯೋನಿನಿಂದ ಧರ್ಮೋಪದೇಶವೂ, ಯೆರೂಸಲೇಮಿನಿಂದ ಯೆಹೋವನ ವಾಕ್ಯವೂ ಹೊರಡುವವು. 3 ಆತನು ಬಹು ರಾಷ್ಟ್ರದವರ ವ್ಯಾಜ್ಯಗಳನ್ನು ವಿಚಾರಿಸುವನು, ಪ್ರಬಲ ಜನಾಂಗಗಳಿಗೆ ನ್ಯಾಯತೀರಿಸುವನು. ಅವರೋ ತಮ್ಮ ಕತ್ತಿಗಳನ್ನು ಕುಲುಮೆಗೆ ಹಾಕಿ ಗುಳಗಳನ್ನಾಗಿಯೂ, ಬರ್ಜಿಗಳನ್ನಾಗಿ ಕುಡುಗೋಲುಗಳನ್ನಾಗಿಯೂ ಮಾಡುವರು. ಜನಾಂಗವು ಜನಾಂಗಕ್ಕೆ ವಿರುದ್ಧವಾಗಿ ಕತ್ತಿಯನ್ನೆತ್ತದು. ಇನ್ನು ಯುದ್ಧಾಭ್ಯಾಸವು ನಡೆಯುವುದೇ ಇಲ್ಲ.

ಜೆಕರ್ಯ ಅಧ್ಯಾಯ 14:9 ಯೆಹೋವನು ಭೂಲೋಕಕ್ಕೆಲ್ಲಾ ರಾಜನಾಗಿರುವನು; ಆ ದಿನದಲ್ಲಿ ಯೆಹೋವನೊಬ್ಬನೇ ದೇವರೆಂದೂ ಆತನ ಹೆಸರೊಂದೇ ಸ್ತುತ್ಯವೆಂದೂ ಎಲ್ಲರಿಗೂ ತಿಳಿದಿರುವುದು.

ಚೆಫನ್ಯ ಅಧ್ಯಾಯ 3:13 ಇಸ್ರಾಯೇಲಿನಲ್ಲಿ ಉಳಿದವರು ಅನ್ಯಾಯವನ್ನು ಮಾಡರು, ಸುಳ್ಳಾಡರು; ಅವರ ಬಾಯಲ್ಲಿ ಮೋಸದ ನಾಲಗೆಯು ಇರದು; ಕುರಿ ಮಂದೆಯಂತೆ ಮೇದು ಮಲಗಿಕೊಳ್ಳುವರು, ಅವರನ್ನು ಯಾರೂ ಹೆದರಿಸರು.

ಚೆಫನ್ಯ ಅಧ್ಯಾಯ 3: 9 ಆಗ ಎಲ್ಲರೂ ಒಂದೇ ಮನಸ್ಸಿನಿಂದ ಯೆಹೋವನನ್ನು ಸೇವಿಸಿ ಆತನ ಹೆಸರನ್ನೆತ್ತಿ ಪ್ರಾರ್ಥಿಸುವಂತೆ ಜನಾಂಗಗಳವರ ತುಟಿಗಳನ್ನು ಮಾರ್ಪಡಿಸಿ ಶುದ್ಧಿಮಾಡುವೆನು.

ಯೆಶಾಯ 2 ನೇ ಅಧ್ಯಾಯ – 11 ಮನುಷ್ಯನ ಗರ್ವದೃಷ್ಟಿಯು ತಗ್ಗಿಹೋಗುವುದು, ಮನುಷ್ಯರ ಅಹಂಕಾರವು ತಗ್ಗುವುದು. ಯೆಹೋವನೊಬ್ಬನೇ ಆ ದಿನದಲ್ಲಿ ಉನ್ನತೋನ್ನತನಾಗಿರುವನು.

ಯೆಶಾಯ 59 ನೇ ಅಧ್ಯಾಯ – 20 ಒಬ್ಬ ವಿಮೋಚಕನು ಚೀಯೋನಿಗೂ, ದ್ರೋಹವನ್ನು ಬಿಟ್ಟುಬಿಟ್ಟ ಯಾಕೋಬ್ಯರ ಬಳಿಗೂ ಬರುವನು, ಯೆಹೋವನೇ ಇದನ್ನು ನುಡಿದಿದ್ದಾನೆ.

ಯೆಶಾಯ 4 ನೇ ಅಧ್ಯಾಯ – 2 ಆ ದಿನದಲ್ಲಿ ಯೆಹೋವನು ದಯಪಾಲಿಸಿದ ಬೆಳೆಯಿಂದ ಇಸ್ರಾಯೇಲರಲ್ಲಿ ಉಳಿದವರಿಗೆ ಸೌಂದರ್ಯವೂ, ಮಹಿಮೆಯೂ ಉಂಟಾಗುವುವು. ದೇಶದಿಂದ ಫಲವೂ, ಉನ್ನತಿಯೂ, ಭೂಷಣವೂ ಲಭಿಸುವುದು.

ಹೀಗೆ ಒಟ್ಟಾರೆ ಯಹೂದಿಯರ ಭವಿಷ್ಯವಾಣಿ ಅವರಿಗೆ ಮುಳ್ಳು ಆಗಿದೆ ಇತರೆ ಮತಗಳು ಯಹೂದಿ ಮತದವರನ್ನು ಧಾರಿ ತಪ್ಪಿಸಲು ನಾಟಕಗಳನ್ನು ಆಡಿ ಅದಲ್ಲ ನಿಮ್ಮ ಮತ ಸತ್ಯ ಮತ ಇದು ಎಂದು ಕಿವಿಗೆ ಮಲ್ಲಿಗೆ ಹೂವಿಂದ ಹಿಡಿದು ಸೂರ್ಯಕಾಂತಿ ಹೂವಿನವರೆಗೆ ಇಟ್ಟವರು ಚರಿತ್ರೆಯಲ್ಲಿ ಕಾಣುತ್ತಾರೆ.

**ಖೋರೇಷ್ ಜನಾಂಗದಲ್ಲಿ ವಿಗ್ರಹಾರಾದನೆಗೆ ಅಬ್ರಹಾಮನ ಸಂತತಿ ಯಾಕೋಬ (ಜೆಕೋಬ) ಕಾರಣ ಎನ್ನುತ್ತದೆ ಹಳೆ ಬೈಬಲ್:–**

ಖೋರೆಷನ ದಿಗ್ವಿಜಯಕ್ಕೆ ಯೆಹೋವನೇ ಕಾರಣ – ಯೆಶಾಯ ಅಧ್ಯಾಯ–41: 6–7 – ಒಬ್ಬರಿಗೊಬ್ಬರು ಸಹಾಯಮಾಡಿದರು, ಪ್ರತಿಯೊಬ್ಬನು ತನ್ನ ಸಹೋದರನಿಗೆ, ಧೈರ್ಯವಾಗಿರು ಎಂದು ಹೇಳಿದನು. – ಹಾಗೆಯೇ ಶಿಲ್ಪಿಯು ಎರಕದವನನ್ನೂ, ಸುತ್ತಿಗೆಯಿಂದ ಸಮಮಾಡುವವನು ಅಡಿಗಲ್ಲಿನ ಮೇಲೆ ಕುಟ್ಟುವವನನ್ನೂ ಪ್ರೋತ್ಸಾಹಗೊಳಿಸಿದರು. ಬೇಸಿಗೆ ಚೆನ್ನಾಗಿದೆ ಎಂದು ಹೇಳಿ ವಿಗ್ರಹವನ್ನು ಕದಲದಂತೆ ಮೊಳೆಗಳಿಂದ ಜಡಿದರು.

<u>ವಿಗ್ರಹಾರಾದನೆಯ ಬಗ್ಗೆ ಇಸ್ರೇಲರಲ್ಲಿ ಆಕ್ರೋಶ ಮೊಹಮ್ಮದರಿಗೆ ಮಾರ್ಗವಾಯಿತೆ:–</u>

ವಿಗ್ರಹಾರಾಧನೆಯ ಮೂಢತನ – ಯೆಶಾಯ ಅಧ್ಯಾಯ 44: 9–23 (ಇದು ಮೊದಲ ನಾಲ್ಕು ಟೋರಾ ಗ್ರಂಥದಲ್ಲಿ ಬರುವುದಿಲ್ಲ ಎಂಬುದು ಗಮನವಿರಲಿ ಯಾಕೆಂದರೆ ಇದು ನಂತರದ ಯೆಶಾಯ ಎಂಬುವವರು ರಚಿಸಿದ ಗ್ರಂಥ ಮಾರ್ಗದರ್ಶನದಲ್ಲಿ ಬರುತ್ತೆ. ಕೆಲವರು ಹೇಳುವ ಪ್ರಕಾರ ಯಹೂದಿ ಗ್ರಂಥಗಳು ಕೆಲವಾರು ಆಚರಣೆಗಳನ್ನು ಕಲುಷಿತವಾಗಿ ಸೇರಿಸಿದ್ದಾರೆ ಅಂತ ವಾದ ಇದೆ. – ಆದರೆ ಆ ವಾದ ಸರಿಯಲ್ಲ ಮೊದಲ ನಾಲ್ಕು ಗ್ರಂಥಗಳಲ್ಲೇ ಈ ವಿಗ್ರಹಾರಾದನೆಯ ಬಗ್ಗೆ ಬೆಂಕಿ ಕಾರುತ್ತಾರೆ. ಖುರಾನಿನ ವಿಗ್ರಹಾರಾಧನೆಯ ವಿರೋಧಕ್ಕೆ ಯಹೂದಿ ಮತ್ತು ಕ್ರೈಸ್ತರ ನಂಬಿಕೆ ಮೂಲಾಧಾರವಾಗಿದೆ, ಅದು ಹೇಗೆ ಈ ಕೆಳಗಿನ ಶ್ಲೋಕಗಳಲ್ಲಿ ಉತ್ತರವಿದೆ.

ಹಳೆ ಬೈಬಲ್ – ಯೆಶಾಯ 44: 9 ವಿಗ್ರಹ ಕೆತ್ತುವವರೆಲ್ಲಾ ನಿರರ್ಥಕರು, ಅವರ ಇಷ್ಟದ ವಿಗ್ರಹಗಳು ಯಾವುದಕ್ಕೂ ಬಾರವು, ವಿಗ್ರಹಗಳ ಪಕ್ಷದ ಸಾಕ್ಷಿಗಾರರು ನೋಡುವವರಲ್ಲ, ಗ್ರಹಿಸುವವರಲ್ಲ, ಅವರು ನಾಚಿಕೆಗೆ ಗುರಿಯಾಗುವರು. 10 ದೇವತೆಯನ್ನು ರೂಪಿಸುವವರೂ, ವ್ಯರ್ಥವಿಗ್ರಹವನ್ನು ಎರಕ ಹೊಯ್ಯುವವರೂ ಎಂಥವರು? 11 ವಿಗ್ರಹ ಶರಣರೆಲ್ಲಾ ಆಶಾಭಂಗಪಡುವರು, ಅದನ್ನು ಕೆತ್ತಿದವರು ಮನುಷ್ಯಮಾತ್ರದವರೇ. ಅವರೆಲ್ಲರು ಒಟ್ಟುಗೂಡಿಕೊಂಡು ನಿಲ್ಲಲಿ. ಅವರು ಒಟ್ಟಿಗೆ ಹೆದರಿಕೊಂಡು ಲಜ್ಜೆಪಡುವರು. 12 ಕಮ್ಮಾರನು ತನ್ನ ಸಲಕರಣೆಗಳನ್ನು ತೆಗೆದುಕೊಂಡು ಕೆಂಡದಲ್ಲಿ ಕೆಲಸಮಾಡುತ್ತಾ, ಚಮಟಿಕೆಗಳಿಂದ ಬಡಿದು ತೋಳಿನ ಬಲದಿಂದ ವಿಗ್ರಹವನ್ನು ರೂಪಿಸುವನು. ಅವನು ಹಸಿದು ಬಳಲುವನು, ನೀರಿಲ್ಲದೆ ದಣಿಯುವನು. 13 ಬಡಗಿಯು ಮರಕ್ಕೆ ನೂಲು ಹಾಕಿ ಮೊಳೆಯಿಂದ ಗೆರೆಯೆಳೆದು ಬಾಚಿಗಳಿಂದ ಕೆತ್ತಿ, ಕೈವಾರದಿಂದ ಗುರುತಿಸಿ, ಅದು ಮನೆಯಲ್ಲಿ ವಾಸಿಸತಕ್ಕದ್ದಾಗಲೆಂದು ಮನುಷ್ಯನ ಆಕಾರಕ್ಕೆ ತಂದು ಮನುಷ್ಯನ ಅಂದದಂತೆ ರೂಪಿಸುವನು. 14 ಅವನು ತನ್ನ ಕೆಲಸಕ್ಕಾಗಿ ದೇವದಾರುಗಳನ್ನು ಕಡಿಯುವನು, ತುರಾಯಿ, ಅಲ್ಲೋನ್ ಮರಗಳನ್ನು ತೆಗೆದುಕೊಳ್ಳುವನು. ವನವೃಕ್ಷಗಳನ್ನು ತನಗೋಸ್ಕರ ತೆಗೆದುಕೊಳ್ಳುವನು. ಅವನು ಪೀತದಾರವನ್ನು ನೆಡಲು, ಮಳೆಯು ಅದನ್ನು ಬೆಳೆಯಿಸುವುದು. 15 ಅದು ಸೌದೆಗಾಗುವುದು. ಅದರಿಂದ ಬೆಂಕಿಯನ್ನು ಉರಿಸಿ ಚಳಿಕಾಯಿಸಿಕೊಳ್ಳುವನು. ಅವನು ಬೆಂಕಿಯನ್ನು ಹಚ್ಚಿ ರೊಟ್ಟಿಯನ್ನು ಸುಡುವನು. ಅದರಲ್ಲೇ ಒಂದು ದೇವರನ್ನು ಮಾಡಿಕೊಂಡು ಪೂಜಿಸುವನು, ವಿಗ್ರಹವನ್ನು ಮಾಡಿ ಅದಕ್ಕೆ ಅಡ್ಡಬೀಳುವನು. 16 ಒಂದು ಭಾಗವನ್ನು ಬೆಂಕಿಯಲ್ಲಿ ಉರಿಸುವನು, ಅದರ ಮೇಲೆ ಮಾಂಸವನ್ನು ಸುಡುವನು. ಅದನ್ನು ತಿಂದು ತೃಪ್ತನಾಗುವನು. ತನ್ನನ್ನು ಕಾಯಿಸಿಕೊಳ್ಳುತ್ತಾ, ಆಹಾ, ಬೆಂಕಿಯನ್ನು ಕಂಡೆ, ಬೆಚ್ಚಗಾಯಿತು ಎಂದುಕೊಳ್ಳುವನು. 17 ಅದರಲ್ಲಿ ಉಳಿದ ಭಾಗವನ್ನು ತನ್ನ ದೇವರನ್ನಾಗಿಯೂ, ಕೆತ್ತಿದ ವಿಗ್ರಹವನ್ನಾಗಿಯೂ ಮಾಡಿ ಅದಕ್ಕೆ ಅಡ್ಡಬಿದ್ದು ನಮಸ್ಕರಿಸಿ, ನೀನೇ ನನ್ನ ದೇವರು, ನನ್ನನ್ನು ರಕ್ಷಿಸು ಎಂದು ಪ್ರಾರ್ಥಿಸುವನು. 18 ಇಂಥವರು ಏನೂ ತಿಳಿಯದವರು, ಏನೂ ಗ್ರಹಿಸಲಾರದವರು ಏಕೆಂದರೆ ಅವರ ಕಣ್ಣು ಕಾಣದಂತೆಯೂ, ಹೃದಯ ಗ್ರಹಿಸದಂತೆಯೂ ಯೆಹೋವನು ಮುಚ್ಚಿಬಿಟ್ಟಿದ್ದಾನೆ. 19 ನಾನು ಒಂದು ಭಾಗವನ್ನು ಬೆಂಕಿಯಲ್ಲಿ ಉರಿಸಿದೆನು. ಹೌದು, ಅದರ ಕೆಂಡದಲ್ಲಿ ರೊಟ್ಟಿ ಮಾಡಿ ಮಾಂಸವನ್ನು ಸುಟ್ಟು ತಿಂದೆನಲ್ಲಾ, ಉಳಿದ ಭಾಗದಿಂದ ಅಸಹ್ಯವಾದ ವಿಗ್ರಹವನ್ನು ನಾನು ಮಾಡಲೋ? ಮರದ ತುಂಡಿಗೆ ಅಡ್ಡಬೀಳಬಹುದೋ?

ಎಂದುಕೊಳ್ಳುವಷ್ಟು ಜ್ಞಾನ ವಿವೇಕಗಳು ಯಾರಿಗೂ ಇಲ್ಲ, ಯಾರೂ ಇದನ್ನು ಮನಸ್ಸಿಗೆ ತಾರರು. 20 ಅವನು ತಿನ್ನುವುದು ಬೂದಿಯೇ; ಮೋಸಕ್ಕೊಳಗಾದ ಹೃದಯವು ಅವನಿಗೆ ದಾರಿತಪ್ಪಿಸಿದ ಕಾರಣ, ನನ್ನ ಕೈ ಸುಳ್ಳನ್ನು ಹಿಡಿದಿದೆಯಲ್ಲಾ ಎಂದುಕೊಳ್ಳಲೂ ಆಗದು. ತನ್ನನ್ನು ರಕ್ಷಿಸಿಕೊಳ್ಳಲೂ ಆಗದು. 21 ಯಾಕೋಬೇ, ಇಸ್ರಾಯೇಲೇ, ಈ ವಿಷಯಗಳನ್ನು ಜ್ಞಾಪಕದಲ್ಲಿಟ್ಟುಕೋ, ನನ್ನ ಸೇವಕನಾಗಿದ್ದೀಯಲ್ಲವೇ. ಇಸ್ರಾಯೇಲೇ, ನಾನು ನಿನ್ನನ್ನು ನಿರ್ಮಿಸಿದೆನು, ನೀನು ನನ್ನ ಸೇವಕನು, ನಿನ್ನನ್ನು ಮರೆತುಬಿಡೆನು. 22 ನಿನ್ನ ದ್ರೋಹಗಳನ್ನು ಮೋಡದಂತೆ ಪರಿಹರಿಸಿದ್ದೇನೆ. ನಿನ್ನ ಪಾಪಗಳನ್ನು ಮಂಜಿನಂತೆ ಹಾರಿಸಿದ್ದೇನೆ, ನಿನ್ನನ್ನು ವಿಮೋಚಿಸಿದ್ದೇನೆ, ನನ್ನ ಕಡೆಗೆ ತಿರುಗಿಕೋ. 23 ಆಕಾಶವೇ, ಹರ್ಷಧ್ವನಿಗೈ, ಯೆಹೋವನು ತನ್ನ ಕಾರ್ಯವನ್ನು ನೆರವೇರಿಸಿದ್ದಾನೆ. ಭೂಮಿಯ ಅಧೋಭಾಗವೇ, ಆರ್ಭಟಿಸು. ಪರ್ವತಗಳೇ, ವನವೇ, ಸಕಲವನವೃಕ್ಷಗಳೇ, ಉತ್ಸಾಹಧ್ವನಿಮಾಡಿರಿ. ಏಕೆಂದರೆ ಯೆಹೋವನು ಯಾಕೋಬನ್ನು ವಿಮೋಚಿಸಿದ್ದಾನೆ. ಇಸ್ರಾಯೇಲನ ರಕ್ಷಣೆಯಿಂದ ತನ್ನ ಮಹಿಮೆಯನ್ನು ಪ್ರಚುರಗೊಳಿಸುವನು.

ಹಳೆ ಬೈಬಲ್ ವಿಮೋಚನಕಾಂಡ 20:4 ನಿನಗೆ ಆಕಾಶದಲ್ಲಾಗಲಿ ಭೂಮಿಯಲ್ಲಾಗಲಿ ಭೂಮಿಯ ಕೆಳಗಿರುವ ನೀರುಗಳಲ್ಲಾಗಲಿ ಯಾವದರ ವಿಗ್ರಹವನ್ನಾಗಲಿ ರೂಪವನ್ನಾಗಲಿ ನೀನು ಮಾಡಿಕೊಳ್ಳ ಬಾರದು. – ವಿಮೋಚನಕಾಂಡ 23:24 ಅವರ ದೇವರುಗಳಿಗೆ ನೀವು ಅಡ್ಡಬೀಳಲೂ ಬಾರದು, ಅವುಗಳನ್ನು ಸೇವಿಸಲೂಬಾರದು. ಇದಲ್ಲದೆ ನೀವು ಅವರ ಕೃತ್ಯಗಳ ಪ್ರಕಾರ ಮಾಡದೆ ಅವರನ್ನು ನಿರ್ಮೂಲ ಮಾಡಿಬಿಟ್ಟು ಅವರ ವಿಗ್ರಹಗಳನ್ನು ಪೂರ್ಣವಾಗಿ ಒಡೆದು ಹಾಕಬೇಕು. – ವಿಮೋಚನಕಾಂಡ 34:13 ಆದರೆ ನೀವು ಅವರ ಯಜ್ಞ ವೇದಿಗಳನ್ನು ಹಾಳುಮಾಡಿ ವಿಗ್ರಹಗಳನ್ನು ಒಡೆದು (ಅಶೇರ) ವಿಗ್ರಹ ಸ್ತಂಭಗಳನ್ನು ಕಡಿದುಹಾಕಬೇಕು. – ಯಾಜಕಕಾಂಡ 19:4 ನೀವು ವಿಗ್ರಹ ಗಳ ಕಡೆಗೆ ತಿರುಗಿಕೊಳ್ಳಬೇಡಿರಿ ನಿಮಗೋಸ್ಕರವಾಗಿ ಎರಕದ ದೇವರುಗಳನ್ನು ಮಾಡಿಕೊಳ್ಳಬೇಡಿರಿ; ನಿಮ್ಮ ದೇವರಾಗಿರುವ ಕರ್ತನು ನಾನೇ. – ಯಾಜಕಕಾಂಡ 26:1 ನೀವು ನಿಮಗಾಗಿ ವಿಗ್ರಹಗಳನ್ನಾಗಲಿ ಕೆತ್ತಿದ ಪ್ರತಿಮೆಯನ್ನಾಗಲಿ ಮಾಡಿಕೊಳ್ಳಬೇಡಿರಿ; ನಿಲ್ಲಿಸುವ ಪ್ರತಿಮೆಯನ್ನಾಗಲಿ ಮಾಡಿಕೊಳ್ಳಬೇಡಿರಿ. ಕಲ್ಲಿನ ವಿಗ್ರಹಗಳನ್ನಾಗಲಿ ನಿಮ್ಮ ದೇಶದಲ್ಲಿಟ್ಟು ಕೊಂಡು ಅವುಗಳಿಗೆ ಅಡ್ಡ ಬೀಳಬೇಡಿರಿ. ನಿಮ್ಮ ದೇವರಾಗಿರುವ ಕರ್ತನು ನಾನೇ. – ಯಾಜಕಕಾಂಡ 26:30 ಇದಲ್ಲದೆ ನಾನು ನಿಮ್ಮ ಉನ್ನತ ಸ್ಥಳಗಳನ್ನು ಹಾಳುಮಾಡಿ ನಿಮ್ಮ ಪ್ರತಿಮೆಗಳನ್ನು ಕಡಿದುಹಾಕಿ

ವಿಗ್ರಹಗಳ ಮೇಲೆ ನಿಮ್ಮ ಹೆಣಗಳನ್ನು ಹಾಕುವೆನು; ನನ್ನ ಪ್ರಾಣವು ನಿಮ್ಮನ್ನು ಹೇಸಿಕೊಳ್ಳು ವದು. – ಅರಣ್ಯಕಾಂಡ 33:52 ನೀವು ನಿಮ್ಮ ಮುಂದೆ ಆ ದೇಶದ ಸಮಸ್ತ ನಿವಾಸಿಗಳನ್ನು ಹೊರಡಿಸಿ ಅವರ ಚಿತ್ರಗಳನ್ನೂ ಅವರ ಕೆತ್ತಿದ ವಿಗ್ರಹಗಳನ್ನೂ ನಾಶಮಾಡಿ ಅವರ ಸಮಸ್ತ ಮೇಡುಗಳನ್ನೂ ಹಾಳುಮಾಡಬೇಕು. – ಧರ್ಮೋಪದೇಶಕಾಂಡ 4:16 ನಿಮ್ಮನ್ನು ನೀವೇ ಕೆಡಿಸಿಕೊಳ್ಳದ ಹಾಗೆ ನಿಮಗಾಗಿ ಕೆತ್ತಿದ ವಿಗ್ರಹವನ್ನು ಅಂದರೆ ಗಂಡು ಇಲ್ಲವೆ ಹೆಣ್ಣಿನ ಆಕಾರದಲ್ಲಿ ಯಾವ ವಿಧವಾದ ಪ್ರತಿಮೆ ಯನ್ನೂ – ಧರ್ಮೋಪದೇಶಕಾಂಡ 4:17 ಭೂಮಿಯ ಮೇಲಿರುವ ಯಾವದೊಂದು ಮೃಗದ ಹೋಲಿಕೆಯನ್ನೂ ಆಕಾಶದಲ್ಲಿ ಹಾರುವಂಥ ರೆಕ್ಕೆಯುಳ್ಳ ಯಾವದೊಂದು ಪಕ್ಷಿಯ ಹೋಲಿಕೆ ಯನ್ನೂ ಭೂಮಿಯ ಮೇಲೆ ಹರಿದಾಡುವಂಥ ಯಾವ ದೊಂದರ ಹೋಲಿಕೆಯನ್ನೂ– ಧರ್ಮೋಪದೇಶಕಾಂಡ 4:19 ನೀನು ನಿನ್ನ ಕಣ್ಣು ಗಳನ್ನು ಆಕಾಶದ ಕಡೆಗೆ ಎತ್ತಿ ಸೂರ್ಯ, ಚಂದ್ರ, ನಕ್ಷತ್ರಗಳ ಆಕಾಶ ಸೈನ್ಯವನ್ನೆಲ್ಲಾ ನೋಡಲಾಗಿ ನಿನ್ನ ದೇವರಾದ ಕರ್ತನು ಆಕಾಶದ ಕೆಳಗಿರುವ ಎಲ್ಲಾ ಜನಾಂಗಗಳಿಗೆ ಹಂಚಿಕೊಟ್ಟ ಇವುಗಳಿಗೆ ಅಡ್ಡಬಿದ್ದು ಇವುಗಳನ್ನು ಸೇವಿಸುವದಕ್ಕೆ ನಡಿಸಲ್ಪಡದಂತೆಯೂ ನೋಡಿಕೊಳ್ಳಿರಿ. – ಧರ್ಮೋಪದೇಶಕಾಂಡ 4:23 ನಿಮ್ಮ ದೇವರಾದ ಕರ್ತನು ನಿಮ್ಮ ಸಂಗಡ ಮಾಡಿದ ಒಡಂಬಡಿಕೆಯನ್ನು ಮರೆತು ನಿಮ್ಮ ದೇವರಾದ ಕರ್ತನು ಬೇಡವೆಂದು ಕೆತ್ತಿದ ಯಾವ ರೂಪದ ವಿಗ್ರಹ ವನ್ನೂ ಮಾಡಿಕೊಳ್ಳದ ಹಾಗೆ ಜಾಗ್ರತೆಯಾಗಿರ್ರಿ. –ಧರ್ಮೋಪದೇಶಕಾಂಡ 4:25 ನಿನ್ನಿಂದ ಮಕ್ಕಳೂ ಮೊಮ್ಮಕ್ಕಳೂ ಹುಟ್ಟಿದ ಮೇಲೆ ನೀವು ಬಹುಕಾಲ ದೇಶದಲ್ಲಿ ಇದ್ದು ತರುವಾಯ ನಿಮ್ಮನ್ನು ಕೆಡಿಸಿಕೊಂಡು ಯಾವದಾದರ ರೂಪವನ್ನು ಕೆತ್ತಿದ ವಿಗ್ರಹವನ್ನು ಮಾಡಿಕೊಂಡು ನಿನ್ನ ದೇವರಾದ ಕರ್ತನ ಸಮ್ಮುಖದಲ್ಲಿ ಕೆಟ್ಟದ್ದನ್ನು ಮಾಡಿ ಆತನಿಗೆ ಕೋಪವನ್ನು ಎಬ್ಬಿಸಿದರೆ – ಧರ್ಮೋಪದೇಶಕಾಂಡ 4:26 ನಾನು ಈ ದಿನ ಆಕಾಶ ವನ್ನೂ ಭೂಮಿಯನ್ನೂ ಸಾಕ್ಷಿಗೆ ಕರೆದು ನಿಮಗೆ ಹೇಳುವ ದೇನಂದರೆ––ನೀವು ಯೊರ್ದನನ್ನು ದಾಟಿ ಸ್ವಾಧೀನ ಪಡಿಸಿಕೊಳ್ಳುವ ದೇಶದಲ್ಲಿಂದ ಬೇಗನೆ ಹಾಳಾಗಿ ಹೋಗುವಿರಿ. ನೀವು ಬಹು ದಿವಸ ಇರದೆ ಸಂಪೂರ್ಣ ವಾಗಿ ನಶಿಸುವಿರಿ. – ಧರ್ಮೋಪದೇಶಕಾಂಡ 5:8 ಮೇಲಿನ ಆಕಾಶ ದಲ್ಲಾಗಲಿ ಕೆಳಗಿನ ಭೂಮಿಯಲ್ಲಾಗಲಿ ಭೂಮಿಯ ಕೆಳಗಿನ ನೀರುಗಳಲ್ಲಾಗಲಿ ಇರುವಂಥ ಯಾವ ದೊಂದರ ರೂಪದ ವಿಗ್ರಹವನ್ನು ನಿನಗೆ ಮಾಡಿ ಕೊಳ್ಳಬಾರದು, – ಧರ್ಮೋಪದೇಶಕಾಂಡ 5:9 ಅವುಗಳಿಗೆ ಅಡ್ಡಬೀಳಲೂಬಾರದು, ಸೇವಿಸಲೂಬಾರದು. ಯಾಕಂದರೆ ನಿನ್ನ ದೇವರಾದ ಕರ್ತನಾಗಿರುವ ನಾನು ರೋಷವುಳ್ಳ ದೇವರಾಗಿದ್ದೇನೆ. ನನ್ನನ್ನು

ಹಗೆಮಾಡುವವರಲ್ಲಿ ಪಿತೃಗಳ ಅಕ್ರಮವನ್ನು ಮಕ್ಕಳ ಮೇಲೆ ಮೂರನೆಯ ನಾಲ್ಕನೆಯ ತಲಾಂತರದ ವರೆಗೆ ನ್ಯಾಯತೀರಿಸುತ್ತೇನೆ. – ಧರ್ಮೋಪದೇಶಕಾಂಡ 7:5 ಅವರಿಗೆ ಮಾಡಬೇಕಾದ ದ್ದೇನಂದರೆ ಅವರ ಬಲಿಪೀಠಗಳನ್ನು ಒಡೆದುಹಾಕ ಬೇಕು; ಅವರ ವಿಗ್ರಹಗಳನ್ನು ಮುರಿದುಹಾಕಬೇಕು; ಅವರ ತೋಪುಗಳನ್ನು ಕಡಿದುಹಾಕಬೇಕು; ಅವರು ಕೆತ್ತಿದ ವಿಗ್ರಹಗಳನ್ನು ಬೆಂಕಿಯಿಂದ ಸುಡಬೇಕು.– ಧರ್ಮೋಪದೇಶಕಾಂಡ 7:16 ನಿನ್ನ ದೇವರಾದ ಕರ್ತನು ನಿನಗೆ ಒಪ್ಪಿಸುವ ಜನಗಳನ್ನೆಲ್ಲಾ ನೀನು ಸಂಹರಿಸಿಬಿಡುವಿ; ಅವರ ಮೇಲೆ ನೀನು ಕಟಾಕ್ಷವಿಡಬಾರದು; ಇಲ್ಲವೆ ಅವರ ದೇವರು ಗಳನ್ನು ಸೇವಿಸಬಾರದು; ಅದು ನಿನಗೆ ಉರುಲಾ ಗುವದು. – ಧರ್ಮೋಪದೇಶಕಾಂಡ 7:24 ಅವರ ಅರಸುಗಳನ್ನು ನಿನಗೆ ಒಪ್ಪಿಸುವನು. ನೀನು ಅವರ ಹೆಸರನ್ನು ಆಕಾಶದ ಕೆಳಗೆ ಇಲ್ಲದ ಹಾಗೆ ನಾಶಮಾಡುವಿ; ನೀನು ಅವರನ್ನು ನಿರ್ಮೂಲ ಮಾಡುವ ತನಕ ಒಬ್ಬನಾದರೂ ನಿನ್ನ ಮುಂದೆ ನಿಲ್ಲಲಾರನು.– ಧರ್ಮೋಪದೇಶಕಾಂಡ 7:25 ಅವರ ದೇವರುಗಳ ವಿಗ್ರಹಗಳನ್ನು ಬೆಂಕಿಯಿಂದ ಸುಡಬೇಕು; ಅವುಗಳ ಮೇಲಿರುವ ಬೆಳ್ಳಿ ಬಂಗಾರವನ್ನು ಆಶಿಸಿ ನೀನು ತಕ್ಕೊಳ್ಳಬಾರದು; ಅದು ನಿನಗೆ ಉರ್ಲಾ ದೀತು; ಅದು ನಿನ್ನ ದೇವರಾದ ಕರ್ತನಿಗೆ ಅಸಹ್ಯವೇ.– ಧರ್ಮೋಪದೇಶಕಾಂಡ 7:26 ನೀನು ಅದರಂತೆ ಶಾಪಕ್ಕೊಳಗಾಗದ ಹಾಗೆ ಅಸಹ್ಯವಾದದ್ದನ್ನು ನಿನ್ನ ಮನೆಗೆ ತಕ್ಕೊಂಡು ಬರ ಬಾರದು; ಅದನ್ನು ಸಂಪೂರ್ಣವಾಗಿ ಅಸಹ್ಯಿಸಬೇಕು; ಸಂಪೂರ್ಣವಾಗಿ ಹೇಸಿಕೊಳ್ಳಬೇಕು; ಯಾಕಂದರೆ ಅದು ಶಪಿಸಲ್ಪಟ್ಟದ್ದೇ. – ಧರ್ಮೋಪದೇಶಕಾಂಡ 9:12 ಆಗ ಕರ್ತನು––ಎದ್ದು ಇಲ್ಲಿಂದ ಬೇಗ ಇಳಿದು ಹೋಗು; ಯಾಕಂದರೆ ನೀನು ಐಗುಪ್ತದೇಶದೊಳಗಿಂದ ಬರ ಮಾಡಿದ ನಿನ್ನ ಜನರು ಕೆಟ್ಟುಹೋದರು; ನಾನು ಅವ ರಿಗೆ ಆಜ್ಞಾಪಿಸಿದ ಮಾರ್ಗವನ್ನು ಬಿಟ್ಟು ತಮಗೆ ಎರಕ ಹೊಯ್ದ ವಿಗ್ರಹವನ್ನು ಮಾಡಿಕೊಂಡರು ಎಂದು ನನಗೆ ಹೇಳಿದನು. – ಧರ್ಮೋಪದೇಶಕಾಂಡ 9:13 ಇದಲ್ಲದೆ ಕರ್ತನು ನನಗೆ––ನಾನು ಈ ಜನವನ್ನು ನೋಡಿದ್ದೇನೆ; ಇಗೋ, ಇದು ಬಗ್ಗದ ಕುತ್ತಿಗೆಯುಳ್ಳ ಜನವೇ. – ಧರ್ಮೋಪದೇಶಕಾಂಡ 9:14 ನನ್ನನ್ನು ಬಿಡು; ಆಗ ಅವರನ್ನು ನಾಶಮಾಡಿ ಅವರ ಹೆಸರನ್ನು ಆಕಾಶದ ಕೆಳಗಿನಿಂದ ಅಳಿಸಿಬಿಟ್ಟು ನಿನ್ನನ್ನು ಅವರಿಗಿಂತ ಬಲವಾದ ಬಹು ಜನಾಂಗವಾಗ ಮಾಡುವೆನು ಎಂದು ಹೇಳಿದನು. – ಧರ್ಮೋಪದೇಶಕಾಂಡ 12:2 ನೀವು ಸ್ವಾಧೀನಮಾಡಿಕೊಳ್ಳುವ ಜನಾಂಗ ಗಳು ತಮ್ಮ ದೇವರುಗಳಿಗೆ ಎತ್ತರವಾದ ಬೆಟ್ಟಗಳ ಮೇಲೆಯೂ ಗುಡ್ಡಗಳ ಮೇಲೆಯೂ ಹಸುರಾದ ಎಲ್ಲಾ ಮರಗಳ ಕೆಳಗೂ ಸೇವೆಮಾಡಿದ ಸ್ಥಳಗಳನ್ನು, ನೀವು ಪೂರ್ಣವಾಗಿ ನಾಶಮಾಡಬೇಕು. – ಧರ್ಮೋಪದೇಶಕಾಂಡ 12:3 ನೀವು ಅವರ

ಬಲಿಪೀಠಗಳನ್ನು ಕೆಡವಿಹಾಕಿ ಅವರ ಸ್ತಂಭಗಳನ್ನು ಒಡೆದು ಅವರ ತೋಪುಗಳನ್ನು ಬೆಂಕಿಯಿಂದ ಸುಟ್ಟು ಅವರ ದೇವರುಗಳ ವಿಗ್ರಹಗಳನ್ನು ಕಡಿದುಹಾಕಿ ಅವರ ಹೆಸರುಗಳನ್ನು ಆ ಸ್ಥಳಗಳೊಳಗಿಂದ ನಾಶಮಾಡಬೇಕು. – ಧರ್ಮೋಪದೇಶಕಾಂಡ 16:20 ನೀನು ಬದುಕಿ ನಿನ್ನ ದೇವರಾದ ಕರ್ತನು ನಿನಗೆ ಕೊಡುವ ದೇಶವನ್ನು ಸ್ವಾಧೀನಪಡಿಸಿಕೊಳ್ಳುವ ಹಾಗೆ ನೀತಿಯನ್ನೇ ಅನುಸರಿಸಬೇಕು. – ಧರ್ಮೋಪದೇಶಕಾಂಡ 16:22 ಯಾವ ವಿಗ್ರಹ ವನ್ನೂ ನಿಲ್ಲಿಸಬಾರದು; ಇದನ್ನು ನಿನ್ನ ದೇವರಾದ ಕರ್ತನು ಹಗೆಮಾಡುತ್ತಾನೆ. – ನಮ್ಮ ಬಾಯಲ್ಲಿ ಆಮೀನ್ ಹೇಳಿಸುವ ಮೂಲ ನೋಡಿ ಧರ್ಮೋಪದೇಶಕಾಂಡ 27:15 ಕರ್ತನಿಗೆ ಅಸಹ್ಯ ವಾಗಿರುವ ವಿಗ್ರಹವನ್ನಾಗಲಿ ಎರಕ ಹೊಯಿದದ್ದ ನ್ನಾಗಲಿ ಮಾಡಿಕೊಂಡು ಶಿಲ್ಪಿಯ ಕೈಯಿಂದ ಮಾಡಿಸಿಗುಪ್ತವಾಗಿ ನಿಲ್ಲಿಸುವವನಿಗೆ ಶಾಪ. ಜನವೆಲ್ಲಾ ಉತ್ತರ ಕೊಟ್ಟು ಆಮೆನ್ ಎಂದು ಹೇಳಲಿ.

ಹೊಸ ಪುರಾವೆ ಬೈಬಲ್ ಅದನ್ನೇ ಸಾರುತ್ತೆ ಗಲಾತ್ಯದವರಿಗೆ 5:20 ವಿಗ್ರಹಾರಾಧನೆ ಮಾಟ ಹಗೆತನ ಮತಭೇದ ಹೊಟ್ಟೇಕಿಚ್ಚು ಸಿಟ್ಟು ಜಗಳ ಒಳಸಂಚು ಭಿನ್ನಾಭಿಪ್ರಾಯಗಳು – ಗಲಾತ್ಯದವರಿಗೆ 5:21 ಅಸೂಯೆ ಗಳು ಕೊಲೆಗಳು ಕುಡುಕತನ ದುಂದೌತನ ಈ ಮೊದಲಾದವುಗಳೇ; ಇಂಥ ಕೃತ್ಯಗಳನ್ನು ನಡಿಸುವವರು ದೇವರ ರಾಜ್ಯಕ್ಕೆ ಬಾಧ್ಯರಾಗುವದಿಲ್ಲವೆಂದು ನಾನು ನಿಮಗೆ ಮುಂಚೆಯೇ ಹೇಳಿದಂತೆ ಈಗಲೂ ಹೇಳುತ್ತೇನೆ. – ಎಫೆಸದವರಿಗೆ 5:5 ಯಾವ ಜಾರನಾಗಲಿ, ಅಶುದ್ಧನಾಗಲಿ, ವಿಗ್ರಹಾರಾಧಕನಂತಿರುವ ಲೋಭಿಯಾಗಲಿ ಕ್ರಿಸ್ತನ ಮತ್ತು ದೇವರ ರಾಜ್ಯದಲ್ಲಿ ಬಾಧ್ಯನಾಗುವದಿಲ್ಲವೆಂದು ನೀವು ಬಲ್ಲಿರಲ್ಲವೇ. – ಎಫೆಸದವರಿಗೆ 5:7 ಆದದರಿಂದ ನೀವು ಅವರೊಂದಿಗೆ ಪಾಲುಗಾರ ರಾಗಿರಬೇಡಿರಿ. – ಪ್ರಕಟನೆ 21:8 ಆದರೆ ಭಯ ಗ್ರಸ್ಥರು, ನಂಬಿಕೆಯಿಲ್ಲದವರು, ಅಸಹ್ಯವಾದವರು, ಕೊಲೆಗಾರರು, ಜಾರರು, ಮಾಟಗಾರರು, ವಿಗ್ರಹಾ ರಾಧಕರು ಎಲ್ಲಾ ಸುಳ್ಳುಗಾರರು ಇವರಿಗೆ ಸಿಕ್ಕುವ ಪಾಲು ಬೆಂಕಿ ಗಂಧಕಗಳು ಉರಿಯುವ ಕೆರೆಯೇ; ಅದು ಎರಡನೆಯ ಮರಣವು ಎಂದು ನನಗೆ ಹೇಳಿದನು.

ಖುರಾನಿನ ಇಬ್ರಾಹಿಮ್ ಮತ್ತು ಬೈಬಲ್ಲಿನ ಅಬ್ರಹಾಮ್ ಚರಿತ್ರೆಯಲ್ಲಿ ಒಬ್ಬರೆ

ಖುರಾನಿನಲ್ಲೇ ಅಬ್ರಹಾಮ್, ಮೋಸಸ್, ಜೀಸಸ್ ಪ್ರವಾದಿಗಳ ಉಲ್ಲೇಕವನ್ನು ಗಮನಿಸಿದಾಗ, ತೋರಾ ಗ್ರಂಥದ ಉಲ್ಲೇಕಗಳನ್ನು ಗಮನಿಸಿದಾಗ ಅದು ಯಹೂದಿಗಳ ಪ್ರವಾದಿಗಳ ಬಗ್ಗೆ ಹೇಳಿದ್ದಾಗಿದೆ ಎಂಬುದರಲ್ಲಿ

ಸಂದೇಹವಿಲ್ಲವಾದರೂ ಅದನ್ನು ನಂಬಲು ಮುಸ್ಲಿಮರು ತಯಾರಿಲ್ಲ. ಹೋಗಲಿ ಖುರಾನಿನಲ್ಲಿ ಉಲ್ಲೇಕಿಸಿರುವ ಗೇಬ್ರಿಯಲ್ ಯಾರು ಯಹೂದಿಗಳ ಪುಸ್ತಕಗಳಲ್ಲೂ ಗೇಬ್ರಿಯಲ್ ದೇವತೆಯಾಗಿ ಕಾಣಿಸಿಕೊಳ್ಳುತ್ತಾರೆ. ಜೀಸಸ್ ತಾಯಿ ಮೇರಿಯವರಿಗೂ ಕಾಣಿಸಿಕೊಳ್ಳುವ ದೇವತೆ, ರೋಮನ್ ಕ್ಯಾತೋಲಿಕರಲ್ಲಿ ಈತನನ್ನು ಸಂತ ಅಂತ ಕರೀತಾರೆ, ಯಹೂದಿ ಎನ್ಸೈಕ್ಲೋಪೀಡಿಯಾ ಪ್ರಕಾರ ಗೇಬ್ರಿಯಲ್ ಮನುಷ್ಯನ ರೂಪವನ್ನು ಹೊಂದಿ ದೇವರ ಎಡದಲ್ಲಿ ನಿಂತಿರುತ್ತಾನೆ ಅನ್ನುತ್ತಾರೆ. ಯಹೂದಿಗಳಲ್ಲಿ ಕಬ್ಬಾಲಿಗಳು ಎಂಬ ನಂತರದ  ಒಂದು ಪಂಥ ಇದೆ, ಈ ಪಂಥದ ಸಾಹಿತ್ಯದಲ್ಲಿ ಗೇಬ್ರಿಯಲ್ ಮತ್ತು ಮಿಕೇಲ್ ದೇವರ ಅಂಗಳದಲ್ಲಿ ಕೆಲಸ ಮಾಡುವವರು ದೇವರ ಕಾರ್ಯಕರ್ತ ಎಂದು ಹೇಳಿದ್ದಾರೆ. ಬಹಾಯಿ ಧರ್ಮದಲ್ಲೂ ಗೇಬ್ರಿಯಲರ ಉಲ್ಲೇಖವಿದೆ.

ಇವೆಲ್ಲಾ ಗೊಂದಲಗಳಿಂದ ದೂರವಾಗಲು ಖುರಾನಿನಲ್ಲಿ ಬೈಬಲ್ ನಲ್ಲಿ ಮೊಹಮ್ಮದ್ ಬರುವ ಬಗ್ಗೆ ಬವಿಷ್ಯ ನುಡಿಯಲಾಗಿದೆ ಎಂದು ಉಲ್ಲೇಖಿಸುತ್ತಾರೆ. (7:157, 61:6) ಆದರೆ ಎಲ್ಲಿ ಉಲ್ಲೇಕಿಸಲಾಗಿದೆ ಎಂದು ನಿರ್ದಿಷ್ಟವಾಗಿ ಹೇಳುವುದಿಲ್ಲ. ಇದಕ್ಕೆ ಮುಸ್ಲಿಮ್ ಅನುಯಾಯಿ ವಿಧ್ಯಾರ್ಥಿ ಅಂತಹ ಮೇದಾವಿಗಳ ದಂಡು "ಸಾಂಗ್ ಆಫ್ ಸಾಲೋಮನ್" 5:16 ರಲ್ಲಿ ಮೊಹಮದ್ ಬಗ್ಗೆ ಮುಹಮ್ಮದಿಮ್ ಎಂದು ಹಿಬ್ರೂವ್ ಬಾಷೆಯಲ್ಲಿ ಹೇಳಲಾಗಿದೆ ಎಂದು ವಾದಿಸುತ್ತಾರೆ. ಹಿಬ್ರೂ ಭಾಷೆಯಲ್ಲಿ מַחֲמַדִּים ಬರೆದಿರುವುದು ಕಂಡು ಬರುತ್ತದೆ. ಇದರ ಅರ್ತ್ವನ್ನು ಆಂಗ್ಲ ಅನುವಾದದ ಹೀಬ್ರೂ ಬೈಬಲ್ ನಲ್ಲಿ ಸ್ವೀಟ್ನೆಸ್ ಸಿಹಿಯಿಂದ ಕೂಡಿದ ಎನ್ನುವ ಅರ್ಥ ಕೊಡಲಾಗಿದೆ.

מַמְתַקִּים
sweetness

ಆದರೆ ಇನ್ನೊಂದು ಕಡೆ ಮುಚ್ಮದೀಮ್ ಎಂದರೆ "ಒಟ್ಟಾರೆಯಾಗಿ ಸುಂದರ" ಎನ್ನುವ ಅರ್ಥ ಬರುತ್ತದೆ ಎನ್ನಲಾಗಿದೆ. ಈ ಸಂಬಾಷಣೆಯ ಹಿನ್ನೆಲೆ ಸಾಲೋಮನ್ ವರಿಸುವ ಮದುಮಗಳು ಆತನನ್ನು ವಿವರಿಸುವ ರೀತಿಯಾಗಿರುತ್ತದೆ 5:10 ರಿಂದ 5:16 ರವರೆಗೆ ವಿವರಿಸಿರುವುದು ಎನ್ನಲಾಗುತ್ತದೆ. ಇದನ್ನು ಮುಸ್ಲಿಮರು ಮೊಹಮ್ಮದರ ಬಗ್ಗೆ ಹೇಳಿದೆ ಎನ್ನುತ್ತಾರೆ.[21]

ಯಹೂದಿಯರಲ್ಲೂ ದೇವರಿಗೆ 72 ಹೆಸರು ಕೊಟ್ಟಿದ್ದಾರೆ.

---

[21] http://www.answeringmuslims.com/2014/05/ muhammad-in-song-of-solomon-516.html

ಯಹೂದಿಯರಲ್ಲಿ ದೇವರ ಹೆಸರು 72 ಇವೆ. ಅಬಿರ್, (ಗಟ್ಟಿಗನು) ಅದಿರ್, (ಹೆಚ್ಚಿನವನು) ಅದೊನ್ ಓಲಮ್, (ಪ್ರಪಂಚದ ಯಜಮಾನ) ಐಬಿಷ್ಟಿರ್, (ಶಾಶ್ವತನು) ಅಲೀಮ್,(ಈಲೋಹಿಮ್ ಅಥವ ಓ ದೇವರೆ) ಅರವತ್, (ಸೃಷ್ಠಿಯ ತಂದೆ ಅವಿನು ಮಲಕ್ಮು, (ನಮ್ಮ ತಂದೆ ನಮ್ಮ ರಾಜ) ಬೋರೆ, (ಸೃಷ್ಠಿಕರ್ತನು) ದಿಬ್ಬೂರ, (ಕಾನೂನು) ಯಹಿಯ, (ನಾನು ಅವನು ನಾನು) ಇನ್ ಸೋಫ್,(ಅಂತ್ಯವಿಲ್ಲದವನು) ಈಲಾಹ್ ಗಿಬ್ಬರ್, (ನಾಯಕರ ದೇವ) ಈಮೆತ್, (ಸತ್ಯ) ಹಕ್ಡೋಶ್, (ಪವಿತ್ರನೊಬ್ಬನು, ಅವನು ಆಶೀರ್ವಾದಿಸಲಿ) ಹರಾಚಮನ್, (ಕ್ಷಮಾಶೀಲನು) ಕದೋಶ್ ಇಸ್ರಾಯಿಲ್,(ಇಸ್ರೇಲಿನ ಒಂದು ಪವಿತ್ರ) ಮಗೆನ್ ಅವ್ರಾಹಮ್,(ಅಬ್ರಹಾಮನ ರಕ್ಷಾ ಪಲಕ/ಗುರಾಣಿ) ಮಾಕೋಮ್, (ಸರ್ವ ವ್ಯಾಪ್ತನು) ಮಲ್ಬಿಶ್ ಅರುಮಿನ್, (ನಗ್ನರನ್ನು ಬಟ್ಟೆಗಳಿಂದ ಮುಚ್ಚುವವನು) ಮತಿರ್ ಅಸುರಿಮ್, (ಬಂದಿತರನ್ನು ಮುಕ್ತಗೊಳಿಸುವವನು) ಅಲ್ ಮುಹಿ ಅಲ್ ಖುಲ್, (ಎಲ್ಲಕ್ಕೂ ಜೀವಕೊಡುವವನು) ಮೆಚಾಯೆಹ್ ಮೆತಿಮ್, (ಸತ್ತವರಿಗೆ ಜೀವ ಕೊಡುವವನು) ಮೆಲೆಚ್ ಹ ಮೆಲಚಿಮ್, (ರಾಜರಿಗೆ ರಾಜನು) ಮ್ಲೆಚ್ ಹಓಲಮ್, (ಪ್ರಪಂಚದ ರಾಜ) ಮೆಮ್ರ ಡಿ ಅದೊನ್ಯೆ, (ಒಡೆಯನಪದ) ಮಿ ಶಿಯೆಮರ್ ವಹ್ಯ ಹಒಲಮ್, (ಯಾರು ಮಾತನಾಡಿದ್ದಕ್ಕೆ ಈ ಪ್ರಪಂಚವು ಬಂದಿತೋ ಅವನು) ಓಶೆಮ್ ಶಲೋಮ್, (ಶಾಂತಿಯನ್ನು ಮಾಡುವವನು) ಪೋಕೆಚ್ ಇವ್ರಿಮ್, (ಕುರುಡುಕಣ್ಣನ್ನು ತೆರೆಸುವವನು) ರಿಬಿನೋ ಷೆಲೋಲಮ್, (ಪ್ರಪಂಚದ ಯಜಮಾನ/ನಿಪುಣ) ರೊಹ್ ಇಸ್ರೇಲಿ, (ಇಸ್ರೇಲಿನ ಕುರುಬ) ರೋಫ್ಹೆಹ್ ಚೋಲಿಮ್, (ಅನಾರೋಗ್ಯನ ಗುಣಪಡಿಸುವವನು) ಶೋಮರ್ ಇಸ್ರೇಲಿ, (ಇಸ್ರೇಲಿನ ಪೋಷಕನು) ಸೋಮೆಚ್ ನೊಫ್ಲಿಮ್,(ಕೆಳಬಿದ್ದವರ ಬೆಂಬಲಿಗನು) ತ್ಝುರ್ ಇಸ್ರೇಲ್, (ಇಸ್ರೇಲ್ ಬಂಡೆ) ಯಾಹ್ವ ನೈಸ್ಸಿ, (ನಮ್ಮ ಅದ್ವಿತೀಯ ಒಡೆಯನು) ಯಾಹ್ವ ರಫಾ, (ಗುಣಪಡಿಸುವ ಒಡೆಯನು) ಯಾಹ್ವ ರೊಐ, (ನಮ್ಮ ಕುರುಬನ ಒಡೆಯನು) ಯಹ್ವ ಶಲೊಮ್, (ನಮ್ಮ ಶಾಂತಿಯ ಒಡೆಯನು) ಯಹ್ವ ಶಮಾಹ್, (ಹಾಜರಿರುವ ಒಡೆಯನು) ಯಹ್ವ ತ್ಸಿಡ್ಕೇನು, (ನಮ್ಮ ಸದಾಚಾರದ ಒಡೆಯನು) ಯಾಹ್ವ ಯಿರೆಹ್, (ಕೊಡುವವನು ಒಡೆಯನು) ಯೋತ್ಶೆಹೆರ್ ಓರ್, (ಬೆಳಕನ್ನು ಸಿಂಗರಿಸುವವನು) ಜೋಕೆಫ್ ಕೇಫೀಮ್ (ಬಾಗಿದ್ದನ್ನು ನೇರ ಮಾಡುವವನು)... ದೇವರ ಕಾರ್ಯವನ್ನಿಡಿದು ದೇವರಿಗೆ ಹಲವು ಹೆಸರು ಕೊಟ್ಟು ಕರೆದರೂ ಇವರು ಏಕದೇವೋಪಾಸಕರು.

ತರತ್ ಇದರಲ್ಲೂ ಅನ್ಯ ದೇವರುಗಳ ಆರಾಧಕರನ್ನ ಕೊಲ್ಲಲು ಹೇಳಿದೆ

ತೌರತ್ / ಟೋರಾಹ್/ ತೋರಾ ಇದು ಯಹೂದಿಗಳಿಗೆ, ಕ್ರೈಸ್ತರಿಗೆ ಮತ್ತು ಮುಸ್ಲಿಮರಿಗೆ ಸಾಕ್ಷಾತ್ ದೇವರು ಇಳಿಸಿಕೊಟ್ಟ ಗ್ರಂಥ ಎಂದು ಎಲ್ಲರ ವಾದವಿದೆ. ತೌರತ್ ನಲ್ಲಿ – ಆದಿಕಾಂಡ, ವಿಮೋಚನಾಕಾಂಡ, ಯಾಜಕಾಂಡ, ಅರಣ್ಯಕಾಂಡ, ಧರ್ಮೋಪದೇಶ ಕಾಂಡ, ಈ ಪುಸ್ತಕಗಳು ಬರುತ್ತವೆ. ಇವು ಯಹೂದಿಗಳು, ಕ್ರೈಸ್ತರು, ಮತ್ತು ಮುಸ್ಲಿಮರಿಗೆ ಪವಿತ್ರ ಗ್ರಂಥಗಳು, ಆದರೆ ಅದನ್ನು ಕಲುಷಿತ ಮಾಡಿ ಬಿಟ್ಟಿದ್ದಾರೆ ಎಂಬುದು ಮುಸ್ಲಿಮರ ವಾದ, ಆದುದರಿಂದ ಖುರಾನ್ ಮಾತ್ರ ಪವಿತ್ರ ಅಂತ ವಾದಿಸುತ್ತಾರೆ.

ತೌರತ್ ಧರ್ಮೋಪದೇಶ ಕಾಂಡದಲ್ಲಿ ಯೆಹೋವ ದೇವರನ್ನು ಬಿಟ್ಟು ಬೇರೆ ಅನ್ಯ ದೇವರುಗಳನ್ನ ಪೂಜಿಸುವವರನ್ನು ಮತ್ತು ಆತನು ನಿಷೇಧಿಸಿರುವ ಸೂರ್ಯ, ಚಂದ್ರ ಅಥವಾ ನಕ್ಷತ್ರಮಂಡಲವನ್ನಾಗಲಿ ಸೇವಿಸಿ, ಪೂಜಿಸಿ ಯೆಹೋವನ ದೃಷ್ಟಿಯಲ್ಲಿ ಅಸಹ್ಯವಾದದ್ದನ್ನು ನಡಿಸಿದರೆ ಅವರನ್ನು ಕಲ್ಲು ಹೊಡೆದು ಸಾಯಿಸಲು ಆದೇಶವಿದೆ:–

ಧರ್ಮೋಪದೇಶಕಾಂಡ 17:1 ಯಾವುದೇ ಕುಂದುಕೊರತೆ ಅಥವಾ ಊನ ಇರುವ ಎತ್ತು ಮತ್ತು ಕುರಿಗಳನ್ನು ನಿಮ್ಮ ದೇವರಾದ ಯೆಹೋವನಿಗೆ ಸಮರ್ಪಿಸ ಬಾರದು. ಅಂಥವುಗಳನ್ನು ಸಮರ್ಪಿಸುವುದು ಆತನಿಗೆ ಅಸಹ್ಯವಾಗಿದೆ.

17:2 ನಿಮ್ಮ ದೇವರಾದ ಯೆಹೋವನು ನಿಮಗೆ ಕೊಡುವ ಯಾವುದೇ ಊರಿನಲ್ಲಿ, ಯಾವ ಪುರುಷನಾಗಲಿ ಅಥವಾ ಸ್ತ್ರೀಯಾಗಲಿ ನಿಮ್ಮ ದೇವರಾದ ಯೆಹೋವನ ನಿಬಂಧನೆಯನ್ನು ಮೀರಿ,

17:3 ಆತನಿಂದ ದೂರಹೋಗಿ ಅನ್ಯದೇವರುಗಳನ್ನು ಪೂಜಿಸಬಾರದೆಂದು ಮತ್ತು ಆತನು ನಿಷೇಧಿಸಿರುವ ಸೂರ್ಯ, ಚಂದ್ರ ಅಥವಾ ನಕ್ಷತ್ರಮಂಡಲವನ್ನಾಗಲಿ ಸೇವಿಸಿ, ಪೂಜಿಸಿ ಯೆಹೋವನ ದೃಷ್ಟಿಯಲ್ಲಿ ಅಸಹ್ಯವಾದದ್ದನ್ನು ನಡಿಸಿದರೆ,

17:4 ನೀವು ಆ ಸಂಗತಿಯನ್ನು ಕೇಳಿದಾಗ ಸೂಕ್ಷ್ಮವಾಗಿ ವಿಚಾರಣೆಯನ್ನು ಮಾಡಬೇಕು. ಆಗ ಇಸ್ರಾಯೇಲರಲ್ಲಿ ಯಾರಿಂದಾದರೂ ಆ ನಿಷಿದ್ಧಕಾರ್ಯವು ನಡೆದದ್ದು ನಿಜವೆಂದು ತಿಳಿದು ಬಂದರೆ,

17:5 ಆಗ ಆ ಪುರುಷನನ್ನಾಗಲಿ ಅಥವಾ ಸ್ತ್ರೀಯನ್ನಾಗಲಿ ಹಿಡಿದು ಊರ ಹೊರಗೆ ತಂದು ಕಲ್ಲೆಸೆದು ಕೊಲ್ಲಬೇಕು.

ತೌರತ್ – ಧರ್ಮೋಪದೇಶ ಕಾಂಡ–ಕೊಲ್ಲುವದಕ್ಕೆ ಯಾರಾದರೇನಂತೆ ಅವರು ಇತರೆ ದೇವರನ್ನು ಆರಾಧಿಸಲು ಕರೆಯಬಾರದು.

ಧರ್ಮೋಪದೇಶ ಕಾಂಡ 13:1 ಯಾವ ಪ್ರವಾದಿಯಾಗಲಿ ಅಥವಾ ಕನಸುಗಾರನೇ ಆಗಲಿ ನಿಮ್ಮ ಮಧ್ಯದಲ್ಲಿ ಬಂದು, ನಿಮಗೆ ಗೊತ್ತಿಲ್ಲದ ಇತರ ದೇವರುಗಳನ್ನು ತೋರಿಸಿ, 13:2 "ಈ ದೇವತೆಗಳನ್ನು ಅವಲಂಬಿಸಿ ಅವುಗಳನ್ನು ಸೇವಿಸೋಣ" ಎಂದು ಬೋಧಿಸುತ್ತಾ, ಆ ಬೋಧನೆಯನ್ನು ಸ್ಥಾಪಿಸುವುದಕ್ಕೆ ಒಂದು ಅದ್ಭುತವನ್ನಾಗಲಿ ಅಥವಾ ಮಹತ್ಕಾರ್ಯವನ್ನಾಗಲಿ ತೋರಿಸಿಕೊಡುತ್ತೇನೆಂದು ಹೇಳಿ ಅವನು ಹೇಳಿದಂತೆಯೇ ನಡೆದರೂ ನೀವು ಅವನ ಮಾತಿಗೆ ಕಿವಿಗೊಡಬಾರದು.

13:3 ಏಕೆಂದರೆ ನಿಮ್ಮ ದೇವರಾದ ಯೆಹೋವನು, "ಇವರು ಸಂಪೂರ್ಣ ಹೃದಯದಿಂದಲೂ ಮತ್ತು ಸಂಪೂರ್ಣ ಮನಸ್ಸಿನಿಂದಲೂ ತನ್ನನ್ನೇ ಪ್ರೀತಿಸುವವರು ಹೌದೋ ಅಲ್ಲವೋ" ಎಂಬುದನ್ನು ತಿಳಿದುಕೊಳ್ಳುವುದಕ್ಕೆ ನಿಮ್ಮನ್ನು ಪರೀಕ್ಷಿಸುತ್ತಾನೆ. 13:4 ಆತನು ಹೇಳುವ ಮಾರ್ಗದಲ್ಲೇ ನೀವು ನಡೆದು, ಆತನಲ್ಲಿಯೇ ಭಯಭಕ್ತಿಯುಳ್ಳವರಾಗಿ, ಆತನ ಆಜ್ಞೆಗಳನ್ನೇ ಅನುಸರಿಸಿ, ಆತನಿಗೇ ವಿಧೇಯರಾಗಿ, ಆತನನ್ನೇ ಸೇವಿಸುತ್ತಾ ಹೊಂದಿಕೊಂಡಿರಬೇಕು.

13:5 ಆ ಪ್ರವಾದಿಗೆ ಅಥವಾ ಆ ಕನಸುಗಾರನಿಗೆ ಮರಣ ಶಿಕ್ಷೆಯಾಗಬೇಕು. ದಾಸತ್ವದಲ್ಲಿದ್ದ ನಿಮ್ಮನ್ನು ಬಿಡುಗಡೆಮಾಡಿ, ಐಗುಪ್ತದೇಶದೊಳಗಿಂದ ಕರೆದುಕೊಂಡು ಬಂದ ನಿಮ್ಮ ದೇವರಾದ ಯೆಹೋವನಿಗೆ ವಿರುದ್ಧವಾಗಿ ಅವನು ದ್ರೋಹದ ಮಾತುಗಳನ್ನಾಡಿ, ನಿಮ್ಮ ದೇವರಾದ ಯೆಹೋವನು ಹೇಳಿದ ಮಾರ್ಗದಿಂದ ನಿಮ್ಮನ್ನು ತಪ್ಪಿಸಬೇಕೆಂದಿದ್ದನಲ್ಲಾ. ಅವನನ್ನು ಕೊಲ್ಲಿಸಿ, ಆ ದುಷ್ಟತ್ವವನ್ನು ನಿಮ್ಮ ಮಧ್ಯದಿಂದ ತೆಗೆದುಹಾಕಬೇಕು. 13:6 ಒಡಹುಟ್ಟಿದ ಅಣ್ಣತಮ್ಮಂದಿರಾಗಲಿ, ಮಗನಾಗಲಿ, ಮಗಳಾಗಲಿ, ಪ್ರಾಣಪ್ರಿಯಳಾದ ಹೆಂಡತಿಯಾಗಲಿ, ಆಪ್ತಮಿತ್ರನಾಗಲಿ ಇತರ ದೇವರುಗಳನ್ನು ತೋರಿಸಿ, "ನಿಮಗೂ ನಿಮ್ಮ ಪಿತೃಗಳಿಗೂ ಗೊತ್ತಿಲ್ಲದ ಆ ದೇವರುಗಳನ್ನು ಸೇವಿಸೋಣ ಬನ್ನಿರಿ" ಎಂದು ರಹಸ್ಯವಾಗಿ ಆಕರ್ಷಿಸಿ, ನಿಮಗೆ ಬೋಧಿಸಿದರೆ, 13:7 ಆ ದೇವರುಗಳು ಹತ್ತಿರುವಿರುವ ಜನಾಂಗಗಳ ದೇವರುಗಳಾದರೂ, ದೂರವಾದವರ ದೇವರುಗಳಾದರೂ, ಭೂಲೋಕದ ಯಾವ ಭಾಗದವರ ದೇವರುಗಳಾದರೂ 13:8 ನೀವು ಸಮ್ಮತಿಸಲೂ ಬಾರದು ಮತ್ತು ಕಿವಿಗೊಡಲೂಬಾರದು. ಅವನನ್ನು ಕನಿಕರಿಸಲೂಬಾರದು, ತಪ್ಪಿಸಲೂಬಾರದು, ಬಚ್ಚಿಡಲೂಬಾರದು ಅವನನ್ನು **ಕೊಲ್ಲಿಸಲೇಬೇಕು.**

ಖುರಾನಿನಲ್ಲಿ ತೌರತ್ ಗ್ರಂಥಗಳನ್ನು ಸಮರ್ಥಿಸುವುದಾಗಿ ಅಲ್ಲಾಹರ ವಾಣಿ ಇದೆ.

2:53 ಮತ್ತು ಮೂಸಾಗೆ ನಾವು ಪುಸ್ತಕವನ್ನು (ತೌರತ್ / ಟೋರಾ) ನೀಡಿದ್ದೇವೆ ಮತ್ತು ನೀವು ತಪ್ಪುಗಳಲ್ಲಿ ಸರಿಯಾದದ್ದನ್ನು ಅಳೆಯಲು ಮಾರ್ಗದರ್ಶನದ ಮಾನದಂಡವನ್ನು ನೀಡಿರುವಾಗ ನೀವು ಮಾರ್ಗದರ್ಶನ ಪಡೆಯಬಹುದು.

2:75. (ವಿಶ್ವಾಸಿಗಳೇ,) ನೀವೇನು, ಅವರು ನಿಮ್ಮಲ್ಲಿ ನಂಬಿಕೆಯಿಡುವವರೆಂದು ನಿರೀಕ್ಷಿಸುತ್ತಿರುವಿರಾ? ಅವರಲ್ಲಿನ ಒಂದು ಪಂಗಡವಂತು, ಅಲ್ಲಾಹನ ಸಂದೇಶವನ್ನು ಕೇಳಿದ ಬಳಿಕ ಮತ್ತು ಅದನ್ನು ಅರ್ಥ ಮಾಡಿಕೊಂಡ ಬಳಿಕ ತಿಳಿದೂ ತಿಳಿದೂ ಅದನ್ನು ತಿರುಚಿ ಬಿಡುತ್ತದೆ.

9: 111. ಖಂಡಿತವಾಗಿಯೂ ಅಲ್ಲಾಹನು ವಿಶ್ವಾಸಿಗಳಿಂದ ಅವರ ಜೀವಗಳನ್ನು ಮತ್ತು ಅವರ ಸೊತ್ತುಗಳನ್ನು ಖರೀದಿಸಿರುವನು – ಅವರಿಗೆ ಸ್ವರ್ಗವನ್ನು ನೀಡಲಿಕ್ಕಾಗಿ. ಅವರು ಅಲ್ಲಾಹನ ಮಾರ್ಗದಲ್ಲೇ ಹೋರಾಡುತ್ತಾರೆ, ವಧಿಸುತ್ತಾರೆ ಮತ್ತು ವಧಿಸಲ್ಪಡುತ್ತಾರೆ. ತೌರಾತ್, ಇಂಜೀಲ್ ಮತ್ತು ಕುರ್‌ಆನ್‌ನಲ್ಲಿ ಅವರಿಗೆ ನೀಡಲಾಗಿರುವ ವಾಗ್ದಾನವು ಸತ್ಯವಾಗಿದೆ. ಅಲ್ಲಾಹನಿಗಿಂತ ಉತ್ತಮವಾಗಿ ತನ್ನ ಕರಾರನ್ನು ಪಾಲಿಸುವವನು ಯಾರಿದ್ದಾನೆ? ಆದ್ದರಿಂದ ಅವನ ಜೊತೆ ನೀವು ಮಾಡಿಕೊಂಡಿರುವ ವ್ಯವಹಾರಕ್ಕಾಗಿ ಸಂಭ್ರಮಿಸಿರಿ. ಇದು ನಿಜಕ್ಕೂ ಮಹಾ ವಿಜಯವಾಗಿದೆ.

4:60 ನಿಮ್ಮೆಡೆಗೆ ಇಳಿಸಲಾಗಿರುವುದನ್ನೂ (ಕುರ್‌ಆನ್‌ಅನ್ನೂ) ನಿಮಗಿಂತ ಹಿಂದೆ ಇಳಿಸಲಾಗಿರುವುದನ್ನೂ (ತೌರಾತ್ ಮತ್ತು ಇಂಜೀಲ್‌ಗಳನ್ನೂ) ತಾವು ನಂಬಿರುವುದಾಗಿ ಹೇಳಿಕೊಳ್ಳುತ್ತಿರುವವರನ್ನು ನೀವು ಕಂಡಿರಾ? ಅವರು ತಮ್ಮ ವಿವಾದಗಳ ತೀರ್ಪನ್ನು ಅಕ್ರಮ ಶಕ್ತಿಗಳಿಗೆ ಒಪ್ಪಿಸಬಯಸುತ್ತಾರೆ. ನಿಜವಾಗಿ ಆ ಶಕ್ತಿಗಳನ್ನು ಧಿಕ್ಕರಿಸಬೇಕೆಂದು ಅವರಿಗೆ ಆದೇಶಿಸಲಾಗಿದೆ. ಶೈತಾನನು ಅವರನ್ನು ದಾರಿಗೆಡಿಸಿ ದಾರಿಗೇಡಿತನದಲ್ಲಿ ಬಹಳ ದೂರ ಒಯ್ಯ ಬಯಸುತ್ತಾನೆ.

3:3. (ದೂತರೇ,) ಅವನು ನಿಮಗೆ ಈ ಗ್ರಂಥವನ್ನು ಸತ್ಯದೊಂದಿಗೆ ಇಳಿಸಿಕೊಟ್ಟಿರುವನು. ಇದು ತನ್ನ ಹಿಂದಿನವುಗಳನ್ನು (ಗತ ಕಾಲದ ದಿವ್ಯ ಗ್ರಂಥಗಳನ್ನು) ಸಮರ್ಥಿಸುತ್ತದೆ. (ಈ ಹಿಂದೆ) ತೌರಾತ್ ಮತ್ತು ಇಂಜೀಲ್‌ಗಳನ್ನು ಇಳಿಸಿ ಕೊಟ್ಟವನೂ ಅವನೇ.

3:48. (ದೇವರುಗಳು ಹೇಳಿದರು;) "ಅವನು (ಅಲ್ಲಾಹನು) ಅವರಿಗೆ ಗ್ರಂಥವನ್ನು ಮತ್ತು ಯುಕ್ತಿಯನ್ನು ಹಾಗೂ ತೌರಾತ್ ಮತ್ತು ಇಂಜೀಲ್‌ಗಳನ್ನು ಕಲಿಸುವನು".

3:50. "ನಾನು ನನಗಿಂತ ಹಿಂದೆ ಇದ್ದ ತೌರಾತ್‌ನ ಭಾಗವನ್ನು ಸಮರ್ಥಿಸುವವನಾಗಿದ್ದೇನೆ ಹಾಗೂ ನಿಮ್ಮ ಮೇಲೆ ನಿಷಿದ್ಧ ಗೊಳಿಸಲಾಗಿದ್ದ ಕೆಲವು ವಿಷಯಗಳನ್ನು ನಿಮ್ಮ ಪಾಲಿಗೆ ಸಮ್ಮತಗೊಳಿಸಲಿಕ್ಕಾಗಿ ಬಂದಿರುತ್ತೇನೆ. ನಾನು ನಿಮ್ಮ ಬಳಿಗೆ ನಿಮ್ಮ ಒಡೆಯನ ಕಡೆಯಿಂದ ಪುರಾವೆಯನ್ನು ತಂದಿರುತ್ತೇನೆ. (ಆದುದರಿಂದ) ನೀವು ಅಲ್ಲಾಹನಿಗೆ ಅಂಜಿರಿ ಮತ್ತು ನನ್ನ ಆದೇಶ ಪಾಲಿಸಿರಿ".

26:2 ಹಿಲಲಿ ಮತ್ತು ಖಾನ್ ಅನುವಾದದಂತೆ – ಇವುಗಳು ಸ್ಪಷ್ಟವಾದ ಪುಸ್ತಕದ ಶ್ಲೋಕಗಳಾಗಿವೆ (ಈ ಖುರಾನ್, ತೌರಾತ್ (ತೋರಾ) ಮತ್ತು ಇಂಜೀಲ್ನಲ್ಲಿ (ಗಾಸ್ಪೆಲ್) ಸ್ಪಷ್ಟಪಡಿಸಿದವುಗಳಲ್ಲಿ ಅಲ್ಲಾ ಭರವಸೆ ನೀಡಲ್ಪಟ್ಟಿತು).

26:196 ಹಿಲಲಿ ಮತ್ತು ಖಾನ್ ಅನುವಾದದಂತೆ – ಮತ್ತು ಖಂಡಿತವಾಗಿ, ಇದು (ಖುರಾನ್ ಮತ್ತು ಪ್ರವಾದಿ ಮುಹಮ್ಮದ್ ಅವರಿಗೆ ನೀಡಿದ ಸಾಕ್ಷಾತ್ಕಾರವು) ಗ್ರಂಥಗಳಲ್ಲಿದೆ (ಘೋಷಿಸಿ ಆಗಿದೆ) (ಅಂದರೆ ಹಿಂದಿನ ಜನರ ತೌರಾತ್ (ಟೋರಾ) ಮತ್ತು ಇಂಜೀಲ್ (ಸುವಾರ್ತೆ).

ಅಲ್ಲಿಗೆ ಖುರಾನ್ ವಿಗ್ರಹಾರಾದನೆ ಮತ್ತು ಇತರೆ ದೇವರುಗಳ ಬಗ್ಗೆ ಯಹೂದಿ ಮತ್ತು ಕ್ರೈಸ್ತ ಗ್ರಂಥಗಳ ಭೋದನೆ ಮಾದರಿಯಲ್ಲೇ ಅವುಗಳನ್ನು ನೇರವಾಗಿ ಅನುಮೋದಿಸಿ ಅವುಗಳ ಸಾರಾಂಶವನ್ನು ಖುರಾನಿನಲ್ಲಿ ಉಲ್ಲೇಖಿಸಿ ಮುಸ್ಲಿಮೇತರರ ಇತರೆ ಎಲ್ಲಾ ದೇವರುಗಳ ಬಗ್ಗೆ (ಯಹೋವಾ ಮತ್ತು ಏಸು ಕ್ರಿಸ್ತನನ್ನು ಒಳಗೊಂಡು) ದ್ವೇಶ ಕಾರುವುದು ಏಕೆ ಎನ್ನುವುದು ಇದರಿಂದ ಸ್ಪಷ್ಟತೆ ಸಿಗುತ್ತದೆ.

ಯಹೂದಿಗಳು, ಕ್ರೈಸ್ತರು, ಮುಸ್ಲಿಮರು ಕರೆಯುವ ದೇವರು ಯಾರು? ಯಹೂದಿಗಳಿಗೆ ಯಹೋವ ಏಕಮಾತ್ರ ದೇವರಾದರೆ, ಕ್ರೈಸ್ತರಿಗೆ (ಯಹೋವ+ಯೇಸು+ಪವಿತ್ರಾತ್ಮ) ದೇವರು ಎಂದು ಭಾವಿಸುತ್ತಾರೆ, ಮುಸ್ಲಿಮರು ಯಹೋವ ದೇವರು ಅಲ್ಲಾ ಅದು ಅಲ್ಲಾಹರು ಮಾತ್ರ ದೇವರು ಅಂದರೂ ನಮ್ಮ ದೇವರು ನಿಮ್ಮ ದೇವರು ಒಂದೇ ಅನ್ನುತ್ತಾರೆ.

ತೌರತ್ – ಆದಿಕಾಂಡ–2:4:– ಯಹೋವನಾದ ದೇವರು ಭೂಮ್ಯಾಕಾಶವನ್ನು ನಿರ್ಮಾಣ ಮಾಡಿದ ಚರಿತ್ರೆ ಇದೇ. ಧರ್ಮೋಪದೇಶಕಾಂಡ 6:4 ಇಸ್ರಾಯೇಲರೇ, ಕೇಳಿರಿ, ನಮ್ಮ ದೇವರಾದ ಯೆಹೋವನು ಒಬ್ಬನೇ ದೇವರು; 6:5 ನೀವು ನಿಮ್ಮ ದೇವರಾದ ಯೆಹೋವನನ್ನು ಪೂರ್ಣಹೃದಯದಿಂದಲೂ, ಪೂರ್ಣಪ್ರಾಣದಿಂದಲೂ ಮತ್ತು ಪೂರ್ಣಶಕ್ತಿಯಿಂದಲೂ ಪ್ರೀತಿಸಬೇಕು.

ಬೈಬಲ್ ಹೊಸ ಪುರಾವೆ – ಮತ್ತಾಯನು ಕಾಂಡ 28:19 ಆದ್ದರಿಂದ ಹೋಗಿ ಎಲ್ಲಾ ಜನಾಂಗಗಳನ್ನು ಶಿಷ್ಯರನ್ನಾಗಿ ಮಾಡಿ, ತಂದೆಯ ಮತ್ತು ಮಗನ ಮತ್ತು ಪವಿತ್ರಾತ್ಮದ ಹೆಸರಿನಲ್ಲಿ ಅವರಿಗೆ ದೀಕ್ಷಾಸ್ನಾನ ಮಾಡಿಸಿರಿ", (ಇಲ್ಲಿ ದೇವರು ಎಂದರೆ ಮೂರು ತಂದೆ+ಮಗ+ಪವಿತ್ರಾತ್ಮ ಸಮ್ಮಿಲನವೇ ದೇವರು) (ಟ್ರಿನಿಟಿ ಅನ್ನುತ್ತಾರೆ) ದೇವರೆಂದು ಪ್ರಾರ್ಥಿಸುವ ಜೀಸಸ್ ಜನನ:– ಲೂಕನು – 1: 26 ಆರನೆಯ ತಿಂಗಳಲ್ಲಿ ದೇವರು ಗಬ್ರಿಯೇಲನೆಂಬ ತನ್ನ ದೂತನನ್ನು ಗಲಿಲಾಯ ಸೀಮೆಯ ನಜರೇತೆಂಬ ಊರಿಗೆ ಒಬ್ಬ ಕನ್ಯೆಯ ಬಳಿಗೆ ಕಳುಹಿಸಿದನು; 27 ಆ ಕನ್ಯೆಯ ಹೆಸರು ಮರಿಯಳು; ಆಕೆಯು ದಾವೀದನ ಮನೆತನದ ಯೋಸೇಫನೆಂಬ ಪುರುಷನಿಗೆ ವಿವಾಹ ನಿಶ್ಚಿತಾರ್ಥವಾಗಿದ್ದಳು. 28 ಆ ದೂತನು ಆಕೆಯ ಬಳಿಗೆ ಬಂದು 'ದೇವರ ದಯೆ ಹೊಂದಿದವಳೇ, ನಿನಗೆ ಶುಭವಾಗಲಿ'; 'ಕರ್ತನು ನಿನ್ನ ಸಂಗಡ ಇದ್ದಾನೆ' ಅಂದನು. 29 ಆಕೆಯು ಆ ಮಾತಿಗೆ ತತ್ತರಿಸಿ – ಇದೆಂಥ ಆಶೀರ್ವಾದ ಎಂದು ಯೋಚನೆಮಾಡುತ್ತಿರಲಾಗಿ 30 ಆ ದೂತನು ಆಕೆಗೆ – ಮರಿಯಳೇ, ಹೆದರಬೇಡ; ನಿನಗೆ ದೇವರ ದಯೆ ದೊರಕಿತು. 31 ಇಗೋ, ನೀನು ಗರ್ಭಿಣಿಯಾಗಿ ಒಬ್ಬ ಮಗನನ್ನು ಹೆರುವಿ; ಆತನಿಗೆ ಯೇಸುವೆಂದು ಹೆಸರಿಡಬೇಕು 32 ಆತನು ಮಹಾಪುರುಷನಾಗಿ ಪರಾತ್ಪರನ ಕುಮಾರನೆನಿಸಿಕೊಳ್ಳುವನು; ಇದಲ್ಲದೆ ದೇವರಾಗಿರುವ ಕರ್ತನು ಆತನ ಮೂಲಪಿತನಾದ ದಾವೀದನ ಸಿಂಹಾಸನವನ್ನು ಆತನಿಗೆ ಕೊಡುವನು. 33 ಆತನು ಯಾಕೋಬನ ವಂಶವನ್ನು ಸದಾಕಾಲ ಆಳುವನು; ಆತನ ರಾಜ್ಯಕ್ಕೆ ಅಂತ್ಯವೇ ಇರುವುದಿಲ್ಲ ಎಂದು ಹೇಳಿದನು. 34 ಆಗ ಮರಿಯಳು ಆ ದೂತನಿಗೆ – ಇದು ಹೇಗಾದೀತು? ನಾನು ಇನ್ನೂ ಪುರುಷನನ್ನು ಅರಿತವಳಲ್ಲವಲ್ಲಾ ಎಂದು ಕೇಳಿದ್ದಕ್ಕೆ ದೂತನು – 35 ನಿನ್ನ ಮೇಲೆ ಪವಿತ್ರಾತ್ಮ ಬರುವದು; ಪರಾತ್ಪರನ ಶಕ್ತಿಯ ನೆರಳು ನಿನ್ನ ಮೇಲೆ ಬೀಳುವುದು; ಆದದರಿಂದ ಹುಟ್ಟುವ ಆ ಪವಿತ್ರ ಶಿಶು ದೇವರ ಮಗನೆನಿಸಿಕೊಳ್ಳುವದು. ಲೂಕನು 10:27 ನಿನ್ನ ದೇವರಾಗಿರುವ ಕರ್ತನನ್ನು ನಿನ್ನ ಪೂರ್ಣಹೃದಯದಿಂದಲೂ ನಿನ್ನ ಪೂರ್ಣಪ್ರಾಣದಿಂದಲೂ ನಿನ್ನ ಪೂರ್ಣಶಕ್ತಿಯಿಂದಲೂ ನಿನ್ನ ಪೂರ್ಣ ಬುದ್ಧಿಯಿಂದಲೂ ಪ್ರೀತಿಸಬೇಕು. ಮತ್ತು ನಿನ್ನ ನೆರೆಯವನನ್ನು ನಿನ್ನಂತೆಯೇ ಪ್ರೀತಿಸಬೇಕು.

ಖುರಾನ್ 5: 73. ಅಲ್ಲಾಹನು ಮೂವರಲ್ಲಿ ಒಬ್ಬನು ಎಂದು ಹೇಳಿದವರು ಖಂಡಿತ ಧಿಕ್ಕಾರಿಗಳಾದರು. ನಿಜವಾಗಿ ಏಕೈಕ ಪೂಜಾರ್ಹನ ಹೊರತು ಬೇರಾರೂ

ಪೂಜಾರ್ಹರಲ್ಲ. ಅವರು ಸದ್ಯ ತಾವು ಏನನ್ನು ಹೇಳುತ್ತಿರುವರೋ ಅದರಿಂದ ದೂರ ಉಳಿಯದಿದ್ದರೆ, ಅವರಲ್ಲಿನ ಧಿಕ್ಕಾರಿಗಳಿಗೆ ತುಂಬಾ ಕಠಿಣ ಶಿಕ್ಷೆ ಸಿಗಲಿದೆ.

ಖುರಾನ್ 29: 46. ಗ್ರಂಥದವರೊಡನೆ ನೀವು ಸದಾ ಅತ್ಯುತ್ತಮ ರೀತಿಯಲ್ಲೇ ಸಂವಾದ ನಡೆಸಿರಿ – ಅವರಲ್ಲಿನ ಅಕ್ರಮಿಗಳನ್ನು ಬಿಟ್ಟು. ನೀವು ಹೇಳಿರಿ; "ನಾವಂತು, ನಮಗೆ ಇಳಿಸಿಕೊಡಲಾಗಿರುವುದನ್ನೂ (ಕುರ್‌ಆನ್‌ಅನ್ನೂ) ನಿವುಗೆ ಇಳಿಸಿ ಕೊಡಲಾಗಿರುವುದನ್ನೂ (ತೌರಾತ್, ಇನ್‌ಜೀಲ್ ಇತ್ಯಾದಿಗಳನ್ನೂ) ನಂಬಿರುವೆವು. ನಮ್ಮ ದೇವರೂ ನಿಮ್ಮ ದೇವರೂ ಒಬ್ಬನೇ ಮತ್ತು ನಾವು ಅವನಿಗೆ ಶರಣಾಗಿರುವೆವು".

ಖುರಾನ್ 5: 17. ಖಂಡಿತವಾಗಿಯೂ ಮರ್ಯಮರ ಪುತ್ರ ಮಸೀಹರೇ ಅಲ್ಲಾಹನೆಂದು ವಾದಿಸಿದವರು ಧಿಕ್ಕಾರಿಗಳಾಗಿ ಬಿಟ್ಟರು. ಹೇಳಿರಿ; ಒಂದು ವೇಳೆ ಅಲ್ಲಾಹನು ಮರ್ಯಮರ ಪುತ್ರ ಈಸಾರನ್ನೂ, ಅವರ ತಾಯಿಯನ್ನೂ, ಭೂಮಿಯಲ್ಲಿರುವ ಎಲ್ಲರನ್ನೂ ನಾಶ ಮಾಡ ಬಯಸಿದರೆ, ಅವನನ್ನು ಯಾರು ತಾನೇ ತಡೆಯಬಲ್ಲರು? ಆಕಾಶಗಳ, ಭೂಮಿಯ ಮತ್ತು ಅವುಗಳ ನಡುವೆ ಇರುವ ಎಲ್ಲವುಗಳ ಅಧಿಕಾರವು ಅಲ್ಲಾಹನಿಗೇ ಸೇರಿದೆ. ಅವನು ತಾನಿಚ್ಛಿಸಿದ್ದನ್ನು ಸೃಷ್ಟಿಸುತ್ತಾನೆ. ಅಲ್ಲಾಹನು ಎಲ್ಲವನ್ನೂ ಮಾಡಲು ಶಕ್ತನಾಗಿದ್ದಾನೆ.

ಖುರಾನ್ 5: 18. ಯಹೂದಿಗಳು ಮತ್ತು ಕ್ರೈಸ್ತರು – ನಾವು ಅಲ್ಲಾಹನ ಪುತ್ರರು ಮತ್ತು ಅವನ ಪ್ರೀತಿ ಪಾತ್ರರು – ಎನ್ನುತ್ತಾರೆ. ಹೇಳಿರಿ; ಹಾಗಾದರೆ ನಿಮ್ಮ ಪಾಪಗಳಿಗಾಗಿ ಅವನು ನಿಮ್ಮನ್ನು ಶಿಕ್ಷಿಸುವುದೇಕೆ? ನಿಜವಾಗಿ ನೀವು, ಅವನು (ಅಲ್ಲಾಹನು) ಸೃಷ್ಟಿಸಿರುವ ಮಾನವರಾಗಿರುವಿರಿ. ಅವನಂತು ತಾನಿಚ್ಛಿಸಿದವರನ್ನು ಕ್ಷಮಿಸುತ್ತಾನೆ ಮತ್ತು ತಾನಿಚ್ಛಿಸಿದವರನ್ನು ಶಿಕ್ಷಿಸುತ್ತಾನೆ. ಆಕಾಶಗಳ, ಭೂಮಿಯ ಮತ್ತು ಅವುಗಳ ನಡುವಿನ ಎಲ್ಲವುಗಳ ಆಧಿಪತ್ಯವು ಅಲ್ಲಾಹನಿಗೇ ಸೇರಿವೆ. ಅಂತಿಮ ಮರಳಿಕೆ ಕೂಡಾ ಅವನ ಕಡೆಗೇ ಇವೆ.

ಒಟ್ಟಾರೆ ಮುಸ್ಲಿಮರ ವಾದ ಅಲ್ಲಾಹ ಒಬ್ಬರೆ ದೇವರು ಯಹೂದಿಗಳ ದೇವರು ಅಲ್ಲಾಹನೆ, ಅವರ ಪ್ರವಾದಿಗಳು ಅಲ್ಲಾಹನ ಪ್ರವಾದಿಗಳೆ, ಅವರು ವಿಗ್ರಹಾರಾಧಕರಲ್ಲ. ಆದ್ದರಿಂದ ಕೊಟ್ಟಿರುವ ಕೊನೆ ಗ್ರಂಥ ಖುರಾನ್ ನಂಬಿ ಎಲ್ಲರೂ ಅಲ್ಲಾಹರಿಗೆ ಶರಣಾಗಿ ಏಕ ಮತ, ಏಕ ದೇವರು ಏಕ ಪ್ರವಾದಿ ಎಂದು ತಮ್ಮ ದಾರಿ ತಪ್ಪಿದ ನಂಬಿಕೆಗಳನ್ನು ಕೊನೆಗಾಣಿಸಿ ಇಸ್ಲಾಮ್ ಮತದೊಂದಿಗೆ ಅಲ್ಲಾಹನಿಗೆ ಶರಣಾಗಿ ಮುಸ್ಲಿಮರಾಗಿ. ಇದು (ಖುರಾನ್) ಮತಾಂತರಕ್ಕೆ ಬರೆದುಕೊಂಡ ಬುನಾದಿ ಅನ್ನಿಸುತ್ತಿಲ್ಲವೆ.

ಖುರಾನ್ ಬೈಬಲ್ ನಿಂದ ಪಡೆದದ್ದೇ ?

ಖುರಾನ್ 16: 103. ರಲ್ಲಿ ಹೀಗೆ ಬರೆದಿದೆ:- ಒಬ್ಬ ಮಾನವನು (ನಿಮಗೆ) ಇದನ್ನು ಕಲಿಸಿ ಕೊಡುತ್ತಾನೆಂದು ಅವರು ಆರೋಪಿಸುತ್ತಿರುವುದು ನಮಗೆ ಚೆನ್ನಾಗಿ ತಿಳಿದಿದೆ. ಆದರೆ ಅವರು ಆ ಸುಳ್ಳಾರೋಪವನ್ನು ಯಾರೆಡೆಗೆ ಸೂಚಿಸುತ್ತಿರುವರೋ ಆತನದು 'ಅಜಮಿ' (ಅರಬಿ ಅಲ್ಲದ) ಭಾಷೆಯಾಗಿದೆ ಮತ್ತು ಇದು (ಕುರ್‌ಆನ್) ಸ್ಪಷ್ಟವಾದ ಅರಬಿ ಭಾಷೆಯಲ್ಲಿದೆ.

ಈ ಶ್ಲೋಕವನ್ನು ಅನುವಾದಿಸಿರುವ ಇಬ್ನ್ ಅಲ್ ಕತೀರ್, ವಿಗ್ರಹಾರಾಧಕರು ಸಾದಿಸುತ್ತಿದುದ್ದೇನೆಂದರೆ, ಖುರಾನನ್ನು ಮನುಷ್ಯನೊಬ್ಬ ಕಲಿಸಿದ್ದನು, ಅದನ್ನು ಅಲ್ಲಗಳೆಯುತ್ತ ಅಲ್ಲಾಹ ಈ ಶ್ಲೋಕದಲ್ಲಿ ಹೇಳಿದ್ದಾರೆ. ಮುಹಮ್ಮದ್ ಅವರಿಗೆ ಮುಸ್ಲಿಮರು ಪಠಿಸಿದ ಈ ಖುರಾನ್ ನಿಜವಾಗಿ ಮಾನವನಿಂದ ಅವನಿಗೆ ಕಲಿಸಲ್ಪಟ್ಟಿದೆಯೆಂದು ಅವರು ಹೇಳಿದಾಗ ವಿಗ್ರಹಗಾರರ ಸುಳ್ಳು, ಆರೋಪಗಳು ಮತ್ತು ಸುಳ್ಳುಸುದ್ದಿಗಳ ಬಗ್ಗೆ ಅಲ್ಲಾ ಹೇಳುತ್ತಾನೆ. ಅವನು ಖುರೇಶ್ನ ಕೆಲವು ಕುಲದ ಸೇವಕರಾಗಿ ವಾಸಿಸುತ್ತಿದ್ದ ಮತ್ತು ಆಸ್-ಸಫಾ ಮೂಲಕ ಸರಕುಗಳನ್ನು ಮಾರಾಟ ಮಾಡುವ ವಿದೇಶಿ (ಅಂದರೆ, ಅರಬ್ಬೇತರ) ಮನುಷ್ಯನನ್ನು ಉಲ್ಲೇಖಿಸಿದ್ದಾರೆ. ಬಹುಶಃ ಅಲ್ಲಾಹುವಿನ ಮೆಸೆಂಜರ್ (ಮೊಹಮ್ಮದ್) ಕೆಲವೊಮ್ಮೆ ಅವರೊಂದಿಗೆ ಕುಳಿತು ಸ್ವಲ್ಪ ಅವನಲ್ಲಿ ಮಾತನಾಡಿರಬಹುದು, ಆದರೆ ಅವನಿಗೆ ಅರೇಬಿಕ್ ಗೊತ್ತಿಲ್ಲ ವಿದೇಶಿ ಆಗಿದ್ದ, ಅವರು ಬಂದಾಗ ಪ್ರಶ್ನೆಗಳಿಗೆ ಉತ್ತರಿಸಲು ಸಾಕಷ್ಟು ಸರಳ ನುಡಿಗಟ್ಟುಗಳು ಮಾತ್ರ ಇದ್ದವು.

ಶಾಹಿ ಬುಕಾರಿ ಸಂಪುಟ-4, ಪುಸ್ತಕ-56,ಹದಿತ್-814:- "ಅನಸ್ ವಿವರಿಸಿದಂತೆ: ಅಲ್ಲಿ ಒಬ್ಬ ಕ್ರೈಸ್ತನು ಇದ್ದನು ಆತ ಇಸ್ಲಾಮನ್ನು ಸ್ವೀಕರಿಸಿದ್ದನು ಆತ ಸುರತ್ ಅಲ್ ಬಕರಾ ಮತ್ತು ಅಲ್ ಇಮ್ರಾನ್ ಓದುತ್ತಿದ್ದನು, ಮತ್ತು ಆತ ಪ್ರವಾದಿಗಳಿಗಾಗಿ ಬರೆಯುತ್ತಿದ್ದನು. (ರಿವಿಲೇಷನ್ಸ್-ಈ ಹಿಂದೆ ತಿಳಿಯದ್ದನ್ನು ಮಾನವರಿಗೆ ತಿಳಿಸುವುದೇ ಇದರ ಅರ್ಥ). ನಂತರ ಆತ ಕ್ರಿಶ್ಚಿಯನ್ ಆಗಿ ಮರು ಹೋಗಿಬಿಟ್ಟನು ಮತ್ತು ಆತನು "ಮೊಹಮ್ಮದರಿಗೆ ಏನೂ ಗೊತ್ತಿಲ್ಲ ನಾನೇ ಅವನಿಗೆ ಬರೆದದ್ದು" ಎಂದು ಹೇಳುತ್ತಿದ್ದನು. ಆಗ ಅಲ್ಲಹರು ಅವನನ್ನು ಸಾಯಿಸಿದರು, ಜನರು ಆತನನ್ನು ಭೂಮಿಯಲ್ಲಿ ಮುಚ್ಚಿದರು, ಆದರೆ ಬೆಳಗ್ಗೆ ಎದ್ದು ನೋಡಿದಾಗ ಭೂಮಿ ಆತನ ದೇಹವನ್ನು ಹೊರ ಎಸೆದಿತ್ತು. ಆಗ ಜನರು ಇದು ಮೊಹಮ್ಮದ್ ಮತ್ತು ಆತನ ಸಹಚರರ ಕೃತ್ಯ ಎಂದರು... ಮತ್ತೆ ಆಳವಾಗಿ ತೆಗೆದು ಮುಚ್ಚಿದರು ಮತ್ತೆ ಬೆಳಗ್ಗೆ ದೇಹ ಹೊರಹಾಕಲ್ಪಟ್ಟಿತ್ತು, ಆಗ ಜನರು ಇದು ಮೊಹಮ್ಮದ್ ಮತ್ತು ಆತನ ಸಹಚರರ ಕೃತ್ಯ ಎಂದರು... ಮತ್ತೆ ಬಾರೀ ಆಳವಾಗಿ ತೆಗೆದು ಮುಚ್ಚಿದರು ಮತ್ತೆ ಬೆಳಗ್ಗೆ ದೇಹ

ಹೊರಹಾಕಲ್ಪಟ್ಟಿತ್ತು, ಆಗ ಅವರು ನಂಬಿದರು ಅವನಿಗೆ ಬಂದಿರುವ ಗತಿ ಮಾನವರಿಂದ ಆದದ್ದು ಅಲ್ಲ, ಅವನನ್ನು ಅಲ್ಲಿಯೇ ಭೂಮಿಯ ಮೇಲೆ ಎಸೆದು ಸುಮ್ಮನಾಗಬೇಕೆಂದು"

ಸೈಯಿದ್ ಅಬುಲ್ ಅಲಾ ಮೌದುದಿ–ತಫೀಮ್ ಅಲ್ ಖುರಾನ್– ಇದರಲ್ಲಿ ಬರೆದಿರುವಂತೆ – "ಅವನು ಯಾರೆಂದರೆ, ಅವನು ಟೋರಾಹ್ ಮತ್ತು ಸುವಾರ್ತೆಯನ್ನು (ಬೈಬಲ್ ಪುಸ್ತಕಗಳು) ಓದಿದ ಮತ್ತು ಪವಿತ್ರ ಪ್ರವಾದಿಗೆ ಪರಿಚಯವನ್ನು ಹೊಂದಿದ್ದನು, ಅವನು ಪವಿತ್ರ ಖುರಾನ್ ನಿಜವಾದ ಲೇಖಕನಾಗಿದ್ದನು ಎಂದು ಸುಳ್ಳು ವರದಿಯನ್ನು ಹರಡುವುದ್ದಕ್ಕಾಗಿ ಅವಿಶ್ವಾಸಿಗಳಿಗೆ ಒಂದು ಅವಕಾಶವನ್ನು ಕೊಟ್ಟನು, ಆದರೆ ಮುಹಮ್ಮದ್ (ಅಲ್ಲಾ ಅವರ ಶಾಂತಿ ಅವನ ಮೇಲೆ ಇರಬೇಕು) ಅದನ್ನು ದೇವರ ವಾಕ್ಯವೆಂದು ತೋರಿಸಿದರು." --- ಸುವಾರ್ತೆ – ಗಾಸ್ಪೆಲ್ – ಇದರಲ್ಲಿ ಹೊಸ ಪುರಾವೆಯ ಪುಸ್ತಕಗಳಾದ ಮತ್ತಾಯನು, ಮಾರ್ಕನು, ಲೂಕನು, ಯೋಹಾನನು (ನಾಲ್ಕು).

ಶಾಹಿ ಬುಕಾರಿ ಸಂಪುಟ–4, ಪುಸ್ತಕ–55, ಹದಿತ್–605:– ಐಷ ವಿವರಿಸಿದಂತೆ "ಪ್ರವಾದಿಯ ಹೃದಯ ಜೋರಾಗಿ ಬಡಿದುಕೊಳ್ಳುತ್ತಿದ್ದಾಗ ಖದೀಜ (ಪ್ರವಾದಿಯ ಮೊದಲನೇ ಹೆಂಡತಿ) ಬಳಿ ಹೋದರು. ಆಕೆಯು ವರಾಖ ಬಿನ್ ನೌಫಲ್ ಬಳಿ ಕರೆದು ಕೊಂಡು ಹೋದಳು, ಆತ ಕ್ರೈಸ್ತ ಮತಾಂತರವಾಗಿದ್ದವನು, ಗಾಸ್ಪೆಲ್ (ಸುವಾರ್ತೆ) ಅನ್ನು ಅರೆಬ್ಬೀಯಲ್ಲಿ ಓದುತ್ತಿದ್ದವನು, ಆತ ಪ್ರವಾದಿಗೆ ಕೇಳಿದನು "ಏನು ನೋಡಿದೆ, ಪ್ರವಾದಿ ಹೇಳಿದಾಗ ವಾರಾಖಾ ಹೇಳಿದನು "ಇದು ಅದೇ ದೇವತೆ ಅಲ್ಲಾಹರು ಪ್ರವಾದಿ ಮೋಸೆಸ್ ಬಳಿ ಕಳುಹಿಸಿದ್ದು. ನೀವು ಪವಿತ್ರ ಸಂದೇಶವನ್ನು ಸ್ವೀಕರಿಸುವ ತನಕ ನಾನು ಬದುಕಬೇಕು, ನಾನು ನಿಮ್ಮನ್ನು ಬಲವಾಗಿ ಬೆಂಬಲಿಸುತ್ತೇನೆ"

ಶಾಹಿ ಬುಕಾರಿ ಸಂಪುಟ–6, ಪುಸ್ತಕ–60, ಹದಿತ್–478:– ಐಷ ವಿವರಿಸಿದಂತೆ: "....ವರಾಖ ರವರು ಖದೀಜ ರವರ ತಂದೆಯ ಕಡೆಯ ಚಿಕ್ಕಪ್ಪನ ಮಗನಾಗಿದ್ದರು.... ವರಾಖ ಇವರು ಇಸ್ಲಾಮ್ ಬರುವುದಕ್ಕೆ ಮೂಂಚೆ ಕ್ರೈಸ್ತರಾಗಿ ಮತಾಂತರ ಹೊಂದಿದ್ದರು...ಗಾಸ್ಪೆಲ್ (ಸುವಾರ್ತೆ) ಗ್ರಂಥವನ್ನು ಅರೇಬಿಕ್ ಬಾಷೆಯಲ್ಲಿ ಬರೆಯುತ್ತಿದ್ದರು....ಅಲ್ಲಾಹರು ಎಷ್ಟು ಇಚ್ಛಿಸಿದ್ದರೋ ಅಷ್ಟು ಬರೆದಿದ್ದರು... ಸ್ವಲ್ಪ ಸಮಯದ ನಂತರ ವರಾಖಾ ರವರು ನಿಧನ ಹೊಂದಿದರು ಮತ್ತು ಪವಿತ್ರ ಸ್ಫೂರ್ತಿ ಸ್ಥಬ್ದವಾಯಿತು (ನಿಂತಿತು) ಸ್ವಲ್ಪ ಸಮಯದವರೆಗೆ ಅಲ್ಲಾಹರ ದೂತನು ತುಂಬಾ ದು:ಖಿತನಾಗಿದ್ದನು.

ಖುರಾನ್ 5: 48. (ದೂತರೇ,) ನಾವೀಗ ನಿಮಗೆ ಸತ್ಯವಿರುವ ಗ್ರಂಥವನ್ನು ಇಳಿಸಿ ಕೊಟ್ಟಿರುವೆವು. ಇದು (ಗತಕಾಲದ) ಗ್ರಂಥದ ಪೈಕಿ ಜನರ ಬಳಿ ಉಳಿದಿರುವುದನ್ನು ಸಮರ್ಥಿಸುವ ಮತ್ತು ಅದನ್ನು ಕಾಪಾಡುವ ಗ್ರಂಥವಾಗಿದೆ. ನೀವಿನ್ನು ಅಲ್ಲಾಹನು ಇಳಿಸಿರುವ ನಿಯಮ ಪ್ರಕಾರವೇ ಅವರ ನಡುವೆ ತೀರ್ಪು ನೀಡಿರಿ. ನಿಮ್ಮ ಬಳಿಗೆ ಸತ್ಯವು ಬಂದಿರುವಾಗ, ನೀವು ಅವರ ಅಪೇಕ್ಷೆಗಳನ್ನು ಅನುಸರಿಸಬೇಡಿ. ನಾವು ನಿಮ್ಮ ಪೈಕಿ ಪ್ರತಿಯೊಬ್ಬರಿಗೂ (ಪ್ರತಿಯೊಂದು ಸಮುದಾಯಕ್ಕೂ) ನಿರ್ದಿಷ್ಟ ನಿಯಮ ಹಾಗೂ ದಾರಿಯೊಂದನ್ನು ನಿಗದಿ ಪಡಿಸಿದ್ದೇವೆ. ಅಲ್ಲಾಹನು ಬಯಸಿದ್ದರೆ ನಿಮ್ಮೆಲ್ಲರನ್ನು ಒಂದೇ ಸಮುದಾಯ ವಾಗಿಸುತ್ತಿದ್ದನು. ಆದರೆ ಅವನು, ನಿಮಗೆ ಏನನ್ನು ನೀಡಿರುವನೋ ಅದರ ಮೂಲಕವೇ ನಿಮ್ಮನ್ನು ಪರೀಕ್ಷಿಸಬಯಸುತ್ತಾನೆ. ನೀವೀಗ ಒಳಿತಿನಲ್ಲಿ ಪರಸ್ಪರ ಸ್ಪರ್ಧಿಸಿರಿ. ಕೊನೆಗೆ ನೀವೆಲ್ಲರೂ ಅಲ್ಲಾಹನೆಡೆಗೇ ಮರಳಲಿಕ್ಕಿದೆ – ಆಗ ಅವನು, ನೀವು ಭಿನ್ನತೆ ತಾಳಿದ್ದ ವಿಷಯಗಳ ಕುರಿತು ನಿಮಗೆ ತಿಳಿಸುವನು.

ಖುರಾನ್ ಮತ್ತು ಹದಿತ್ ಗಳ್ಳಲ್ಲೇ ಎರಡು ರೀತಿಯ ಹೇಳಿಕೆ ಇದೆ, ಒಂದು ಆತನಿಗೆ ಅರೆಬ್ಬಿ ಬಾಷೆ ಬರುತ್ತಿರಲಿಲ್ಲ ಎಂದು ಖುರಾನಿನಲ್ಲಿ ಇದೆ, ತಫ್ಸೀರ್ ನಲ್ಲಿ ಮುಂದುವರಿದು ಪ್ರವಾದಿಗಳು ಆತನೊಡನೆ ಮಾತನಾಡಿರಬಹುದು ಎಂದಿದೆ, ನಂತರದ ಹದಿತ್ ನಲ್ಲಿ ಆತ ಅರೆಬ್ಬಿಯಲ್ಲಿನ ಖುರಾನನ್ನು ಓದುತ್ತಿದ್ದ, ಪ್ರವಾದಿಗಳಿಗಾಗಿ ಬರೆಯುತ್ತಿದ್ದ ಎಂದಿದೆ, ಮುಸ್ಲಿಮನಾಗಿ ಪರಿವರ್ತಿತನಾಗಿದ್ದ ಎಂದಿದೆ – ಮುಂದುವರಿದು ಶೋದಿಸಿದಾಗ ಸಿಗುವುದೇ ಮೊಹಮ್ಮದ್ದರ ಹೆಂಡತಿಯ ಸಹೋದರ ಸಂಬಂದಿ – ಅವರೇ ಕ್ರೈಸ್ತರು, ಅವರು ಗಾಸ್ಪೆಲ್ ಅರೆಬ್ಬಿಯಲ್ಲಿ ಬರೆಯುತ್ತಿದ್ದರು – ಅವರ ಸಾವಿನ ನಂತರ ಮೊಹಮ್ಮದರ ಪವಿತ್ರ ಸ್ಪೂರ್ತಿ ನಿಂತಿತು – ಖುರಾನ್ ಸ್ವಯಂ ಹೇಳುತ್ತೆ ಖುರಾನಿನಲ್ಲಿ ಇರುವುದು ಈ ಹಿಂದೆ ಇಳಿಸಿದ್ದ ಗ್ರಂಥಗಳ ಪೈಕಿ ಜನರ ಬಳಿ ಉಳಿದಿರುವುದನ್ನು ಸಮರ್ಥಿಸುವ ಮತ್ತು ಅದನ್ನು ಕಾಪಾಡುವ ಗ್ರಂಥವಾಗಿದೆ – ಇದರಲ್ಲಿ ಅಡಗಿರುವ ಗುಪ್ತತೆ ಏನು ಓದುಗರಾದ ನೀವೆ ಹೂಹಿಸಿ.

ಪ್ರವಾದಿ ಮೊಹಮ್ಮದ್ ನಿರಕ್ಷರಿ

ಖುರಾನ್ 7: 157. ಹೇಳುತ್ತೆ – ಅವರು ನಿರಕ್ಷರಿ ಪ್ರವಾದಿಯನ್ನು ಅನುಸರಿಸುತ್ತಾರೆ. ಅವರ (ಆ ಪ್ರವಾದಿಯ) ಕುರಿತು ತಮ್ಮ ಬಳಿ ಇರುವ ತೌರಾತ್ ಮತ್ತು ಇಂಜೀಲ್‌ಗಳಲ್ಲಿ (ಈ ರೀತಿ) ಬರೆದಿರುವುದನ್ನು ಅವರು ಕಾಣುತ್ತಾರೆ; "ಅವರು (ಆ ಪ್ರವಾದಿ) ಅವರಿಗೆ, ಒಳಿತನ್ನು ಆದೇಶಿಸುವರು, ಅವರನ್ನು ಕೆಡುಕಿನಿಂದ

ತಡೆಯುವರು, ನಿರ್ಮಲವಾದವುಗಳನ್ನು ಅವರ ಪಾಲಿಗೆ ಸಮ್ಮತಗೊಳಿಸುವರು, ಮಲಿನ ವಸ್ತುಗಳನ್ನು ಅವರ ಪಾಲಿಗೆ ನಿಷೇಧಿಸುವರು, ಅವರಿಂದ ಅವರ ಭಾರಗಳನ್ನು ಇಳಿಸುವರು ಮತ್ತು ಅವರ ಮೇಲಿದ್ದ ನೊಗಗಳನ್ನು ಕಳಚುವರು – ಅವರಲ್ಲಿ ನಂಬಿಕೆ ಇಟ್ಟು ಅವರನ್ನು ಸಮರ್ಥಿಸುವವರು, ಅವರಿಗೆ ನೆರವಾಗುವವರು ಮತ್ತು ಅವರ ಜೊತೆಗೆ ಇಳಿಸಲಾಗಿರುವ ಪ್ರಕಾಶವನ್ನು ಅನುಸರಿಸುವವರೇ ವಿಜಯಿಗಳು."

ಖುರಾನ್ 7: 158. (ದೂತರೇ) ಹೇಳಿರಿ; ಮಾನವರೇ, ನಾನು ನಿಮ್ಮೆಲ್ಲರ ಪಾಲಿಗೆ ಅಲ್ಲಾಹನ ದೂತನಾಗಿರುವೆನು. ಆಕಾಶಗಳ ಮತ್ತು ಭೂಮಿಯ ಆಧಿಪತ್ಯವು ಅವನಿಗೆ (ಅಲ್ಲಾಹನಿಗೆ) ಸೇರಿದೆ. ಅವನ ಹೊರತು ಬೇರೆ ದೇವರಿಲ್ಲ. ಅವನೇ ಜೀವಂತಗೊಳಿಸುವವನು ಮತ್ತು ಮರಣ ನೀಡುವವನು. ನೀವೀಗ ಅಲ್ಲಾಹನಲ್ಲೂ ಆತನ ದೂತನಲ್ಲೂ ನಂಬಿಕೆ ಇಡಿರಿ – ಅವರು ನಿರಕ್ಷರಿ ಪ್ರವಾದಿಯಾಗಿದ್ದು, ಅಲ್ಲಾಹನಲ್ಲಿ ಹಾಗೂ ಅವನ ವಚನಗಳಲ್ಲಿ ನಂಬಿಕೆ ಉಳ್ಳವರಾಗಿದ್ದಾರೆ. ಮಾರ್ಗದರ್ಶನ ಪಡೆಯಲಿಕ್ಕಾಗಿ ನೀವು ಅವರನ್ನು ಅನುಸರಿಸಿ.

ಖುರಾನ್ 29: 48. (ದೂತರೇ,) ಈ ಹಿಂದೆ ನೀವು ಯಾವುದೇ ಗ್ರಂಥವನ್ನು ಓದಿರಲಿಲ್ಲ ಮತ್ತು ನೀವು ನಿಮ್ಮ ಕೈಯಿಂದ ಏನನ್ನೂ ಬರೆದಿರಲಿಲ್ಲ. ಅನ್ಯಥಾ ಮಿಥ್ಯವಾದಿಗಳು ಸಂಶಯ ಪಡುತ್ತಿದ್ದರು.

ಖುರಾನ್ ಅಲ್ಲಾಹರು ಬರೆದಂತೂ ಕಳಿಸಿಲ್ಲ ಹಾಗಾದರೆ ಬರೆದಿದ್ದು ಯಾರು?

ಖುರಾನ್ 6:7. ಹೇಳುತ್ತದೆ, (ದೂತರೇ,) ಒಂದು ವೇಳೆ ನಾವು ನಿಮಗೆ ಕಾಗದದಲ್ಲಿ ಬರೆದಿರುವ ಸಂದೇಶವನ್ನು ಇಳಿಸಿಕೊಟ್ಟಿದ್ದರೆ ಮತ್ತು ಅವರು (ಜನರು) ಅದನ್ನು ತಮ್ಮ ಕೈಗಳಿಂದ ಮುಟ್ಟುವಂತಿದ್ದರೆ, ಆಗಲೂ ಧಿಕ್ಕಾರಿಗಳು – ಇದೆಲ್ಲಾ ಸ್ಪಷ್ಟ ಮಾಟಗಾರಿಕೆಯಲ್ಲದೆ ಬೇರೇನೂ ಅಲ್ಲ – ಎನ್ನುತ್ತಿದ್ದರು.

ಖುರಾನ್ 4: 153. (ದೂತರೇ,) ಗ್ರಂಥದವರು ನಿಮ್ಮೊಡನೆ, ತಮಗಾಗಿ ಆಕಾಶದಿಂದ ಒಂದು ಗ್ರಂಥವನ್ನು ಇಳಿಸಿಕೊಡಬೇಕೆಂದು ಆಗ್ರಹಿಸುತ್ತಿದ್ದಾರೆ. ಈ ಹಿಂದೆ ಅವರು ಮೂಸಾರ ಮುಂದೆ ಇದಕ್ಕಿಂತ ದೊಡ್ಡ ಆಗ್ರಹಗಳನ್ನು ಮಂಡಿಸಿದ್ದರು ಮತ್ತು "ನಮಗೆ ವ್ಯಕ್ತವಾಗಿ ಅಲ್ಲಾಹನನ್ನು ತೋರಿಸಿ ಕೊಡಿರಿ" ಎಂದಿದ್ದರು. ಕೊನೆಗೆ, ಅವರ ಅಕ್ರಮಗಳ ಕಾರಣ ಅವರ ಮೇಲೆ ಸಿಡಿಲೆರಗಿ ಬಿಟ್ಟಿತು. ಮುಂದೆ, ತಮ್ಮ ಬಳಿಗೆ ಬಹಳ ಸ್ಪಷ್ಟ ಪುರಾವೆಗಳು ಬಂದ ಬಳಿಕವೂ ಅವರು ಕರುವನ್ನು (ದೇವರಾಗಿ) ನೆಚ್ಚಿಕೊಂಡರು. ಇಷ್ಟಿದ್ದೂ ನಾವು ಅವರನ್ನು ಕ್ಷಮಿಸಿದೆವು ಮತ್ತು ಮೂಸಾರಿಗೆ ಬಹಳ ಸ್ಪಷ್ಟವಾದ ಪ್ರಾಬಲ್ಯವನ್ನು ನೀಡಿದೆವು.

ಖುರಾನ್ ಅಧ್ಯಾಯ 52 : 29,30,33,40,41. ಮತ್ತು 37:36 ರಲ್ಲಿ ಏಕಾ ಏಕಿ ಹೇಳುತ್ತಿರುವ ವಿಚಾರವನ್ನು ಬದಲಿಸಿ ಪ್ರವಾದಿಯ ಉಪದೇಶಕ್ಕೆ ಬಂದು ಬಿಡುತ್ತಾರೆ, ಅಲ್ಲಿ ಯಾರೋ ಮೊಹಮದ್ದ್ ಪ್ರವಾದಿಗಳಿಗೆ ಮಾಂತ್ರಿಕ, ಮನೋರೋಗಿ, ಅವನೊಬ್ಬ ಕವಿ, ಖುರಾನ್ ಸ್ವಯಂ ರಚಿತವಾದದ್ದು ಎಂಬ ಆರೋಪಕ್ಕೆ ಈ ಶ್ಲೋಕಗಳಲ್ಲಿ ಅಲ್ಲಾಹರು ಉತ್ತರ ಕೊಟ್ಟಂತಿದೆ, ಅಥವ ಮೊಹಮ್ಮದರು ಇದನ್ನು ವಿಮರ್ಶಿಸಿ ಅವರೇ ಸಂತೈಸಿ ಕೊಂಡಂತೆ ಇದೆ. ಇಲ್ಲಿ "ಅವರು ಬರೆದಿಡುತ್ತಿರುವ ಗುಪ್ತ ಲೋಕದ ಜ್ಞಾನವೇವಾದರೂ ಅವರ ಬಳಿ ಇದೆಯೇ" ಅನ್ನುವ ಪದ ಖಂಡಿತವಾಗಿ ಅದು ಮೊಹಮ್ಮದರ ಟೀಕಾಕಾರರಿಗೆ ಹೇಳಿದ್ದಾಗಿದೆ, ಗುಪ್ತವಾಗಿ ಖುರಾನ್ ಬರೆಯುತ್ತಿದ್ದವರು ಇದ್ದರು ಎಂದು ಒಪ್ಪಿಕೊಂಡಂತೆ ಆಯಿತಲ್ಲಾ.

52:29. (ದೂತರೇ,) ನೀವು ಉಪದೇಶಿಸಿರಿ. ನಿಮ್ಮ ಒಡೆಯನ ಅನುಗ್ರಹದಿಂದ ನೀವು ಮಾಂತ್ರಿಕರೂ ಅಲ್ಲ, ಮನೋರೋಗಿಯೂ ಅಲ್ಲ.

30. "ಅವನೊಬ್ಬ ಕವಿ. ಅವನು ಕಾಲದ ಪ್ರಹಾರಕ್ಕೆ ತುತ್ತಾಗುವುದನ್ನು ಕಾಣಲು ನಾವು ಕಾಯುತ್ತಿದ್ದೇವೆ" ಎಂದು ಅವರು ಹೇಳುತ್ತಿದ್ದಾರೆಯೇ?

33. "ಅವನು ಇದನ್ನು (ಕುರ್‌ಆನನ್ನು) ತಾನೇ ರಚಿಸಿಕೊಂಡಿದ್ದಾನೆ" ಎಂದವರು ಹೇಳುತ್ತಿದ್ದಾರೆಯೇ? ನಿಜವಾಗಿ ಅವರು ನಂಬುತ್ತಿಲ್ಲ.

40. (ದೂತರೇ,) ನೀವೇನು ಅವರಿಂದ ಏನಾದರೂ ಪ್ರತಿಫಲವನ್ನು ಅಪೇಕ್ಷಿಸಿರುವಿರಾ ಮತ್ತು ಅವರು ತಲೆದಂಡದ ಭಾರದಡಿ ನರಳುತ್ತಿರುವರೇ?

41. ಅಥವಾ ಅವರ ಬಳಿ, ಅವರು ಬರೆದಿಡುತ್ತಿರುವ ಗುಪ್ತಲೋಕದ ಜ್ಞಾನವೇನಾದರೂ ಇದೆಯೇ?

37: 36. ಮತ್ತು "ನಾವೇನು ಒಬ್ಬ ಹುಚ್ಚು ಪೀಡಿತ ಕವಿಗಾಗಿ ನಮ್ಮ ದೇವರುಗಳನ್ನು ಬಿಟ್ಟು ಬಿಡಬೇಕೇ?" ಎಂದು ಅವರು ಕೇಳುತ್ತಿದ್ದರು.

ಹದಿತ್ ಹೇಳುತ್ತೆ ಪ್ರವಾದಿ ಮೊಹಮ್ಮದರು ಪತ್ರ ಬರೆಯುತ್ತಿದ್ದರು ಎಂದು

ಶಾಹಿ ಬುಕ್ಕಾರಿ ಸಂಪುಟ-1, ಪುಸ್ತಕ-3, ಹದಿತ್-65:- ಅನಸ್ ಇಬ್ನ್ ಮಲ್ಲಿಕ್ ವಿವರಿಸಿದಂತೆ "ಒಂದು ಭಾರಿ ಪ್ರವಾದಿ ಪತ್ರವನ್ನು ಬರೆದರು ಅಥವ ಪತ್ರವನ್ನು ಬರೆಯಲು ಆಲೋಚನೆ ಹೊಂದಿದ್ದರು. ಪ್ರವಾದಿಯವರಿಗೆ ಹೇಳಲಾಯಿತು ಅವರು (ಅರಸರು) ಮುದ್ರೆ ಹಾಕದ ಹೊರತು ಪತ್ರವನ್ನು ಓದುವುದಿಲ್ಲ. ಆದ್ದರಿಂದ ಪ್ರವಾದಿಯವರು ಬೆಳ್ಳಿಯ ಉಂಗುರವನ್ನು ಮಾಡಿಸಿದರು ಅದರಲ್ಲಿ "ಮೊಹಮ್ಮದ್ ಅಲ್ಲಾಹನ ಪ್ರವಾದಿ" ಎಂದು ಕೆತ್ತಲ್ಪಟ್ಟಿತ್ತು...........

ಸುನನ್ ಅನ್ ನಸ್ಯೆ – ಸಂಪುಟ-5, ಬುಕ್-45, ಹದಿತ್-4849 :- ಇಬ್ನ್ ಶಿಬಬ್ ಹೇಳಿದಂತೆ: "ನಾನು ಅಲ್ಲಾಹರ ಪ್ರವಾದಿಯ ಪತ್ರವನ್ನ ಓದಿದ್ದೇನೆ, ಅದು ಅಮ್ರ್ ಬಿನ್ ಹಜ್ಮ್ ರವರಿಗೆ ಅವನನ್ನು ನಜರಾನ್ ಆಡಳಿತ ನಡೆಸಲು ಕಳುಹಿಸಿದಾಗ ಬರೆದದ್ದಾಗಿದೆ, ಆ ಪತ್ರ ಅಬು ಬಕರ್ ಬಿನ್ ಹಜ್ಮ್ ಹತ್ತಿರ ಇತ್ತು. ಅಲ್ಲಾಹಾನ ಪ್ರವಾದಿ ಹೀಗೆ ಬರೆದಿದ್ದರು "ಅಲ್ಲಾಹ ಮತ್ತು ಆತನ ಪ್ರವಾದಿಯಿಂದ ಹೇಳಿಕೆ; ಓ ನೀವು ನಂಬಿಕೆಯನ್ನಿಟ್ಟಿರುವವರು! ನಿಮ್ಮ ಜವಾಬ್ದಾರಿಗಳನ್ನು ಪೂರೈಸುವುದು, ಮತ್ತು ಆತ ಆತನಿಗೆ ಆಗುವಷ್ಟು ಶ್ಲೋಕಗಳನ್ನು ಬರೆದರು. ನಿಶ್ಚಯವಾಗಿ ಅಲ್ಲಾ ಎಣಿಸುತ್ತಾನೆ. ನಂತರ ಅವರು ಹೀಗೆ ಬರೆದರು: ಈ ಪುಸ್ತಕ ಪ್ರತೀಕಾರಕ್ಕಾಗಿ: ಅತ್ಮಕ್ಕಾಗಿ, ನೂರು ಒಂಟೆಗಳಿಗಾಗಿ "''''' ಮತ್ತು ಇತ್ಯಾದಿ"

ಶಾಹಿ ಬುಕಾರಿ – ಸಂಪುಟ-4, ಪುಸ್ತಕ-52, ಹದಿತ್-187, ಅಬ್ದುಲ್ಲಾ ಬಿನ್ ಅಬ್ಬಾಸ್: ಅಲ್ಲಾಹ ಪ್ರವಾದಿ ಸೀಜರ್ ರವರಿಗೆ ಪತ್ರ ಬರೆದು ಹೇಳಿದರು "ನೀವು ಇಸ್ಲಾಮನ್ನು ತಿರಸ್ಕರಿಸಿದರೆ, ರೈತರ ಪಾಪಗಳಿಗೆ ನೀವೆ ಹೊಣೆಯಾಗಿರುತ್ತೀರಿ (ಅದು ನಿಮ್ಮ ಜನರ).

ಜಾಮಿ ಅತ್ ತಿರ್ಮಿಧಿ ಸಂಪುಟ-4, ಪುಸ್ತಕ-30, ಹದಿತ್-2155 ....... ಅಲ್ಲಾಹರ ಪ್ರವಾದಿ ಹೇಳಿದ್ದನ್ನು ನಾನು ಕೇಳಿದ್ದೇನೆ "..................ಸತ್ಯವಾಗಿಯೂ ಅಲ್ಲಾಹ ಸೃಷ್ಟಿಸಿದ ಮೊದಲನೆಯದು ಪೆನ್ (ಲೇಖನಿ) ಆದರಿಂದ ಅವರು ಹೇಳಿದರು ಅಲ್ -ಖದರ್ ಅನ್ನು ಬರಿ, ಅದು ಏನು, ಅಂತ್ಯದವರೆಗೆ ಅದು ಏನಾಗುತ್ತದೆ,"

ಅಲ್ ಖದರ್ (ನಿರ್ಣಾಯಕ) ಖುರಾನ್ 97: 1. ನಾವು ಇದನ್ನು ತೀರ್ಪಿನ ರಾತ್ರಿ ಇಳಿಸಿಕೊಟ್ಟಿರುವೆವು., 2. ತೀರ್ಪಿನ ರಾತ್ರಿ ಎಂದರೇನೆಂದು ನಿಮಗೇನು ಗೊತ್ತು?, 3. ಆ ತೀರ್ಪಿನ ರಾತ್ರಿ ಸಾವಿರ ತಿಂಗಳುಗಳಿಗಿಂತ ಶ್ರೇಷ್ಠವಾಗಿದೆ., 4. ಅದರಲ್ಲಿ ಮಲಕ್‌ಗಳು ಮತ್ತು ರೂಹ್ (ಜಿಬ್ರೀಲ್) (ದೇವತೆಗಳು ಮತ್ತು ಆತ್ಮಗಳು) ತಮ್ಮ ಒಡೆಯನ ಆದೇಶದಂತೆ, ಎಲ್ಲ ಏರ್ಪಾಡುಗಳೊಂದಿಗೆ ಇಳಿದು ಬರುತ್ತಾರೆ., 5. ಶಾಂತಿಯಾಗಿರುತ್ತದೆ – ಅದು, ಬೆಳಗಿನ ಉದಯದ ತನಕ.

ಜಾಮಿ ಅತ್ ತ್ರಿಮಿಧಿ ಸಂಪುಟ-6, ಪುಸ್ತಕ-44, ಹದಿತ್-3319, "............. ಅಲ್ಲಾಹನ ಪ್ರವಾದಿ ಹೇಳಿದ್ದನ್ನು ನಾನು ಕೇಳಿದ್ದೇನೆ "ಸತ್ಯವಾಗಿ ಅಲ್ಲಾಹ ಸೃಷ್ಟಿಸಿದ ಮೊದಲನೆಯದು ಪೆನ್ (ಲೇಖನಿ) ಅವರು ಅದಕ್ಕೆ ಹೇಳಿದರು "ಬರೆ" ಆದರಿಂದ ಅದು ಶಾಶ್ವತವಾಗಿರುವುದನ್ನು ಬರೆಯಿತು"

ಅಂದರೆ ಬರೆಯಲು ಪೆನ್ ಬೇಕು ಅದನ್ನು ಸೃಷ್ಠಿಸಿದ್ದು ಅಲ್ಲಾಹ, ಅದಕ್ಕೆ ಬರೆ ಎಂದರು ಬರೆಯಿತು, ಪ್ರವಾದಿಗಳಿಗೆ ಖುರಾನ್ ಪ್ರಕಾರ ಬರೆಯುವುದಕ್ಕೆ ಬರುವುದಿಲ್ಲ, ಆದರೂ ಹದಿತ್ ಪ್ರಕಾರ ಅವರು ಅನೇಕ ಪತ್ರಗಳನ್ನು ಬರೆಯುತ್ತಾರೆ/ಬರೆಸುತ್ತಾರೆ. ಖುರಾನ್ ಅವರಿಗೆ ಗೇಬ್ರಿಯಲ್ ಹೇಳಿದ್ದು ಎಂದರೆ ಅದನ್ನು ಬರೆಸದೆ ಸುಮ್ಮನಿದ್ದರು ಅದು ಬರೀ ಮೌಖಿಕವಾಗಿಯೇ ಇತ್ತು ಎನ್ನುವುದು ನಂಬಲಾಗದು. ಹಾಗಾದರೆ ಅದನ್ನು ಬರೆದವರು ಯಾರಿರಬಹುದು ? ಅದು ಯಾಕೆ ರಾತ್ರಿಯಲ್ಲೇ ಬರೆದು ಬರೆದವನ ಗೋಪ್ಯತೆ ಕಾಪಾಡಿದ್ದು ? ಬರೆಯುವಿಕೆಯಲ್ಲಿ ಕ್ರೈಸ್ತನೊಬ್ಬನ ಪಾತ್ರ ಮತ್ತು ಖದೀಜ ಚಿಕ್ಕಪ್ಪನ ಮಗನ ಪಾತ್ರ ಇರಬಹುದೆ ? ಇದಕ್ಕೆಲ್ಲಾ ಉತ್ತರ ಕಂಡು ಹಿಡಿಯಲು ಖುರಾನ್ ಮತ್ತು ಬೈಬಲ್ ಸಾಮ್ಯತಾ ಬೋದನೆಗಳನ್ನು ಗಮನಿಸಬೇಕು.

ಖುರಾನ್ ಮತ್ತು ಬೈಬಲ್ ಒಂದೇ ರೀತಿಯ ಉಲ್ಲೇಕಗಳು

- ಆರು ದಿನದಲ್ಲಿ ಸೃಷ್ಠಿ:- ಖುರಾನ್ - 50: 38. ಆಕಾಶಗಳನ್ನು ಹಾಗೂ ಭೂಮಿಯನ್ನು ಮತ್ತು ಅವುಗಳ ನಡುವೆ ಇರುವ ಎಲ್ಲವನ್ನೂ ನಾವು ಆರು ದಿನಗಳಲ್ಲಿ ಸೃಷ್ಟಿಸಿರುವೆವು ಮತ್ತು ನಮ್ಮನ್ನು ಯಾವ ದಣಿವೂ ಬಾಧಿಸಲಿಲ್ಲ. - ಹಳೇ ಪುರಾವೆ (ಒಡಂಬಡಿಕೆ) -ಬೈಬಲ್-ಆದಿಕಾಂಡ - 1ನೇ ಅಧ್ಯಾಯದಲ್ಲಿ ದೇವರು ಆರು ದಿನದಲ್ಲಿ ಭೂಮಿ ಮತ್ತು ಸಮಸ್ತವನ್ನು ಸೃಷ್ಠಿಸಿದನು ಎಂದು 31 ಶ್ಲೋಕಗಳಲ್ಲಿ ವಿವರಣೆ ಇದೆ.
- ಮಣ್ಣಿನಿಂದ ಆದ ಮಾನವ - ಒಬ್ಬನಿಂದಲೇ ಇತರರ ಸೃಷ್ಠಿ:- ಖುರಾನ್ ಮತ್ತು ಬೈಬಲ್ ಆಡಮ್ ಈ ಜಗತ್ತಿನ ಮೊದಲ ಮನುಷ್ಯ ಎಂದು ಒಪ್ಪುತ್ತವೆ. ಒಂದೇ ಜೀವದಿಂದಲೇ ಇತರರನ್ನು ಸೃಷ್ಠಿಸಿದ್ದು ಎಂಬುದರಲ್ಲೂ ಸಾಮ್ಯತೆ ಇದೆ. (ಆದಿಕಾಂಡ 2:7 ಕರ್ತನಾದ ದೇವರು ಭೂಮಿಯ ಮಣ್ಣಿನಿಂದ ಮನುಷ್ಯನನ್ನು ರೂಪಿಸಿ ಅವನ ಮೂಗಿನಲ್ಲಿ ಜೀವಶ್ವಾಸ ವನ್ನು ಊದಿದನು; ಆಗ ಮನುಷ್ಯನು ಜೀವಾತ್ಮ ನಾದನು., ಆದಿಕಾಂಡ 2:22 ಕರ್ತನಾದ ದೇವರು ಮನುಷ್ಯನಿಂದ ತಕ್ಕೊಂಡ ಪಕ್ಕೆಯ ಎಲು ಬನ್ನು ಸ್ತ್ರೀಯಾಗಿಮಾಡಿ ಅವಳನ್ನು ಅವನ ಬಳಿಗೆ ತಂದನು. ಆದಿಕಾಂಡ 2:23 ಆಗ ಆದಾಮನು--ಇವಳು ಈಗ ನನ್ನ ಎಲುಬುಗಳ ಎಲುಬೂ ನನ್ನ ಮಾಂಸದ ಮಾಂಸವೂ ಆಗಿದ್ದಾಳೆ; ಇವಳು ನರನಿಂದ ತೆಗೆಯಲ್ಪಟ್ಟದ್ದರಿಂದ ನಾರಿಯೆಂದು ಕರೆಯಲ್ಪಡುವಳು ಅಂದನು. - ಖುರಾನ್ 4: 1. ಮಾನವರೇ, ನಿಮ್ಮನ್ನು ಒಂದೇ ಜೀವದಿಂದ ಸೃಷ್ಟಿಸಿದ ನಿಮ್ಮ ಒಡೆಯನಿಗೆ ನಿಷ್ಠರಾಗಿರಿ. ಅವನು ಅದೇ ಜೀವದಿಂದ ಅದರ ಜೊತೆಯನ್ನೂ ಸೃಷ್ಟಿಸಿದನು ಮತ್ತು ಅವರಿಬ್ಬರ ಮೂಲಕ ಅನೇಕಾರು

ಪುರುಷರನ್ನೂ ಸ್ತ್ರೀಯರನ್ನೂ (ಲೋಕದಲ್ಲಿ) ಹಬ್ಬಿದನು. ಖುರಾನ್ 3: 33. ಅಲ್ಲಾಹನು ಸಮಸ್ತ ಲೋಕದವರಲ್ಲಿ ಆದಮ್, ನೂಹ್, ಇಬ್ರಾಹೀಮ್‌ರ ಸಂತತಿ ಮತ್ತು ಇಮ್ರಾನ್‌ರ ಸಂತತಿಯನ್ನು ವಿಶೇಷವಾಗಿ ಆಯ್ದುಕೊಂಡನು., ಖುರಾನ್ 15: 26. ಖಂಡಿತವಾಗಿಯೂ ನಾವೇ ಮಾನವನನ್ನು ಕರಿ ಆವೆ ಮಣ್ಣಿನ ಒಣಗಾರೆಯಿಂದ ಸೃಷ್ಟಿಸಿರುವೆವು.

➤ ದೇವರು ಒಬ್ಬನೇ:– ಹಳೇ ಬೈಬಲ್ – ಧರ್ಮೋಪದೇಶಕಾಂಡ 6:4 ಓ ಇಸ್ರಾಯೇಲೇ, ಕೇಳು, ನಮ್ಮ ದೇವರಾದ ಕರ್ತನು ಒಬ್ಬನೇ ಕರ್ತನು. ಧರ್ಮೋಪದೇಶಕಾಂಡ 6:5 ನಿನ್ನ ದೇವರಾದ ಕರ್ತನನ್ನು ನಿನ್ನ ಪೂರ್ಣಹೃದಯದಿಂದಲೂ ಪೂರ್ಣ ಪ್ರಾಣದಿಂದಲೂ ಪೂರ್ಣಬಲದಿಂದಲೂ ಪ್ರೀತಿ ಮಾಡಬೇಕು. – ನೆಹೆಮಿಯ 9:6 ನೀನು ಒಬ್ಬನೇ ಕರ್ತನಾಗಿದ್ದೀ. ನೀನು ಆಕಾಶವನ್ನೂ ಆಕಾಶಗಳ ಆಕಾಶವನ್ನೂ ಅವು ಗಳ ಸಮಸ್ತ ಸೈನ್ಯವನ್ನೂ ಭೂಮಿಯನ್ನೂ ಅದರಲ್ಲಿರುವವುಗಳನ್ನೂ ಸಮುದ್ರಗಳನ್ನೂ ಅವುಗಳೊಳ ಗಿರುವ ಸಮಸ್ತವನ್ನೂ ಉಂಟು ಮಾಡಿದ್ದಲ್ಲದೆ ಅವು ಗಳನ್ನೆಲ್ಲಾ ಕಾಪಾಡುತ್ತೀ. ಇದಲ್ಲದೆ ಆಕಾಶಗಳ ಸೈನ್ಯವು ನಿನ್ನನ್ನು ಆರಾಧಿಸುತ್ತದೆ. – ಹೊಸ ಬೈಬಲ್ – ಮಾರ್ಕನು 12:32 ಅದಕ್ಕೆ ಆ ಶಾಸ್ತ್ರಿಯು ಆತನಿಗೆ ––ಬೋಧಕನೇ, ಒಳ್ಳೇದು. ನೀನು ಸತ್ಯವನ್ನೇ ಹೇಳಿದ್ದೀ; ಯಾಕಂದರೆ ದೇವರು ಒಬ್ಬನೇ; ಆತನ ಹೊರತು ಬೇರೊಬ್ಬನು ಇಲ್ಲವೇ ಇಲ್ಲ. ಮಾರ್ಕನು 12:33 ಆತನನ್ನು ಪೂರ್ಣ ಹೃದಯದಿಂದಲೂ ಪೂರ್ಣ ಗ್ರಹಿಕೆಯಿಂದಲೂ ಪೂರ್ಣ ಪ್ರಾಣದಿಂದಲೂ ಪೂರ್ಣ ಶಕ್ತಿಯಿಂದಲೂ ಪ್ರೀತಿಸಿ ತನ್ನ ನೆರೆಯವನನ್ನು ತನ್ನಂತೆಯೇ ಪ್ರೀತಿಸು ವದು ಸಕಲ ದಹನ ಬಲಿಗಳಿಗಿಂತಲೂ ಯಜ್ಞಗಳಿಗಿಂತ ಲೂ ಹೆಚ್ಚಿನದಾಗಿದೆ ಅಂದನು. – 1 ತಿಮೊಥೆಯನಿಗೆ 2:5 ಯಾಕಂದರೆ ದೇವರು ಒಬ್ಬನೇ; ದೇವರಿಗೂ ಮನಷ್ಯರಿಗೂ ಮಧ್ಯಸ್ಥನು ಒಬ್ಬನೇ; ಆತನು ಮನುಷ್ಯನಾಗಿರುವ ಕ್ರಿಸ್ತ ಯೇಸುವೇ; – ಖುರಾನ್ 37:4. ನಿಮ್ಮ ಆರಾಧ್ಯನು ಖಂಡಿತ ಒಬ್ಬನೇ. 37:5. ಅವನು ಆಕಾಶಗಳ, ಭೂಮಿಯ ಹಾಗೂ ಅವುಗಳ ನಡುವೆ ಇರುವ ಎಲ್ಲವುಗಳ ಒಡೆಯ ಮತ್ತು ಪೂರ್ವಗಳ ಒಡೆಯನಾಗಿದ್ದಾನೆ. ಖುರಾನ್ 21: 107. (ದೂತರೇ,) ನಾವು ನಿಮ್ಮನ್ನು ಸರ್ವಲೋಕಗಳಿಗೆ ಅನುಗ್ರಹವಾಗಿ ಕಳಿಸಿರುವೆವು. 21: 108. ಹೇಳಿರಿ; ಏಕಮಾತ್ರ ದೇವನೇ ನಿಮ್ಮ ದೇವನೆಂದು ನನ್ನ ಕಡೆಗೆ ದಿವ್ಯವಾಣಿಯನ್ನು ರವಾನಿಸಲಾಗಿದೆ. ಇನ್ನಾದರೂ ನೀವು ಶರಣಾಗುವಿರಾ?

➢ ವಿಗ್ರಹಾರಾದನೆ ವಿರುದ್ಧ ಬೆಂಕಿಯನ್ನು ಕಾರುತ್ತವೆ:– ಯಹೂದಿಗಳ ತೌರತ್ ಗ್ರಂಥದ ಹಳೇ ಒಡಂಬಡಿಕೆ ಬೈಬಲ್ ನಲ್ಲಿ ವಿಗ್ರಹಾರಾಧನೆ ಬಗ್ಗೆ ಬೆಂಕಿ ಕಾರುವುದನ್ನು ಈ ಹಿಂದೆ ವಿವರಿಸಿದ್ದೇವೆ. – ಹೊಸ ಬೈಬಲ್ ಬಗ್ಗೆಯು ಹೇಳಿದ್ದೇವೆ – ಖುರಾನ್ ತೌರತ್(ಹಳೆ ಬೈಬಲ್) ಮತ್ತು ಇಂಜಿಲ್(ಹೊಸ ಬೈಬಲ್) ಬಗ್ಗೆ ಖುರಾನ್ 3: 3. (ದೂತರೇ,) ಅವನು ನಿಮಗೆ ಈ ಗ್ರಂಥವನ್ನು ಸತ್ಯದೊಂದಿಗೆ ಇಳಿಸಿಕೊಟ್ಟಿರುವನು. ಇದು ತನ್ನ ಹಿಂದಿನವುಗಳನ್ನು (ಗತ ಕಾಲದ ದಿವ್ಯ ಗ್ರಂಥಗಳನ್ನು) ಸಮರ್ಥಿಸುತ್ತದೆ. (ಈ ಹಿಂದೆ) ತೌರಾತ್ (ಹಳೆ ಒಡಂಬಡಿಕೆ) ಮತ್ತು ಇಂಜೀಲ್‌ಗಳನ್ನು (ಗಾಸ್ಪೆಲ್–ಹೊಸಒಡಂಬಡಿಕೆ) ಇಳಿಸಿ ಕೊಟ್ಟವನೂ ಅವನೇ. ಖುರಾನ್ 9:5 (ನಾಲ್ಕು) ಪವಿತ್ರ ತಿಂಗಳುಗಳು ಮುಗಿದಾಗ, ಆ ಬಹುದೇವಾರಾಧಕರನ್ನು ಕಂಡಲ್ಲಿ ಕೊಲ್ಲಿರಿ, ......ಖುರಾನ್ 41:37 ರಾತ್ರಿ ಮತ್ತು ಹಗಲು, ಸೂರ್ಯ ಮತ್ತು ಚಂದ್ರ (ಇವೆಲ್ಲಾ) ಅವನ (ಅಲ್ಲಾಹನ) ಪುರಾವೆಗಳ ಸಾಲಿಗೆ ಸೇರಿವೆ. ನೀವು ನಿಜಕ್ಕೂ ಅವನನ್ನೇ ಪೂಜಿಸುವವರಾಗಿದ್ದರೆ, ಸೂರ್ಯನಿಗಾಗಲಿ ಚಂದ್ರನಿಗಾಗಲಿ ಸಾಷ್ಟಾಂಗವೆರಗಬೇಡಿ. ಅವುಗಳನ್ನು ಸೃಷ್ಟಿಸಿದ ಅಲ್ಲಾಹನಿಗೆ ಮಾತ್ರ ಸಾಷ್ಟಾಂಗವೆರಗಿರಿ. ಖುರಾನ್ 47 : 1 ಧಿಕ್ಕರಿಸಿದವರ (ಅಲ್ಲಾಹನ ಏಕ ದೇವತ್ವ ಮತ್ತು ಪ್ರವಾದಿಯ ಸಂದೇಶಗಳನ್ನು ಧಿಕ್ಕರಿಸಿದವರು) ಹಾಗೂ ಅಲ್ಲಾಹನ ಮಾರ್ಗದಿಂದ (ಜನರನ್ನು) ತಡೆದವರ ಕರ್ಮಗಳೆಲ್ಲಾ ವ್ಯರ್ಥವಾಗಿ ಬಿಟ್ಟವು. ನಂತರ ಖುರಾನ್ 47 : 3 ರಲ್ಲಿ ಹೇಳಿರುವಂತೆ ಧಿಕ್ಕರಿಸಿದವರನ್ನು (ಮುಸ್ಲಿಮೇತರರನ್ನು) ನೀವು (ಮುಸ್ಲಿಮರು) ಬೇಟಿಯಾದಾಗ ಅವರಲ್ಲಿ ಅನೇಕರನ್ನು ಕೊಲ್ಲುವವರೆಗೆ ಮತ್ತು ಗಾಯ ಗೊಳಿಸುವವರೆಗೆ ಕುತ್ತಿಗೆಯ ಮೇಲೆ ಹೊಡೆಯಿರಿ, ಅವರನ್ನು ಬಂದಿಸಿ,... (ಹೆಚ್ಚಿನ ವಿವರ ಮುಂದೆ ನೀಡಿದೆ)

<u>ಖುರಾನಿನಲ್ಲಿ ಬಂದಿರುವ ಬೈಬಲ್ ಬಗೆಗಿನ ಪದಗಳು:–</u> (ಇದು ಇಂಗ್ಲಿಷ್ ನಲ್ಲಿ ಅನುವಾದಿಸಿರುವವರ ಖುರಾನಿನಲ್ಲಿ ಹುಡುಕಿದ್ದು ಖುರಾನ್ ಎಕ್ಸ್ ಡಾಟ್ ಕಾಂ.) ಜೀವ್ಸ್ (ಯಹೂದಿಗಳ) ಬಗ್ಗೆ ಖುರಾನಿನಲ್ಲಿ 127 ಭಾರಿ ಉಲ್ಲೇಕವಾಗಿದೆ. 86 ಭಾರಿ ಕ್ರೈಸ್ತರ ಬಗ್ಗೆ ಉಲ್ಲೇಕವಾಗಿದೆ. 76 ಕಡೆ ಟೊರಹ್ ಎಂದು ಉಲ್ಲೇಕವಾಗಿದೆ, 44+11 ಕಡೆ ಗಾಸ್ಪೆಲ್+ಇಂಜಿಲ್ ಬಗ್ಗೆ ಉಲ್ಲೇಕವಾಗಿದೆ, 110 ಕಡೆ ಅಬ್ರಹಾಮ್ ಬಗ್ಗೆ ಉಲ್ಲೇಕವಾಗಿದೆ, 33 ಕಡೆ ಗೇಬ್ರಿಯಲ್ ಬಗ್ಗೆ ಉಲ್ಲೇಕವಾಗಿದೆ, 22 ಕಡೆ ಬೈಬಲ್ ಬಗ್ಗೆ ಉಲ್ಲೇಕವಾಗಿದೆ, 68 ಭಾರಿ ಜೀಸಸ್ ಬಗ್ಗೆ ಉಲ್ಲೇಕವಾಗಿದೆ, 242 ಭಾರಿ ಮೋಸಸ್ ಬಗ್ಗೆ ಉಲ್ಲೇಕವಾಗಿದೆ, 77 ಭಾರಿ ನೋಹ ಬಗ್ಗೆ ಉಲ್ಲೆಕವಾಗಿದೆ, 52 ಭಾರಿ ಆಡಮ್ ಬಗ್ಗೆ ಉಲ್ಲೇಕವಾಗಿದೆ, 47 ಭಾರಿ ಮೇರಿ ಬಗ್ಗೆ ಉಲ್ಲೇಕವಾಗಿದೆ, ವಿಗ್ರಹದ

ಬಗ್ಗೆ 17 ಭಾರಿ, 16 ಭಾರಿ ವಿಗ್ರಹಾರಾದಕನ ಬಗ್ಗೆ, 61 ಭಾರಿ ವಿಗ್ರಹಾರಾಧಕರ ಬಗ್ಗೆ, 257 ಭಾರಿ ಬಹುದೇವಾರಾಧಕರ ಬಗ್ಗೆ, 30 ಭಾರಿ ಪಗಾಣರ ಬಗ್ಗೆ (ಅರಬ್ ವಿಗ್ರಹಾರಾದಕರು) 56 ಭಾರಿ ಸೂರ್ಯನ ಬಗ್ಗೆ, 34 ಭಾರಿ ಚಂದ್ರನ ಬಗ್ಗೆ, 28 ಭಾರಿ ನಕ್ಷತ್ರಗಳ ಬಗ್ಗೆ, 323 ಭಾರಿ ನರಕದ ಬಗ್ಗೆ, 178 ಭಾರಿ ಸ್ವರ್ಗದ ಬಗ್ಗೆ, 126 ಭಾರಿ ಮಹಿಳೆಯರ ಬಗ್ಗೆ, ದೇವತೆ (ಎಂಜೆಲ್) ಬಗ್ಗೆ 46 ಭಾರಿ, ಅಲ್ಲಾಹ ಬಗ್ಗೆ 2808 ಭಾರಿ ಉಲ್ಲೇಕವಿದೆ. ಇಸಾಕ್ ಬಗ್ಗೆ 17 ಕಡೆ ಉಲ್ಲೇಕವಿದೆ, ಇಸ್ಮಾಯಿಲ್ ಬಗ್ಗೆ 15 ಕಡೆ ಉಲ್ಲೇಕವಿದೆ, 64+46 ಕಡೆ ಜೋಸೆಫ್+ಯೂಸುಫ್ ಬಗ್ಗೆ ಉಲ್ಲೇಕವಿದೆ, ಪ್ರವಾದಿ ಮೊಹಮ್ಮದ್ ಬಗ್ಗೆ 948 ಭಾರಿ ಉಲ್ಲೇಕವಿದೆ.

<u>ಬೈಬಲ್ ಹಳೆ ಒಡಂಬಡಿಕೆ ಮತ್ತು ಹೊಸ ಒಡಂಬಡಿಕೆ ಯಲ್ಲಿನ ಪದಗಳು:-</u> (ಇದು ಹೊಸ ಅಂತರಾಷ್ಟ್ರೀಯ ಮಾದರಿಯ ಅನುವಾದ - ಬ್ಲೂಲೆಟರ್ ಬೈಬಲ್ ಡಾಟ್ ಆರ್ಗ್ ನಲ್ಲಿ ಹುಡುಕಿದ್ದು) ವಿಗ್ರಹದ ಬಗ್ಗೆ 37 ಶ್ಲೋಕಗಳಲ್ಲಿ 38 ಭಾರಿ ಬಂದಿದೆ, ವಿಗ್ರಹಾರಾಧಕರು 5 ಕಡೆ 5 ಶ್ಲೋಕದಲ್ಲಿ ಬಂದಿದೆ, ಮೋಸಸ್ ಬಗ್ಗೆ 847 ಭಾರಿ 800 ಶ್ಲೋಕಗಳಲ್ಲಿ ಬಂದಿದೆ, ಅಬ್ರಹಾಮ್ ಬಗ್ಗೆ 233 ಭಾರಿ 215 ಶ್ಲೋಕಗಳಲ್ಲಿ ಬಂದಿದೆ, ಸೂರ್ಯನ ಬಗ್ಗೆ 148 ಭಾರಿ 141 ಶ್ಲೋಕಗಳಲ್ಲಿ ಬಂದಿದೆ, ಚಂದ್ರನ ಬಗ್ಗೆ 62 ಭಾರಿ 61 ಶ್ಲೋಕಗಳಲ್ಲಿ ಬಂದಿದೆ, ನೋಹ 55 ಭಾರಿ 51 ಶ್ಲೋಕಗಳಲ್ಲಿ ಉಲ್ಲೇಕವಾಗಿದೆ, ಆಡಮ್ ಬಗ್ಗೆ 22 ಭಾರಿ 20 ಶ್ಲೋಕಗಳಲ್ಲಿ ಉಲ್ಲೇಕವಾಗಿದೆ, ಮೇರಿ ಬಗ್ಗೆ 58 ಭಾರಿ 49 ಶ್ಲೋಕಗಳಲ್ಲಿ ಉಲ್ಲೇಕವಾಗಿದೆ, ನರಕದ ಬಗ್ಗೆ 13 ಭಾರಿ 13 ಶ್ಲೋಕಗಳಲ್ಲಿ ಉಲ್ಲೇಕವಾಗಿದೆ, ಸ್ವರ್ಗದ ಬಗ್ಗೆ 415 ಭಾರಿ 397 ಶ್ಲೋಕಗಳಲ್ಲಿ ಉಲ್ಲೇಕವಾಗಿದೆ, ಮಹಿಳೆಯ ಬಗ್ಗೆ 248 ಭಾರಿ 237 ಶ್ಲೋಕಗಳಲ್ಲಿ ಉಲ್ಲೇಕವಾಗಿದೆ, ಜೀಸಸ್ ಬಗ್ಗೆ 1301 ಭಾರಿ 1251 ಶ್ಲೋಕಗಳಲ್ಲಿ ಉಲ್ಲೇಕವಿದೆ, ದೇವರು ಎಂದು 4047 ಭಾರಿ 3528 ಶ್ಲೋಕಗಳಲ್ಲಿ ಉಲ್ಲೇಕವಾಗಿದೆ, ಇಸಾಕ್ ಬಗ್ಗೆ 133 ಭಾರಿ 124 ಶ್ಲೋಕಗಳಲ್ಲಿ ಉಲ್ಲೇಕವಿದೆ, ಇಸ್ಮಾಯಿಲ್ ಬಗ್ಗೆ 48 ಭಾರಿ 44 ಶ್ಲೋಕಗಳಲ್ಲಿ ಉಲ್ಲೇಕವಿದೆ. ಜೋಸೆಫ್ ಬಗ್ಗೆ 246 ಭಾರಿ 227 ಶ್ಲೋಕಗಳಲ್ಲಿ ಉಲ್ಲೆಕವಿದೆ,

ಯಹೂದಿಯರ ಬೈಬಲ್ ನಲ್ಲಿ ಪ್ರಾರಂಬವಾದ ಮೊದಲ ಯಹೂದಿ ಏಕದೈವೋಪಾಸನೆ (72 ಹೆಸರಿನಲ್ಲಿ) ಕೊನೆಗೆ ಕ್ರೈಸ್ತರಲ್ಲಿ ತಂದೆ, ಮಗ, ಆತ್ಮ ಎಂಬ ಮೂರು ದೇವ ಸೃಷ್ಠಿ, ಮೇರಿಯನ್ನು ದೇವರನ್ನಾಗಿಸುವ ಪ್ರಕ್ರಿಯೆ ಇವುಗಳಿಂದ ಗೊಂದಲಕ್ಕೆ ಒಳಗಾದ ಜನಾಂಗ. ಇವರನ್ನು ಗುರಿಯಾಗಿಸಿ ಬೈಬಲ್ ನಲ್ಲಿ ಬರುವ ಕತೆಗಳು, ಉಲ್ಲೇಕಗಳು, ಬೈಬಲ್ ಜನಾಂಗಗಳಾದ ಯಹೂದಿಯರಲ್ಲಾದ

ಲೋಪಗಳು, ಕ್ರೈಸ್ತರಲ್ಲಿ ಆದ ಲೋಪಗಳು, ಇವುಗಳ ಕಂಡಿಸುವಿಕೆ, ಮತ್ತೆ ಏಕದೇವೋಪಾಸನೆಗೆ ದಾರಿ ಮಾಡಿಕೊಡುವಿಕೆಯ ಹಾದಿಯಲ್ಲಿ ಹೆಜ್ಜೆ ಹಾಕಿದ ಮೊಹಮ್ಮದರು ವಿಭಿನ್ನವಾದ ರೀತಿಗಳನ್ನು ಅಳವಡಿಸಿ ಹಳೇ ವೈನನ್ನು ಹೊಸ ಬಾಟಲಿಗೆ ಹಾಕಿ ಮಾರ್ಕೆಟಿಂಗ್ ಮಾಡಿದ್ದೇ ಇಸ್ಲಾಮ್. ಆದರೆ ಅದು ಬರಬರುತ್ತ ಮತ್ತೆ ವಿಭಿನ್ನತೆಗೆ ಬಲಿಯಾಗಿ ಏಕದೇವೋಪಾಸನೆ ಇದದ್ದು ಇಂದು ಚಂದ್ರನ ಬಿಂಬದ ಆರಾದನೆ, ಘೋರಿಗಳ ಆರಾಧನೆ, ಮೌಲಿ ಮತ್ತು ಮಹಾನ್ ಪುರುಷರ ಆರಾಧನೆ, ಇತ್ತೀಚೆಗೆ ಜಯಂತಿಗಳು, ಇತ್ಯಾದಿ ಇತ್ಯಾದಿ ವಿಭಿನ್ನತೆಗಳಾಗಿ ಕೆಲವು ಮುಸ್ಲಿಮರನ್ನು ಮುಸ್ಲಿಮೇತರರು ಎಂದು ಬಹಿರಂಗ ಫತ್ವ ಹೊರಡಿಸುವ ಮಟ್ಟಕ್ಕೆ ಬಂದರೂ ಕೂಡ ಇಲ್ಲಿ ವಿಗ್ರಹಾರಾಧಕರ ಬಗ್ಗೆ ಎಲ್ಲರಲ್ಲೂ ಈಗಲೂ ಅಸಹಿಷ್ಣುತೆ ಇರುವುದು ಗಮನಿಸುವ ಅಂಶ, ಎಲ್ಲರೂ ಇಡೀ ಜಗತ್ತು ಇಸ್ಲಾಮಿಕರಣ ಆಗಬೇಕು ಎಂದು ಪ್ರತಿಪಾದಿಸುವುದು ಒಂದೇ ಅಂಶ.

**ಅಬ್ರಹಾಮ್ (ಇಬ್ರಾಹೀಮ್), ಇಶ್ಮಾಯಿಲ್ (ಇಸ್ಮಾಯಿಲ್) ಇಸಾಕ್ (ಇಶಾಕ್) ಜೇಕಬ್ (ಯಾಕೂಬ್), ಪದಬಳಕೆಯಲ್ಲಿಯೇ ಮೊಹಮ್ಮದರು ಅಥವ ಅಲ್ಲಾಹರು ಏನನ್ನೋ ಮುಚ್ಚಿಡುವ ಪ್ರಯತ್ನ ಮಾಡಿದಹಾಗಿದೆ.**

ಖುರಾನಿನಲ್ಲಿ (2:140) ಇಬ್ರಾಹೀಮ, ಇಸ್ಮಾಯೀಲ, ಇಶಾಕ, ಆಖೂಬ ಎಂದು ಅರೇಬ್ಬೀ ಬಾಷೆಯಲ್ಲಿ ಉಚ್ಚರಿಸಿದ್ದಾರೆ[22] ಇದನ್ನು ಸಾಮಾನ್ಯವಾಗಿ ಎಲ್ಲಾ ಕಡೆಯಲ್ಲೂ ಒಪ್ಪುವ ಇಂಗ್ಲಿಷ್ ಅನುವಾದಗಳು ಸುಮಾರು 35 ವಿದ್ವಾಂಸರು ಬರೆದಿರುವುದು ಲಭ್ಯವಿರುತ್ತದೆ. ಇದರಲ್ಲಿ 8 ಜನರು ಮಾತ್ರ ಖುರಾನಿನ ಉಚ್ಚಾರಿತ ಪದಗಳನ್ನು ಉಪಯೋಗಿಸಿ ಅನುವಾದಿಸಿದ್ದಾರೆ. ಬಾಕಿ 27 ಜನರು ಅಬ್ರಹಾಮ್, ಇಶ್ಮಾಯಿಲ್, ಇಸಾಕ್, ಜೇಕಬ್ ಎಂಬುದಾಗೇ ಅನುವಾದಿಸಿದ್ದಾರೆ. ಆ 8 ಜನರ ಪೈಕಿ ಒಬ್ಬರು ಸೈಯದ್ ವಿಕಾರ್ ಅಹಮದ್ ಎನ್ನುವವರು ಎರಡೂ ಹೆಸರು ಒಂದೇ ಸೂಚಿಸುತ್ತೆ ಎಂದು ಇಬ್ರಾಹಿಮ್ ಪಕ್ಕದಲ್ಲಿ ಬ್ರಾಕೆಟ್ಟಿನಲ್ಲಿ ಅಬ್ರಹಾಮ್ ಎಂದು ಅದೇ ರೀತಿಯಲ್ಲಿ ಇತರೆ ಹೆಸರು ಅನುವಾದಿಸಿದ್ದಾರೆ. ಆದರೆ ಈ ಖುರಾನ್ ಶ್ಲೋಕ ಏನು ಹೇಳುತ್ತದೆ ಎಂದು ನೋಡಿ 2: 140. "ಇಬ್ರಾಹೀಮ್, ಇಸ್ಮಾಯಿಲ್, ಇಸ್ಹಾಕ್, ಯಅ್ಕೂಬ್ ಮತ್ತು ಅವರ ಸಂತತಿಗಳೆಲ್ಲಾ ಯಹೂದಿಗಳು ಅಥವಾ ಕ್ರೈಸ್ತರಾಗಿದ್ದರೆಂದು ನೀವು ಹೇಳುತ್ತೀರಾ? ಹೇಳಿರಿ; ಹೆಚ್ಚು ತಿಳುವಳಿಕೆ ಇರುವುದು ನಿಮಗೋ

[22] https://www.islamawakened.com/quran/2/140/default.htm

ಅಲ್ಲಾಹನಿಗೋ? ತನ್ನ ಬಳಿ ಇರುವ, ಅಲ್ಲಾಹನ ಕಡೆಯಿಂದ ಬಂದ ಪುರಾವೆಯನ್ನು ಬಚ್ಚಿಡುವವನಿಗಿಂತ ದೊಡ್ಡ ಅಕ್ರಮಿ ಯಾರಿದ್ದಾನೆ? ನಿಮ್ಮ ಕೃತ್ಯಗಳ ಕುರಿತು ಅಲ್ಲಾಹನು ಅಜ್ಞನಾಗಿಲ್ಲ. ಕರ್ನಾಟಕದ ಶಾಂತಿ ಪ್ರಕಾಶನದವರು ಕನ್ನಡದಲ್ಲಿ ಪ್ರಕಟಿಸಿರುವ ಪಾಕಿಸ್ತಾನದ ಮೌದುದಿ ರವರ ಅನುವಾದಿತ ಖುರಾನ್ ಕನ್ನಡ ಗ್ರಂಥದಲ್ಲಿ ಇಬ್ರಾಹೀಮ, ಇಸ್ಮಾಯೀಲ, ಇಶಾಕ, ಆಖೂಬ ಎಂದು ಬರೆಯುತ್ತಾರೆ. ಆದರೆ ಮೂಲ ಇಂಗ್ಲಿಷ್ ಗ್ರಂಥದಲ್ಲಿ ಅಬ್ರಹಾಮ್, ಇಶ್ಮಾಯಿಲ್, ಇಸಾಕ್, ಜೇಕಬ್ ಎಂಬುದಾಗೇ ಅನುವಾದಿಸಿದ್ದಾರೆ[23] ಇದೇಕೆ ಈ ಅನುವಾದದಲ್ಲಿ ಮುಸ್ಲಿಮರ ಗೊಂದಲ ಗೊತ್ತಾಗಿರಬೇಕಲ್ಲ. ಅಲ್ಲಿ ಖುರಾನ್ ಇವರ ಹೆಸರನ್ನು ಇಬ್ರಾಹೀಮ, ಇಸ್ಮಾಯೀಲ, ಇಶಾಕ, ಆಖೂಬ ಎಂದು ಉಲ್ಲೇಕಿಸಿ ಅದು ಯಹೂದಿಗಳು ಅಥವ ಕ್ರೈಸ್ತರು ಅಲ್ಲ ಅವರೆಲ್ಲಾ ಮುಸ್ಲಿಮರು ಎನ್ನುತ್ತದೆ. ಈ ಬಗ್ಗೆ ಖುರಾನ್ ಬರೆಯುವಾಗಲೇ ಈ ಬಗ್ಗೆ ಜನರೆಲ್ಲಾ ಅವರು ಯಹೂದಿಗಳು ಅಥವ ಕ್ರೈಸ್ತರು ಎಂದು ಆಡಿಕೊಳ್ಳುತ್ತಿದ್ದ ಬಗ್ಗೆ ಉಲ್ಲೇಕವಿದೆ. ಹಾಗಾದರೆ ಅನುವಾದಕರು ಖುರಾನ್ ಅರ್ಥವನ್ನು ತಿಳಿಯದೇ 28 ಜನ ಅನುವಾದಿಸಿಬಿಟ್ಟರೆ. ಅಲ್ಲಾಹನ ವಾದವನ್ನು ಅನುವಾದಕರು ಸೋಲಿಸಿ ಇಲ್ಲ ಇವರು ಇಬ್ರಾಹೀಮ, ಇಸ್ಮಾಯೀಲ, ಇಶಾಕ, ಆಖೂಬ ಅಲ್ಲ, ಅಬ್ರಹಾಮ್, ಇಶ್ಮಾಯಿಲ್, ಇಸಾಕ್, ಜೇಕಬ್ ಎಂದು ಅಲ್ಲಾಹನ ವಿರುದ್ದವಾಗಿಯೇ ವಾದಿಸಿಬಿಟ್ಟರೆ. ಈಗೀಗ ಇಂತ ತಪ್ಪು ಕನ್ನಡದವರಿಗೆ ಗೊತ್ತಾಗಿ ಮೌದುದಿ ಅಪ್ಪಣೆ ಇಲ್ಲದೆ ಅವರ ಅನುವಾದ ಸರಿಯಿಲ್ಲ ಅಲ್ಲಾಹರ ಉಚ್ಚಾರದ ಇವರೇ ಸರಿ ಎಂದು ಉಚ್ಚರಿಸಿದರೆ. ಇಲ್ಲೇ ಅಡಗಿರುವುದು ಖುರಾನ್ ಕೃತಿಚೌರ್ಯದ ಒಳಗುಟ್ಟು.

**ಯಹೂದಿಗಳ ಬೈಬಲ್ ಹಳೇ ಒಡಂಬಡಿಕೆಯಲ್ಲಿ ಅಬ್ರಹಾಮ್, ಇಶ್ಮಾಯಿಲ್, ಇಸಾಕ್, ಜೇಕಬ್ ಯಾರು ನೋಡಿ:-**

ಆದಿಕಾಂಡ 17:1 ಅಬ್ರಾಮನು ತೊಂಭತ್ತೊಂಭತ್ತು ವರುಷದವನಾದಾಗ ಯಹೋವನು (ಯಹೂದಿ ದೇವರು) ಅಬ್ರಾಮನಿಗೆ ಕಾಣಿಸಿಕೊಂಡು--ನಾನೇ ಸರ್ವಶಕ್ತನಾದ ದೇವರು; ನನ್ನ ಸನ್ನಿಧಿಯಲ್ಲಿ ನಡೆದು ನೀನು ಸಂಪೂರ್ಣನಾಗಿರು. ಆದಿಕಾಂಡ 17:9 ಇದಲ್ಲದೆ ದೇವರು ಅಬ್ರಹಾಮನಿಗೆ--ನೀನು ನಿನ್ನ ತರುವಾಯ ಬರುವ ಸಂತಾನಗಳೂ ತಲತಲಾಂತರ ಗಳಲ್ಲಿ ನನ್ನ ಒಡಂಬಡಿಕೆಯನ್ನು ಕೈಕೊಳ್ಳಬೇಕು. ಆದಿಕಾಂಡ 17:23 ಅಬ್ರಹಾಮನು ತನ್ನ ಮಗನಾದ ಇಷ್ಮಾಯೇಲ........... ಆದಿಕಾಂಡ 21:4 ದೇವರು ತನಗೆ ಅಪ್ಪಣೆಕೊಟ್ಟ ಹಾಗೆ

[23] http://www.englishtafsir.com/Quran/2/index.html

ಅಬ್ರಹಾಮನು ತನ್ನ ಮಗನಾದ ಇಸಾಕನಿಗೆ..........ಆದಿಕಾಂಡ 25:26 ........ಅವನಿಗೆ ಜೇಕೊಬ್ ಎಂದು ಹೆಸರಿಟ್ಟರು. ಆಕೆಯು ಇವರನ್ನು ಹೆತ್ತಾಗ ಇಸಾಕನು ಅರುವತ್ತು ವರುಷದವನಾಗಿದ್ದನು. ಅಲ್ಲಿಗೆ ಜೇಕೊಬ್ ಬಿನ್ ಇಸಾಕ್, ಇಸಾಕ್ ಬಿನ್ ಅಬ್ರಹಾಮ್, ಇಷ್ಮಾಯೀಲ್ ಬಿನ್ ಅಬ್ರಹಾಮ್ ಇವರು ಯಹೂದಿಗಳ ಗ್ರಂಥದಲ್ಲಿ ಬರುವ ಯಹೂದಿ ದೇವರ ಒಡಂಬಡಿಕೆಯನ್ನು ಅನುಸರಿಸಿದವರು. ಖುರಾನಿನಲ್ಲಿ 110 ಕಡೆ ಅಬ್ರಹಾಮ್ ಬಗ್ಗೆ ಉಲ್ಲೇಕವಾಗಿದೆ, ಇಸಾಕ್ ಬಗ್ಗೆ 17 ಕಡೆ ಉಲ್ಲೇಕವಿದೆ, ಇಸ್ಮಾಯಿಲ್ ಬಗ್ಗೆ 15 ಕಡೆ ಉಲ್ಲೇಕವಿದೆ, 64+46 ಕಡೆ ಜೋಸೆಫ್+ಯೂಸುಫ್ ಬಗ್ಗೆ ಉಲ್ಲೇಕವಿದೆ, ಆದರೂ ಖುರಾನ್ ಪ್ರಕಾರ ಇವರು ಯಹೂದಿಗಳು ಕ್ರೈಸ್ತರು ಅಲ್ಲ. ಇವರ ಬಗ್ಗೆ ಹೇಳಿರುವ ಖುರಾನಿನ ಚರಿತ್ರೆಗೂ ಬೈಬಲಿನ ಚರಿತ್ರೆಗೂ ಸಾಮ್ಯತೆ ಇದೆ ಆದರೂ ಇವರು ಯಹೂದಿಗಳು / ಕ್ರೈಸ್ತರು ಅಲ್ಲ.

ಶಾಹಿ ಬುಕಾರಿ ಸಂಪುಟ-4, ಪುಸ್ತಕ-55, ಹದಿತ್-596 ರಲ್ಲಿ ಇಬ್ನ್ ಉಮರ್ ವಿವರಿಸಿದಂತೆ ಪ್ರವಾದಿ ಹೇಳಿದರು " ಆ ಮಾನ್ಯನು ಮಾನ್ಯನ ಮಗನಾಗಿದ್ದಾನೆ, ಅವನು ಮಾನ್ಯನ ಮಗನು, ಅದೇನೆಂದರೆ ಜೋಸೆಫ್ ಜೇಕೋಬನ ಮಗನು, ಇಸಾಕನ ಮಗನು, ಅಬ್ರಹಾಮನ ಮಗನು" ಅಲ್ಲಿಗೆ ಪ್ರವಾದಿಯೂ ಈ ಮಾತನ್ನು ಒಪ್ಪಿದಾಗ ಅಲ್ಲಾಹರ ಖುರಾನ್ ಯಾಕೆ ಸುಳ್ಳು ಹೇಳುತ್ತಿದೆ. ಇಲ್ಲಿ ಪ್ರವಾದಿ ಸತ್ಯವಂತರೋ, ಅಲ್ಲಾಹರು ಸತ್ಯವಂತರೋ, ವಿಭಿನ್ನ ನಿಲುವಿನ ಅನುವಾದಕರು ಸತ್ಯವಂತರೊ, ಅಥವ ಬೈಬಲ್ ಉಲ್ಲೇಕಗಳು ಸುಳ್ಳೇ, ಎಲ್ಲಕ್ಕೂ ಮುಸ್ಲಿಮರೇ ತರ್ಕ ನಡೆಸಿ ಉತ್ತರ ಕೊಡಬೇಕಾಗುತ್ತೆ.

ಅಬ್ರಹಾಮ್ ತಮ್ಮ ಮಗನನ್ನು ಬಲಿ ಕೊಡಲು ಹೋಗುವ ಕತೆ ಬೈಬಲ್ ಮತ್ತು ಖುರಾನ್ ಎರಡರಲ್ಲೂ ಇದೆ ಒಂದೇ ರೀತಿ ಆದರೆ ಖುರಾನಿನಲ್ಲಿ ಸಂಕ್ಷಿಪ್ತವಾಗಿ ಕೊನೆಗಾಣಿಸಿದೆ. - ಮುಸ್ಲಿಮರು ಈ ದಿನವನ್ನು ಈದ್ ಉಲ್ ಆದಾ (ಬಕ್ರೀದ್) ಎಂದು ಈಗಲೂ ಆಚರಿಸುತ್ತಾರೆ- ಆದರೆ ಯಹೂದಿಯರು ಮೊದಲಿಗೆ ಖುರಬಾನ್ ಎಂದು ತಮ್ಮ ದೇವಾಲಯದಲ್ಲಿ ಪ್ರಾಣಿ ಬಲಿ ಮುಖಾಂತರ ಆಚರಣೆ ಮಾಡುತ್ತಿದ್ದವರು ಕ್ರಮೇಣ ದೇವಾಲಯಗಳು ನಾಷವಾದಾಗ ಅದನ್ನು ನಿಲ್ಲಿಸಿದರು ಬದಲಿಗೆ ದಾನ ಎಂದು ಸಹಾಯ ಮಾಡುವ ಸಂಸ್ಕಾರವನ್ನು ಬೆಳಸಿಕೊಂಡರು,

ಬೈಬಲಿನಲ್ಲಿ ಇರುವ ಕಥೆ

ಆದಿಕಾಂಡ 22:1 ಇವುಗಳಾದ ಮೇಲೆ ದೇವರು ಅಬ್ರಹಾಮನನ್ನು ಶೋಧಿಸುವದಕ್ಕಾಗಿ ಆತನು ಅವನಿಗೆ--ಅಬ್ರಹಾಮನೇ ಅಂದನು. ಅದಕ್ಕವನು --ಇಗೋ, ಇಲ್ಲಿದ್ದೇನೆ ಅಂದನು.

ಆದಿಕಾಂಡ 22:2 ಆಗ ಆತನು --ನೀನು ಪ್ರೀತಿಮಾಡುವ ನಿನ್ನ ಒಬ್ಬನೇ ಮಗನಾದ ಇಸಾಕನನ್ನು ಈಗ ತೆಗೆದುಕೊಂಡು ಮೋರೀಯ ದೇಶಕ್ಕೆ ಹೋಗಿ ಅಲ್ಲಿ ನಾನು ನಿನಗೆ ಹೇಳುವ ಒಂದು ಬೆಟ್ಟದ ಮೇಲೆ ಅವನನ್ನು ದಹನಬಲಿಯಾಗಿ ಅರ್ಪಿಸು ಅಂದನು.

ಆದಿಕಾಂಡ 22:9 ದೇವರು ಹೇಳಿದ ಸ್ಥಳಕ್ಕೆ ಅವರು ಬಂದಾಗ ಅಬ್ರಹಾಮನು ಅಲ್ಲಿ ಬಲಿಪೀಠವನ್ನು ಕಟ್ಟಿ ಕಟ್ಟಿಗೆಗಳನ್ನು ಅದರ ಮೇಲೆ ಕ್ರಮವಾಗಿ ಜೋಡಿಸಿ ತನ್ನ ಮಗನಾದ ಇಸಾಕನನ್ನು ಕಟ್ಟಿ ಬಲಿಪೀಠದ ಮೇಲೆ ಇದ್ದ ಕಟ್ಟಿಗೆಗಳ ಮೇಲೆ ಇಟ್ಟನು.

ಆದಿಕಾಂಡ 22:10 ಅಬ್ರಹಾಮನು ಕೈಚಾಚಿ ತನ್ನ ಮಗನನ್ನು ಕೊಲ್ಲುವದಕ್ಕೆ ಕತ್ತಿ ತೆಗೆದುಕೊಂಡನು.

ಆದಿಕಾಂಡ 22:11 ಆಗ ಕರ್ತನ ದೂತನು ಆಕಾಶದೊಳಗಿಂದ ಅವನನ್ನು ಕರೆದು--ಅಬ್ರಹಾಮನೇ, ಅಬ್ರಹಾಮನೇ ಅಂದಾಗ ಅವನು--ಇಲ್ಲಿ ಇದ್ದೇನೆ ಅಂದನು.

ಆದಿಕಾಂಡ 22:12 ಆಗ ಅವನು --ಹುಡಗನ ಮೇಲೆ ಕೈ ಹಾಕಬೇಡ; ಅವನಿಗೆ ಏನೂ ಮಾಡಬೇಡ. ನೀನು ದೇವರಿಗೆ ಭಯ ಪಡುತ್ತೀಯೆಂದು ಈಗ ನಾನು ತಿಳಿದಿದ್ದೇನೆ. ನಿನ್ನ ಒಬ್ಬನೇ ಮಗನನ್ನು ನನಗೆ ಅರ್ಪಿಸುವದಕ್ಕೆ ಹಿಂತೆಗೆಯಲಿಲ್ಲ ಅಂದನು.

ಆದಿಕಾಂಡ 22:13 ಆಗ ಅಬ್ರಹಾಮನು ತನ್ನ ಕಣ್ಣುಗಳನ್ನೆತ್ತಿ ನೋಡಿದನು; ಇಗೋ, ಅವನ ಹಿಂದೆ ಒಂದು ಟಗರು ಕೊಂಬುಗಳಿಂದ ಪೊದೆಯಲ್ಲಿ ಸಿಕ್ಕಿಕೊಂಡಿತ್ತು. ಅಬ್ರಹಾಮನು ಹೋಗಿ ಆ ಟಗರನ್ನು ತೆಗೆದುಕೊಂಡು ಅದನ್ನು ತನ್ನ ಮಗನಿಗೆ ಬದಲಾಗಿ ದಹನಬಲಿಯಾಗಿ ಅರ್ಪಿಸಿದನು.

ಖುರಾನಿನ ಅಧ್ಯಾಯ 37 ರಲ್ಲಿ ಇರುವ ಕಥೆ

101. ಕೊನೆಗೆ ನಾವು ಅವರಿಗೆ ಒಬ್ಬ ವಿವೇಕವಂತ ಪುತ್ರನ (ಇಸ್ಮಾಈಲರ) ಶುಭವಾರ್ತೆ ನೀಡಿದೆವು.

102. ಅವರು (ಇಸ್ಮಾಈಲರು) ಅವರ ಜೊತೆ ಓಡಾಡಬಲ್ಲವರಾದಾಗ ಅವರು ಹೇಳಿದರು; "ನಾನು ನಿನ್ನ ಕೊರಳು ಕೊಯ್ಯುತ್ತಿರುವುದಾಗಿ ಸ್ವಪ್ನದಲ್ಲಿ ಕಂಡಿದ್ದೇನೆ. ಈ ಕುರಿತು ನಿನ್ನ ಅನಿಸಿಕೆ ಏನು?" ಅವರು (ಇಸ್ಮಾಈಲ್) ಹೇಳಿದರು ; "ಅಪ್ಪಾ, ನಿಮಗೆ

ಆದೇಶಿಸಲಾಗಿರುವುದನ್ನು ನೀವು ಮಾಡಿಬಿಡಿ. ಅಲ್ಲಾಹನಿಚ್ಛಿಸಿದರೆ, ನೀವು ನನ್ನನ್ನು ಸಹನಶೀಲನಾಗಿ ಕಾಣುವಿರಿ".

103. ಹೀಗೆ ಅವರಿಬ್ಬರೂ ವಿಧೇಯತೆ ತೋರಿದರು ಮತ್ತು ಅವರು (ಇಬ್ರಾಹೀಮರು) ಅವರನ್ನು (ಪುತ್ರನನ್ನು), ಮುಖ ಕೆಳಗಾಗಿಸಿ ಮಲಗಿಸಿದರು.

104. ಆಗ ನಾವು ಅವರನ್ನು ಕರೆದೆವು ; "ಇಬ್ರಾಹೀಮರೇ,"

105. "ನೀವು ಸ್ವಪ್ನವನ್ನು ಸಾಕಾರಗೊಳಿಸಿದಿರಿ". ನಾವು ಸಜ್ಜನರನ್ನು ಖಂಡಿತ ಇದೇ ರೀತಿ ಪುರಸ್ಕರಿಸುತ್ತೇವೆ.

106. ಅದು ಖಂಡಿತ ಒಂದು ಸ್ಪಷ್ಟ ಪರೀಕ್ಷೆಯಾಗಿತ್ತು.

107. ನಾವು ಅವರಿಗೆ (ಬಲಿದಾನಕ್ಕಾಗಿ) ಒಂದು ಮಹಾ ಬಲಿಪಶುವನ್ನು ನೀಡಿದೆವು.

ಅಲ್ಲಿಗೆ ಈ ಎರಡೂ ಕತೆಗಳು ಒಂದೇ ಆಗಿರುವಾಗ್ಗೆ ಅದು ಚರಿತ್ರೆಯಲ್ಲಿ ಎರಡೂ ಒಂದೇ ರೀತಿಯಲ್ಲಿ ಎರಡು ಕಾಲಘಟ್ಟದಲ್ಲಿ ನಡೆದಿರಲು ಸಾಧ್ಯವಿಲ್ಲ. ಈ ಕತೆಯಿಂದ ಪ್ರಾರಂಬವಾದ ಈದ್ ಉಲ್ ದುವಾ / ಖುರ್ಬಾನ್ – ಪ್ರಾರಂಬಿಸಿದವರು ಬದಲಾದರು ಅನುಕರಿಸಿದವರು ಜೀವಂತ ಇಟ್ಟರು, ಇದು ಇಂದು ಯಾವ ಮಟ್ಟದಲ್ಲಿ ಆಚರಣೆ ಆಗುತ್ತಿದೆ ಎಂದರೆ, ಆ ಹಬ್ಬದ ದಿನದಂದು ಕೆಲವು ಹಿಂದು ಪ್ರದೇಶದಲ್ಲಿ ಬೇಕೆಂದೇ ಹಿಂದುಗಳನ್ನ ನೋಯಿಸಲು ಹಸುಗಳ ಮಾರಣ ಹೋಮ ನಡೆಯುತ್ತಿದೆ. ಡಾ ಹಿಲಲಿ ಮತ್ತು ಡಾ ಖಾನ್ ರವರು ಅನುವಾದಿಸಿರುವ ಖುರಾನ್ ಪುಸ್ತಕದಲ್ಲಿ "ಗಂಡು ಕುರಿ" ಎಂದು ಉಲ್ಲೇಕಿಸುತ್ತಾರೆ. ಕುರಿಯನ್ನು ಉರ್ದು ಬಾಷೆಯಲ್ಲಿ ಬಖರಿ ಅಥವ ಬಖರ ಅಂತಾರೆ, ಅರೆಬ್ಬಿಯಾದಲ್ಲಿ ಅಲ್ ಬಖರಾಹ್ ಅಂದರೆ ಹಸು ಎಂದು. ಮೌದುದಿ ಕೂಡ ಬಲಿಯಾಗಿ ಗಂಡು ಟಗರು ಎಂದು ಉಲ್ಲೇಕಿಸುತ್ತಾರೆ. ಆದರೂ ಇಂತಹ ಇತರ ಧರ್ಮದ ಮೇಲಿನ ದ್ವೇಶಕ್ಕೇ ಬೇಕಾದ ಹಾಗೆ ಸ್ವೇಚ್ಚೆಯಲ್ಲಿ ನಿರತರಾಗುವುದು ಕಾಣುತ್ತೇವೆ. [24], ತ್ಯಾಗದ ಸಂಕೇತ ಹೋಗಿ ಇಂದು ರಕ್ತದ ಕೋಡಿ ಹರಿಸುವಿಕೆ ಅದರಲ್ಲೂ ಇತರೆ ಧರ್ಮದವರ ಪೂಜ್ಯ ಪ್ರಾಣಿಯ ರಕ್ತ ಹರಿಸುವಿಕೆಯಿಂದ ಮನೋ ವಿಕೃತಿ ಮೆರೆಯುವ ಮಟ್ಟಿಗೆ ಜನರನ್ನು ಬೆಳಸುತ್ತಿದ್ದಾರೆಂದರೆ, ಅವರು ಯಾಕಾಗಿ ಇದನ್ನು ಪ್ರಾರಂಬಿಸಿದರು, ಅದನ್ನು ಪ್ರಾರಂಬಿಸಿದವರೇ ಇಂದು ಏಕೆ ಸುಮ್ಮನಾಗಿ ಬಿಟ್ಟಿದ್ದಾರೆ ಎಂಬ ಚರಿತ್ರೆ ತಿಳಿಯದೆ ಅಟ್ಟಹಾಸ ಮೆರೆಯುತ್ತಿರುವಂತೆ ಕಾಣುತ್ತಿದೆ ಇವರ ನಡವಳಿಕೆಗಳು.

---

[24] https://www.thesun.co.uk/news/7074173/eid-al-adha-2018-animal-sacrifice-cows-beheaded/

ಸುನ್ನತ್ - ಸರ್ಕಮ್ಸಿಷನ್ - ಶಿಶ್ನದ ಮುಂದಗಲು ಕತ್ತರಿಸುವ ಪ್ರಕ್ರಿಯೆ ಪ್ರಾರಂಬವಾದ - ಅನುಕರಿಸಿದ ಕಥೆ:-

ಬೈಬಲ್ ನಲ್ಲಿನ ಸುನ್ನತ್ ಬಗ್ಗೆ ಉಲ್ಲೇಕಗಳು (ಯಹೂದಿಯರಿಗೆ ಸಂಬಂದಿಸಿದ್ದು)

ಆದಿಕಾಂಡ 17:10 (ಅಬ್ರಹಾಮನಿಗೆ ದೇವರು ಹೇಳಿದ್ದು) ನನಗೂ ನಿನಗೂ ನಿನ್ನ ತರುವಾಯ ನಿನ್ನ ಸಂತಾನಕ್ಕೂ ಮಧ್ಯದಲ್ಲಿ ನೀವು ಕೈಕೊಳ್ಳತಕ್ಕ ನನ್ನ ಒಡಂಬಡಿಕೆ ಏನಂದರೆ--ನಿಮ್ಮಲ್ಲಿರುವ ಗಂಡಸರೆಲ್ಲರಿಗೆ ಸುನ್ನತಿಯಾಗಬೇಕು.

ಆದಿಕಾಂಡ 17:11 ನಿಮ್ಮ ಮುಂದೊಗಲಿನ ಮಾಂಸವನ್ನು ಸುನ್ನತಿಮಾಡಿಸಬೇಕು; ಅದು ನನಗೂ ನಿಮಗೂ ಮಧ್ಯೆ ಇರುವ ಒಡಂಬಡಿಕೆಗೆ ಗುರುತಾಗಿ ರುವದು.

ಆದಿಕಾಂಡ 17:12 ನಿಮ್ಮ ವಂಶಾವಳಿಗಳಲ್ಲಿ ಪ್ರತಿಯೊಂದು ಗಂಡು ಮಗುವಿಗೆ ಎಂಟು ದಿನಗಳಾದ ಮೇಲೆ ಸುನ್ನತಿಮಾಡಿಸಬೇಕು; ಮನೆಯಲ್ಲಿ ಹುಟ್ಟಿದವನಾಗಲಿ ನಿನ್ನ ಸಂತತಿಯಲ್ಲದೆ ಪರರ ಮಕ್ಕಳನ್ನು ಹಣಕೊಟ್ಟು ಕೊಂಡುಕೊಳ್ಳಲ್ಪಟ್ಟವರಾಗಲಿ.

ಆದಿಕಾಂಡ 17:13 ನಿನ್ನ ಮನೆಯಲ್ಲಿ ಹುಟ್ಟಿದವನಿಗೂ ನಿನ್ನ ಹಣದಿಂದ ಕೊಂಡುಕೊಂಡ ವನಿಗೂ ಸುನ್ನತಿಮಾಡಿಸತಕ್ಕದ್ದು. ಹೀಗೆ ನನ್ನ ಒಡಂಬಡಿಕೆಯು ನಿಮ್ಮ ಶರೀರದಲ್ಲಿ ನಿತ್ಯವಾದ ಒಡಂಬಡಿಕೆಯಾಗಿರುವದು.

ಆದಿಕಾಂಡ 17:14 ಸುನ್ನತಿಯಾಗದ ಗಂಡಸಿಗೆ ನನ್ನ ಒಡಂಬಡಿಕೆಯನ್ನು ಮೀರಿದ ಕಾರಣ ಅವನು ಜನರೊಳಗಿಂದ ತೆಗೆದುಹಾಕಲ್ಪಡಬೇಕು ಅಂದನು.

ಆದಿಕಾಂಡ 17:23 ಅಬ್ರಹಾಮನು ತನ್ನ ಮಗನಾದ ಇಷ್ಮಾಯೇಲ ನನ್ನೂ ತನ್ನ ಮನೆಯಲ್ಲಿ ಹುಟ್ಟಿದವರೆಲ್ಲರನ್ನೂ ತಾನು ಹಣಕ್ಕೆ ಕೊಂಡುಕೊಂಡವರೆಲ್ಲರನ್ನೂ ಅಬ್ರಹಾಮನ ಮನೆಯಲ್ಲಿದ್ದ ಗಂಡಸರೆಲ್ಲರನ್ನೂ ದೇವರು ತನಗೆ ಹೇಳಿದ ಹಾಗೆ ಆ ದಿನವೇ ಸುನ್ನತಿಮಾಡಿಸುವದಕ್ಕೆ ತಕ್ಕೊಂಡುಹೋದನು.

ಆದಿಕಾಂಡ 17:24 ಅಬ್ರಹಾಮನಿಗೆ ಸುನ್ನತಿಯಾದಾಗ ಅವನು ತೊಂಭತ್ತೊಂಭತ್ತು ವರುಷದವನಾಗಿದ್ದನು.

ಆದಿಕಾಂಡ 17:25 ಅವನ ಮಗನಾದ ಇಷ್ಮಾಯೇಲನಿಗೆ ಸುನ್ನತಿಯಾದಾಗ ಅವನು ಹದಿಮೂರು ವರುಷದವನಾಗಿದ್ದನು.

ಆದಿಕಾಂಡ 17:26 ಅಬ್ರಹಾಮನೂ ಅವನ ಮಗನಾದ ಇಷ್ಮಾಯೇಲನೂ ಅದೇ ದಿನದಲ್ಲಿ ಸುನ್ನತಿಮಾಡಿಸಿಕೊಂಡರು.

ಆದಿಕಾಂಡ 17:27 ಅವನ ಮನೆಯ ಗಂಡಸರೆಲ್ಲರಿಗೂ ಮನೆಯಲ್ಲಿ ಹುಟ್ಟಿದ ವರಿಗೂ ಪರರಿಂದ ಹಣಕೊಟ್ಟು ಕೊಂಡುಕೊಂಡ ವರಿಗೂ ಅವನ ಸಂಗಡವೇ ಸುನ್ನತಿ ಆಯಿತು.

ಆದಿಕಾಂಡ 21:4 ದೇವರು ತನಗೆ ಅಪ್ಪಣೆಕೊಟ್ಟ ಹಾಗೆ ಅಬ್ರಹಾಮನು ತನ್ನ ಮಗನಾದ ಇಸಾಕನಿಗೆ ಎಂಟನೆಯ ದಿನದಲ್ಲಿ ಸುನ್ನತಿಮಾಡಿದನು.

ಆದಿಕಾಂಡ 34:14 ಯಾಕೋಬನ ಮಕ್ಕಳು ಅವರಿಗೆ--ನಾವು ಈ ಕಾರ್ಯವನ್ನು ಮಾಡಲಾರೆವು, ಸುನ್ನತಿಯಿಲ್ಲದ ಮನುಷ್ಯನಿಗೆ ನಮ್ಮ ತಂಗಿಯನ್ನು ಕೊಡಲಾರೆವು, ಅದು ನಮಗೆ ಅವಮಾನ.

ಆದಿಕಾಂಡ 34:15 ಆದರೆ ನೀವು ನಮ್ಮ ಹಾಗಿದ್ದು ನಿಮ್ಮಲ್ಲಿರುವ ಗಂಡಸರೆಲ್ಲಾ ಸುನ್ನತಿಮಾಡಿಸಿಕೊಂಡರೆ ಮಾತ್ರ ನಾವು ಒಪ್ಪುವೆವು.

ಆದಿಕಾಂಡ 34:17 ಆದರೆ ನೀವು ನಮ್ಮ ಮಾತನ್ನು ಕೇಳ ಸುನ್ನತಿಮಾಡಿಸಿಕೊಳ್ಳದೆ ಹೋದರೆ ನಮ್ಮ ಮಗಳನ್ನು ನಾವು ತೆಗೆದುಕೊಂಡು ಹೋಗಿ ಬಿಡುತ್ತೇವೆ ಎಂದು ಹೇಳಿದರು.

ಆದಿಕಾಂಡ 34:22 ಅವರು ಸುನ್ನತಿಮಾಡಿಸಿಕೊಂಡ ಪ್ರಕಾರ ನಮ್ಮಲ್ಲಿ ಗಂಡಸರೆಲ್ಲಾ ಸುನ್ನತಿಮಾಡಿಸಿ ಕೊಂಡರೆ ಮಾತ್ರ ಆ ಮನುಷ್ಯರು ನಮ್ಮ ಸಂಗಡ ವಾಸಮಾಡುವದಕ್ಕೂ ಒಂದೇ ಜನಾಂಗವಾಗುವದಕ್ಕೂ ಒಪ್ಪುವರು.

ಅಪೊಸ್ತಲರ ಕೃತ್ಯಗ 7:8 ಇದಲ್ಲದೆ ದೇವರು ಸುನ್ನತಿ ಎಂಬ ಒಡಂಬಡಿಕೆಯನ್ನು ಅವನಿಗೆ ಕೊಟ್ಟನು. ಹೀಗೆ ಅಬ್ರಹಾಮನಿಂದ ಇಸಾಕನು ಹುಟ್ಟಿದಾಗ ಎಂಟನೆಯ ದಿನದಲ್ಲಿ ಅವನಿಗೆ ಸುನ್ನತಿ ಮಾಡಿದನು. ಇಸಾಕನಿಂದ ಯಾಕೋಬನು ಹುಟ್ಟಿದನು. ಯಾಕೋಬನಿಂದ ಹನ್ನೆರಡು ಮಂದಿ ಮೂಲಪಿತೃಗಳು ಹುಟ್ಟಿದರು.

ಸುನ್ನತಿಯ ಬಗ್ಗೆ ತಿರುಗಿ ಬಿದ್ದ ಕ್ರೈಸ್ತರು ಹೊಸ ಬೈಬಲ್

ಯೋಹಾನನು 7:14 ಆಗ ಯೇಸು ಆ ಹಬ್ಬದ ಮಧ್ಯದಲ್ಲಿ ದೇವಾ ಲಯದೊಳಗೆ ಹೋಗಿ ಬೋಧಿಸಿದನು.

ಯೋಹಾನನು 7:15 ಯೆಹೂದ್ಯರು ಆಶ್ಚರ್ಯಪಟ್ಟು--ಏನನ್ನೂ ಕಲಿಯದಿರುವ ಈ ಮನುಷ್ಯನಿಗೆ ಇಂಥ ಜ್ಞಾನವು ಬಂದಿರುವದು ಹೇಗೆ ಅಂದರು.

ಯೋಹಾನನು 7:16 ಅದಕ್ಕೆ ಯೇಸು ಪ್ರತ್ಯುತ್ತರವಾಗಿ ಅವರಿಗೆ--ನನ್ನ ಬೋಧನೆಯು ನನ್ನದಲ್ಲ; ಆದರೆ ನನ್ನನ್ನು ಕಳುಹಿಸಿದಾತನದೇ.

ಯೋಹಾನನು 7:22 ಹಾಗಿದ್ದರೆ ಮೋಶೆಯು ನಿಮಗೆ ಸುನ್ನತಿಯನ್ನು ಕೊಟ್ಟನು; (ಅದು ಮೋಶೆಯದಲ್ಲ, ಆದರೆ ಅದು ಪಿತೃಗಳದೇ). ನೀವು ಸಬ್ಬತ್ ದಿನದಲ್ಲಿ ಮನುಷ್ಯನಿಗೆ ಸುನ್ನತಿ ಮಾಡುತ್ತೀರಿ.

ಯೋಹಾನನು 7:23 ಒಬ್ಬ ಮನುಷ್ಯನು ಮೋಶೆಯ ನ್ಯಾಯಪ್ರಮಾಣವನ್ನು ಮೀರದ ಹಾಗೆ ಸಬ್ಬತ್ ದಿನ ದಲ್ಲಿ ಸುನ್ನತಿಯನ್ನು ಮಾಡಿಸಿಕೊಂಡರೆ ನಾನು ಒಬ್ಬ ಮನುಷ್ಯನನ್ನು ಸಬ್ಬತ್‌ದಿನದಲ್ಲಿ ಸಂಪೂರ್ಣವಾಗಿ ಸ್ವಸ್ಥ ಮಾಡಿದ್ದಕ್ಕೆ ನನ್ನ ಮೇಲೆ ನೀವು ಕೋಪಗೊಳ್ಳುತ್ತೀರೋ?

ರೋಮಾಪುರದವರಿಗೆ 15:8 ಹೀಗಿರುವದರಿಂದ ಪಿತೃ ಗಳಿಗೆ ಮಾಡಿದ ವಾಗ್ದಾನಗಳನ್ನು ದೃಢಪಡಿಸುವದಕ್ಕೆ ದೇವರ ಸತ್ಯಕ್ಕಾಗಿ ಯೇಸು ಕ್ರಿಸ್ತನು ಸುನ್ನತಿಯವರಿಗೆ ಸೇವಕನಾಗಿದ್ದನೆಂದು ನಾನು ಹೇಳುತ್ತೇನೆ.

ರೋಮಾಪುರದವರಿಗೆ 2:25 ನೀನು ನ್ಯಾಯಪ್ರಮಾಣವನ್ನು ಕೈಕೊಂಡರೆ ಸುನ್ನತಿಯು ನಿಜವಾಗಿಯೂ ಪ್ರಯೋಜನವಾದದ್ದೇ. ಆದರೆ ನೀನು ನ್ಯಾಯಪ್ರಮಾಣವನ್ನು ಮೀರುವದಾದರೆ ನಿನ್ನ ಸುನ್ನತಿಯು ಸುನ್ನತಿ ಅಲ್ಲ.

ರೋಮಾಪುರದವರಿಗೆ 2:26 ಆದದರಿಂದ ಸುನ್ನತಿಯಿಲ್ಲದವನು ನ್ಯಾಯ ಪ್ರಮಾಣದ ನೀತಿಯನ್ನು ಕೈಕೊಂಡರೆ ಸುನ್ನತಿಯಿಲ್ಲದವನಾದ ಅವನಿಗೆ ಅದು ಸುನ್ನತಿಯೆಂದು ಎಣಿಸಲ್ಪಡುವದಿಲ್ಲವೋ?

ರೋಮಾಪುರದವರಿಗೆ 2:27 ಸ್ವಾಭಾವಿಕವಾಗಿ ಸುನ್ನತಿಯಿಲ್ಲದವನಾಗಿದ್ದು ನ್ಯಾಯಪ್ರಮಾಣ ವನ್ನು ನೆರವೇರಿಸುವದಾದರೆ ನ್ಯಾಯಪ್ರಮಾಣವೂ ಸುನ್ನತಿಯೂ ಇದ್ದು ನ್ಯಾಯಪ್ರಮಾಣವನ್ನು ಮೀರಿ ನಡೆಯುವ ನಿನಗೆ ಅವನು ತೀರ್ಪು ಮಾಡುವ ದಿಲ್ಲವೋ?

ರೋಮಾಪುರದವರಿಗೆ 2:28 ಹೊರಗೆ ಯೆಹೂದ್ಯನಾಗಿರುವವನು ಯೆಹೂದ್ಯನಲ್ಲ; ಹೊರಗೆ ಶರೀರದಲ್ಲಿ ಮಾಡಿರುವ ಸುನ್ನತಿಯು ಸುನ್ನತಿಯಲ್ಲ.

ರೋಮಾಪುರದವರಿಗೆ 2:29 ಆದರೆ ಒಳಗೆ ಯೆಹೂದ್ಯ ನಾಗಿರುವವನೇ ಯೆಹೂದ್ಯನು; ಸುನ್ನತಿಯು ಹೃದಯಕ್ಕೆ ಸಂಬಂಧಪಟ್ಟದ್ದಾಗಿ ಅಕ್ಷರೀಕವಾಗಿರದೆ ಆತ್ಮೀಕವಾದದ್ದೇ ಆಗಿದೆ. ಹೀಗೆ ಅವನ ಹೊಗಳಿಕೆಯು ಮನುಷ್ಯರಿಂದಾ ಗಿರದೆ ದೇವರಿಂದಲೇ ಆಗಿರುವದು.

ರೋಮಾಪುರದವರಿಗೆ 3:1 ಹಾಗಾದರೆ ಯೆಹೂದ್ಯರಿಗಿರುವ ಪ್ರಾಧಾ ನ್ಯತೆ ಏನು? ಇಲ್ಲವೆ ಸುನ್ನತಿಯಿಂದ ಲಾಭವೇನು?

ರೋಮಾಪುರದವರಿಗೆ 3:29 ದೇವರು ಯೆಹೂದ್ಯರಿಗೆ ಮಾತ್ರ ದೇವರಾಗಿ ದ್ದಾನೋ? ಅನ್ಯಜನಗಳಿಗೆ ಸಹ ದೇವರಲ್ಲವೇ? ಹೌದು, ಆತನು ಅನ್ಯಜನರಿಗೆ ಸಹ ದೇವರಾಗಿದ್ದಾನೆ;

ರೋಮಾಪುರದವರಿಗೆ 3:30 ದೇವರು ಒಬ್ಬನೇ ಆಗಿರಲಾಗಿ ಆತನು ಸುನ್ನತಿಯವರನ್ನು ನೀತಿವಂತರೆಂದು ನಿರ್ಣಯಿಸುವದಕ್ಕೆ ಅವರ ನಂಬಿಕೆಯಿಂದಲೇ. ಸುನ್ನತಿಯಿಲ್ಲ ದವರನ್ನು ಹಾಗೆಯೇ ನಿರ್ಣಯಿಸುವದು ನಂಬಿಕೆಯ ಮೂಲಕವೇ.

ರೋಮಾಪುರದವರಿಗೆ 4:9 ಈ ಧನ್ಯತೆಯು ಸುನ್ನತಿಯಿದ್ದವರಿಗೆ ಮಾತ್ರವೋ? ಇಲ್ಲವೆ ಸುನ್ನತಿಯಿಲ್ಲದವರಿಗೂ ಆಗುತ್ತದೋ? ಯಾಕಂದರೆ ಅಬ್ರಹಾಮನ ಲೆಕ್ಕಕ್ಕೆ ಅವನ ನಂಬಿಕೆಯೇ ನೀತಿಯೆಂದು ಎಣಿಸಲ್ಪಟ್ಟಿತೆಂಬದಾಗಿ ನಾವು ಹೇಳುತ್ತೇವಲ್ಲಾ.

ರೋಮಾಪುರದವರಿಗೆ 4:10 ಹಾಗಾದರೆ ಅದು ಯಾವಾಗ ಎಣಿಸಲ್ಪಟ್ಟಿತು? ಅವನಿಗೆ ಸುನ್ನತಿಯಾದ ಮೇಲೆಯೋ? ಸುನ್ನತಿಯಾಗು ವದಕ್ಕೆ ಮೊದಲೋ? ಸುನ್ನತಿಯಾದ ಮೇಲೆ ಅಲ್ಲ, ಸುನ್ನತಿಯಾಗುವದಕ್ಕೆ ಮೊದಲೇ ಎಣಿಸಲ್ಪಟ್ಟಿತು.

ರೋಮಾಪುರದವರಿಗೆ 4:11 ಆಮೇಲೆ ನೀತಿಗೆ ಮುದ್ರೆಯಾಗಿ ಸುನ್ನತಿಯನ್ನು ಗುರುತಾಗಿ ಹೊಂದಿದನು. ಇದು ಸುನ್ನತಿಯಾಗುವದಕ್ಕೆ ಮೊದಲೇ ಅವನಿಗಿದ್ದ ನಂಬಿಕೆಯಿಂದಾಯಿತು. ಹೀಗೆ ಅವನು ನಂಬುವವರೆಲ್ಲರಿಗೆ ಅಂದರೆ ಅವರು ಸುನ್ನತಿ ಯಿಲ್ಲದವರಾದಾಗ್ಯೂ ಅವರಿಗೆ ತಂದೆಯಾದನು; ಹೀಗೆ ಅವರೂ ನೀತಿವಂತರೆಂದು ಎಣಿಸಲ್ಪಡುವರು.

ರೋಮಾಪುರದವರಿಗೆ 4:12 ಇದಲ್ಲದೆ ಸುನ್ನತಿಯಿದ್ದವರಿಗೆ ತಂದೆಯಾದವನು ಸುನ್ನತಿಯವರಿಗೆ ಮಾತ್ರವಲ್ಲ, ಆದರೆ ಅಬ್ರಹಾಮನು ಸುನ್ನತಿ ಮಾಡಿಸಿಕೊಳ್ಳುವದಕ್ಕೆ ಮುಂಚೆ ನಡೆದ ನಂಬಿಕೆಯ ಹೆಜ್ಜೆಜಾಡಿನಲ್ಲಿ ನಡೆಯುತ್ತಿರುವ ಸುನ್ನತಿ ಯಿಲ್ಲದವರಿಗೂ ತಂದೆಯಾಗಿದ್ದಾನೆ.

ರೋಮಾಪುರದವರಿಗೆ 4:24 ನಮ್ಮ ಕರ್ತನಾದ ಯೇಸುವನ್ನು ಸತ್ತವರೊಳಗಿಂದ ಎಬ್ಬಿಸಿದಾತನನ್ನು ನಂಬುವ ನಾವು ನಂಬಿಕೆಯಿಂದ ನೀತಿವಂತರೆಂದು ಎಣಿಸಲ್ಪಡುವಂತೆ ನಮಗೋಸ್ಕರವೂ ಬರೆಯಲ್ಪಟ್ಟಿದೆ.

1 ಕೊರಿಂಥದವರಿಗೆ 7:18 ಸುನ್ನತಿ ಯಲ್ಲಿದ್ದು ಕರೆಯಲ್ಪಟ್ಟವನು ಯಾವನಾದರೂ ಇದ್ದಾನೋ? ಅವನು ಸುನ್ನತಿ ಇಲ್ಲದವನಂತಾಗ ಬಾರದು; ಸುನ್ನತಿ ಇಲ್ಲದೆ ಕರೆಯಲ್ಪಟ್ಟವನು ಯಾವ ನಾದರೂ ಇದ್ದಾನೋ? ಅವನು ಸುನ್ನತಿ ಮಾಡಿಸಿ ಕೊಳ್ಳಬಾರದು.

1 ಕೊರಿಂಥದವರಿಗೆ 7:19 ಸುನ್ನತಿಯಾದರೂ ಏನೂ ಇಲ್ಲ, ಸುನ್ನತಿಯಾಗದ್ದಿದರೂ ಏನೂ ಇಲ್ಲ; ಆದರೆ ದೇವರ ಆಜ್ಞೆಗಳನ್ನು ಅನುಸರಿಸಿ ನಡೆಯುವದೇ ಆಗಿದೆ.

1 ಕೊರಿಂಥದವರಿಗೆ 7:20 ದೇವರು ಕರೆದಾಗ ಪ್ರತಿಯೊಬ್ಬನು ಯಾವ ಸ್ಥಿತಿಯಲ್ಲಿದ್ದನೋ ಆ ಸ್ಥಿತಿಯಲ್ಲಿಯೇ ಇರಬೇಕು.

ಗಲಾತ್ಯದವರಿಗೆ 5:2 ಇಗೋ, ಪೌಲನೆಂಬ ನಾನು ನಿಮಗೆ ಹೇಳುವದೇನಂದರೆ, ನೀವು ಸುನ್ನತಿ ಮಾಡಿಸಿಕೊಂಡರೆ ಕ್ರಿಸ್ತನಿಂದ ನಿಮಗೆ ಏನು ಪ್ರಯೋಜನವಿಲ್ಲ.

ಗಲಾತ್ಯದವರಿಗೆ 5:3 ಯಾಕಂದರೆ ಸುನ್ನತಿ ಮಾಡಿಸಿಕೊಳ್ಳುವ ಪ್ರತಿ ಯೊಬ್ಬನು ನ್ಯಾಯಪ್ರಮಾಣವನ್ನೆಲ್ಲಾ ಕೈಕೊಳ್ಳುವ ಹಂಗಿನಲ್ಲಿದ್ದಾನೆ ಎಂದು ತಿರಿಗಿ ಪ್ರಮಾಣವಾಗಿ ಹೇಳುತ್ತೇನೆ.

ಗಲಾತ್ಯದವರಿಗೆ 5:6 ಯಾಕಂದರೆ ಯೇಸು ಕ್ರಿಸ್ತನಲ್ಲಿರುವವರಿಗೆ ಸುನ್ನತಿ ಯಾದರೂ ಪ್ರಯೋಜನವಿಲ್ಲ, ಆಗದಿದ್ದರೂ ಪ್ರಯೋ ಜನವಿಲ್ಲ. ಪ್ರೀತಿಯಿಂದ ಕೆಲಸನಡಿಸುವ ನಂಬಿಕೆ ಯಿಂದಲೇ ಪ್ರಯೋಜನವಾಗುತ್ತದೆ.

ಗಲಾತ್ಯದವರಿಗೆ 5:13 ಸಹೋದರರೇ, ನೀವು ಸ್ವತಂತ್ರರಾಗಿರಬೇಕೆಂದು ಕರೆಯಲ್ಪಟ್ಟಿದ್ದೀರಿ. ಸ್ವಾತಂತ್ರ್ಯವನ್ನು ಶರೀರಕ್ಕೆ ಆಸ್ಪದವಾಗಿ ಬಳಸದೆ ಪ್ರೀತಿಯಿಂದ ಒಬ್ಬರಿಗೊಬ್ಬರು ಸೇವೆ ಮಾಡಿರಿ.

ಗಲಾತ್ಯದವರಿಗೆ 5:14 ನಿನ್ನ ನೆರೆಯವನನ್ನು ನಿನ್ನಂತೆಯೇ ಪ್ರೀತಿಸು ಎಂಬ ಒಂದೇ ಮಾತಿನಲ್ಲಿ ನ್ಯಾಯಪ್ರಮಾಣವೆಲಾ ನೆರವೇರುತ್ತದೆ.

ಗಲಾತ್ಯದವರಿಗೆ 5:15 ಆದರೆ ನೀವು ಒಬ್ಬರನ್ನೊಬ್ಬರು ಕಚ್ಚಿ ನುಂಗುವವರಾದರೆ ಒಬ್ಬರಿಂದೊಬ್ಬರು ನಾಶವಾದೀರಿ, ಎಚ್ಚರವಾಗಿರ್ರಿ.

ಗಲಾತ್ಯದವರಿಗೆ 5:16 ನಾನು ಹೇಳುವದೇನಂದರೆ, ಆತ್ಮನನ್ನು ಅನು ಸರಿಸಿ ನಡೆದುಕೊಳ್ಳಿರಿ; ಆಗ ನೀವು ಶರೀರಭಾವದ ಅಭಿಲಾಷೆಯನ್ನು ಎಷ್ಟು ಮಾತ್ರಕ್ಕೂ ನೆರವೇರಿಸುವದಿಲ್ಲ.

ಗಲಾತ್ಯದವರಿಗೆ 6:12 ಶರೀರದಲ್ಲಿ ಅಂದವಾಗಿ ಕಾಣಬೇಕೆಂದು ಇಷ್ಟಪಡು ವವರೆಲ್ಲರೂ ತಮಗೆ ಕ್ರಿಸ್ತನ ಶಿಲುಬೆಯ ದೆಸೆಯಿಂದ ಹಿಂಸೆಯಾಗಬಾರದೆಂಬದಕ್ಕಾಗಿಯೇ ಸುನ್ನತಿಮಾಡಿಸಿ ಕೊಳ್ಳಬೇಕೆಂದು ನಿಮ್ಮನ್ನು ಬಲಾತ್ಕರಿಸುತ್ತಾರೆ.

ಗಲಾತ್ಯದವರಿಗೆ 6:13 ಸುನ್ನತಿ ಮಾಡಿಸಿಕೊಳ್ಳುವ ತಾವಾದರೂ ನ್ಯಾಯಪ್ರಮಾಣ ವನ್ನು ಕೈಕೊಂಡು ನಡೆಯುವದಿಲ್ಲ. ಆದರೆ ಅವರು ನಿಮ್ಮ ಶರೀರದ ವಿಷಯದಲ್ಲಿ ಹೆಚ್ಚಳ ಪಡುವದಕ್ಕಾಗಿ ನಿಮಗೆ ಸುನ್ನತಿಯಾಗಬೇಕೆಂದು ಅಪೇಕ್ಷಿಸುತ್ತಾರೆ.

ಗಲಾತ್ಯದವರಿಗೆ 6:15 ಕ್ರಿಸ್ತ ಯೇಸುವಿನಲ್ಲಿ ಸುನ್ನತಿಯಾಗುವದರಿಂದ ಏನೂ ಪ್ರಯೋಜನವಿಲ್ಲ, ಸುನ್ನತಿಯಾಗದೆ ಇರುವದ ರಿಂದಲೂ ಏನೂ ಪ್ರಯೋಜನವಿಲ್ಲ; ಆದರೆ ಹೊಸ ಸೃಷ್ಟಿಯೇ ಬೇಕು.

ಕೊಲೊಸ್ಸೆಯವರಿಗೆ 3:11 ಇದರಲ್ಲಿ ಗ್ರೀಕನು ಯೆಹೂದ್ಯನು ಎಂಬ ಭೇದವಿಲ್ಲ; ಸುನ್ನತಿ ಮಾಡಿಸಿ ಕೊಂಡವರು ಸುನ್ನತಿ ಮಾಡಿಸಿಕೊಳ್ಳದವರು ಎಂಬ ಭೇದವಿಲ್ಲ, ಮ್ಲೇಚ್ಛ ಹೂನರೆಂದಿಲ್ಲ; ದಾಸನು ಸ್ವತಂತ್ರನು ಎಂಬ ಭೇದವಿಲ್ಲ; ಆದರೆ ಕ್ರಿಸ್ತನೇ ಸಮಸ್ತರಲ್ಲಿಯೂ ಸಮಸ್ತವೂ ಆಗಿದ್ದಾನೆ.

ಲೂಕನು 2:21 ಶಿಶುವಿಗೆ ಸುನ್ನತಿ ಮಾಡಿಸುವದಕ್ಕಾಗಿ ಎಂಟು ದಿನಗಳು ಕಳೆದ ಮೇಲೆ ಆತನನ್ನು ಗರ್ಭಧರಿಸು ವದಕ್ಕಿಂತ ಮುಂಚಿತವಾಗಿ ದೂತನು ಹೆಸರಿಟ್ಟಂತೆಯೇ ಆತನು ಯೇಸು ಎಂದು ಕರೆಯಲ್ಪಟ್ಟನು.

ಅಲ್ಲಿಗೆ ಕ್ರೈಸ್ತರಲ್ಲಿ ಸುನ್ನತಿಯ ವಿರುದ್ಧ ತರ್ಕವು ಪ್ರಾರಂಬವಾಗಿ ಅಬ್ರಹಾಮನ ಮೇಲೆ ಚಾರಿತ್ರಿಕ ಭಕ್ತಿ ನಿರ್ನಾಮವಾಗುವ ಮಟ್ಟಿಗೆ ಹೋಗದೆ ಈ ಆಚಾರ ಕೊನೆಯಾಯಿತು, ಇದು ಇಂದಿನ ಕ್ರೈಸ್ಥರಿಗೆ ಕಡ್ಡಾಯವಲ್ಲ. ಆದರೆ ಅವರ ಗ್ರಂಥದಲ್ಲಿ ಏಸು ಕ್ರಿಸ್ತನಿಗೆ ಸುನ್ನತಿಯಾಗಿದೆ ಈ ದ್ವಂದ್ವದಲ್ಲಿ ಸಿಲುಕಿ, ಇಂದಿಗೂ ಗ್ರೀಕ್ ಸಂಪ್ರದಾಯಿಕ ಚರ್ಚ್ ನಲ್ಲಿ ಜನವರಿ 1 ರಂದು ಜೀಸಸ್ಗೆ ಸುನ್ನತ್ ಆದ ದಿನ ಅಂತ ಆಚರಣೆ ಮಾಡುತ್ತಾರೆ. ಜಗತ್ತಿನ ಅನೇಕ ಚರ್ಚಗಳಲ್ಲಿ ಈ ಆಚರಣೆ ಜಾರಿಯಲ್ಲಿದೆ ಆದರೆ ಕ್ಯಾತೋಲಿಕ್ ಚರ್ಚಿನವರು ಇದನ್ನು ಆಚರಿಸದಂತೆ ಆದೇಶಿಸಿದ್ದಾರೆ.

### ಖುರಾನಿನಲ್ಲಿ ಈ ಬಗ್ಗೆ ಏನಿದೆ?

ಖುರಾನ್ 2: 124. ರಲ್ಲಿ ಅಬ್ರಹಾಮರಿಗೆ ಅವರ ದೇವರು ಕೆಲವು ಆದೇಶ ನೀಡಿ ಪರೀಕ್ಷಿಸಿದ ಬಗ್ಗೆ ಬರೆಯಲಾಗಿದೆ. "ಮತ್ತು ಇಬ್ರಾಹೀಮರನ್ನು (ಅಬ್ರಹಾಮರನ್ನು) ಅವರ ಒಡೆಯನು (ಅಲ್ಲಾಹನು) ಕೆಲವು ಆದೇಶಗಳ ಮೂಲಕ ಪರೀಕ್ಷೆಗೆ ಒಳಪಡಿಸಿದಾಗ, ಅವರು ಅವುಗಳನ್ನು ಪೂರ್ಣವಾಗಿ ಪಾಲಿಸಿದರು..........."

ಇದನ್ನು ಅನುವಾದಿಸಿರುವ ಇಬ್ನ್ ಅಲ್ ಖತೀರ್ ರವರು "ಅಲ್ಲಾಹನು ನಿರ್ಮಲತ್ವ ಮತ್ತು ಶುದ್ಧತೆ ಬಗ್ಗೆ ಅಬ್ರಾಹಮರನ್ನ ಪರೀಕ್ಷಿಸಿದ್ದಾರೆ, ಐದು ತಲೆಯ ಮೇಲೆ, ಐದು ದೇಹದ ಮೇಲೆ ಎಂದು ವಿವರಿಸಿದ್ದಾರೆ, ತಲೆಯಲ್ಲಿ ಮೀಸೆಯನ್ನು ಕತ್ತರಿಸುವುದು, ಬಾಯಿ ಮುಕ್ಕಳಿಸುವುದು, ನೀರನ್ನು ಒಳಎಳೆದು ಹೊರಹಾಕುವುದು, ಕೂದಲನ್ನು ನೆನಸುವುದು ವಿಭಾಗಿಸುವುದು. ದೇಹದಲ್ಲಿ ಉಗುರು ಕತ್ತರಿಸುವುದು, ಲೈಂಗಿಕ ಅಂಗಗಳ ಬಳಿಯ ಕೂದಲನ್ನು ತೆಗೆಯುವುದು, ಸುನ್ನತಿ, ಕೈಗಳ ಕೆಳಗೆ ಶುಚ ಮಾಡಿಕೊಳ್ಳುವುದು, ನೈಸರ್ಗಿಕ ಕರೆಗಳ ಉತ್ತರಿಸಿದ ನಂತರ ನೀರಿನಲ್ಲಿ ತೊಳೆದುಕೊಳ್ಳುವುದು" – ಇದು ಆರೋಗ್ಯಕರ ಪರಿಪಾಲನೆ ಆದರೂ ಇದು ಯಹೂದಿಗಳಿಂದ ಕಲಿತದ್ದು ಎಂದು ಯಾಕೆ ಮರೆಮಾಚುತ್ತಾರೆ.

ಶಾಹಿ ಮುಸ್ಲಿಮ್ ಪುಸ್ತಕ-2 ಹದಿತ್- 500 ಮತ್ತು 501 ರಲ್ಲಿ ಪ್ರವಾದಿ ಹೇಳುತ್ತಾರೆ "ಮೀಸೆಯನ್ನು ಕತ್ತರಿಸಿ ಗಡ್ಡವನ್ನು ಬೆಳಸಿ, ಅದರಿಂದ ಅಗ್ನಿ ಆರಾಧಕರ ಮತ್ತು ಬಹುದೇವಾರಾಧಕರ ವಿರುದ್ಧ ತಮ್ಮ ಕ್ರಿಯೆ ಇರಲಿ" ಅಂದರೆ ಸುನತ್ ಮಾಡಿಸಿದ ಯಹೂದಿಯರು ಇತರರು ಮತ್ತು ಯಹೂದಿಯರ ನಡುವೆ ವ್ಯತ್ಯಾಸವನ್ನು ತಿಳಿಯಲು ಎಂದು ಅರ್ಥಮಾಡಿಕೊಂಡ ಪ್ರವಾದಿಗಳು ಮುಸ್ಲಿಮರಿಗೆ ಬಾಹಿರವಾಗಿ ಕಾಣುವ ವ್ಯತ್ಯಾಸವನ್ನು ಜಾರಿಗೆ ತಂದರು ಅನ್ನಬಹುದು.

ಈ ರೀತಿಯ ಅಲ್ಲಾಹರ ವಾಣಿಯಿಂದ ಈಗಿನ ಮುಸ್ಲಿಮರು ಅಬ್ರಹಾಮರ ಮತದಲ್ಲಿ ಇದ್ದ ಸುನ್ನತ್ ಅನುಸರಿಸುತ್ತಿದ್ದಾರೆಂದು ಹೇಳಲಾಗಿದೆ. ಆದರೆ ಇದನ್ನು ಏಕೆ ನೇರವಾಗಿ ಖುರಾನಿನಲ್ಲಿ ಉಲ್ಲೇಕವಾಗಿಲ್ಲ ಎಂಬುದು ಅವಲೋಕಿಸಲು ಸುನ್ನತ್ ವಿರುದ್ಧ ಕ್ರೈಸ್ತರ ತರ್ಕವನ್ನು ಓದಿದರೆ ತಿಳಿಯುತ್ತೆ. ಮೊಹಮ್ಮದರಿಗೆ/ಅಲ್ಲಾಹರಿಗೆ ಅಬ್ರಹಾಮರ ಧರ್ಮ/ಮತ ಬೇಕಿತ್ತು ಆದರೆ ಅದನ್ನು ಒಂದು ಕಡೆ ಒಪ್ಪುವುದಿಲ್ಲ ಒಂದು ಕಡೆ ಒಪ್ಪಿಕೊಳ್ಳುತ್ತಾರೆ, ಈ ದ್ವಂದ್ವಕ್ಕೆ ಕಾರಣ ಅಂದು ಯಹೂದಿಯರ ಬಗ್ಗೆ ಇದ್ದ ಅಸಹಿಷ್ಣುತೆ ಇರಬಹುದೆ?

ಖುರಾನಿನಲ್ಲಿ ನೇರವಾಗಿ ಸುನ್ನತ್ ಬಗ್ಗೆ ಹೇಳಿಲ್ಲ ಆದರೂ ಅನೇಕ ದೇಶಗಳಲ್ಲಿ ಸುನತ್ ಮಹಿಳೆಯರಿಗೆ ಪುರುಷರಿಗೆ ಮಾಡಲಾಗುತ್ತಿದೆ ಅದು ಅನಾರೋಗ್ಯವಾಗಿ ಮಾಡಲಾಗುತ್ತಿದೆ ಎಂಬ ವರದಿ ಇದೆ.[25]

ಖುರಾನಿನಲ್ಲೇ ಸುನ್ನತ್ ಬಗ್ಗೆ ವಿರೋದವಿದೆ.

---

[25]https://pdfs.semanticscholar.org/8fd2/e0b0610d1a89c2b5b831313fe2368be8a050.pdf

ಖುರಾನ್ 25:2 ................ ಅವನೇ ಎಲ್ಲವನ್ನೂ ಸೃಷ್ಟಿಸಿದವನು ಮತ್ತು ಪ್ರತಿಯೊಂದರ ಇತಿಮಿತಿಗಳನ್ನು ನಿರ್ಧರಿಸಿದವನು.

ಖುರಾನ್ 95:4 ನಾವು ಮನುಷ್ಯನನ್ನು ಅತ್ಯುತ್ತಮ ಸ್ವರೂಪದಲ್ಲಿ ಸೃಷ್ಟಿಸಿರುವೆವು.

ಖುರಾನ್ 4: 119. (ಹಾಗೆಯೇ ಅವನು – ಶೈತಾನನು) "ನಾನು ಖಂಡಿತ ಅವರನ್ನು ದಾರಿಗೆಡಿಸುವೆನು, ಅವರಲ್ಲಿ ಆಶೆಗಳನ್ನು ಹುಟ್ಟಿಸುವೆನು ಮತ್ತು ಅವರಿಗೆ ಆದೇಶ ನೀಡುವೆನು.............ಆಗ ಅವರು ಅಲ್ಲಾಹನ ಸೃಷ್ಟಿಗಳ ರೂಪಗಳನ್ನು ವಿಕೃತಗೊಳಿಸುವರು" (ಎಂದಿದ್ದನು). ಅಲ್ಲಾಹನನ್ನು ಬಿಟ್ಟು ಶೈತಾನನನ್ನು ತನ್ನ ಪೋಷಕನಾಗಿಸಿಕೊಂಡವನು ನಿಜವಾಗಿ ಸ್ಪಷ್ಟವಾದ ನಷ್ಟಕ್ಕೆ ತುತ್ತಾದನು.

ಖುರಾನ್ 6:38 ................. ನಾವು ಗ್ರಂಥದಲ್ಲಿ ಏನನ್ನೂ ದಾಖಲಿಸದೆ ಬಿಟ್ಟಿಲ್ಲ......

ಖುರಾನ್ 40:64 ............... ನಿಮಗೆ ರೂಪವನ್ನು ನೀಡಿದವನು ಹಾಗೂ ನಿಮ್ಮ ರೂಪವನ್ನು ಅಂದಗೊಳಿಸಿದವನು ಮತ್ತು ನಿರ್ಮಲ ವಸ್ತುಗಳ ಮೂಲಕ ನಿಮಗೆ ಆಹಾರವನ್ನು ಒದಗಿಸಿದವನು. ಅವನೇ ನಿಮ್ಮ ಒಡೆಯನಾದ ಅಲ್ಲಾಹ್.......

ಖುರಾನ್ 64:4 ........... ನೀವು ಗುಟ್ಟಾಗಿಡುವ ಮತ್ತು ಪ್ರಕಟ ಪಡಿಸುವ ಎಲ್ಲವನ್ನೂ ಅವನು ಬಲ್ಲನು. ಅಲ್ಲಾಹನು ಮನಸ್ಸಿನ ರಹಸ್ಯಗಳನ್ನೂ ಬಲ್ಲವನಾಗಿದ್ದಾನೆ.

ಖುರಾನ್ 6: 115. ಸತ್ಯದಲ್ಲೂ ನ್ಯಾಯದಲ್ಲೂ ನಿಮ್ಮೊಡೆಯನ ಮಾತೇ ಪರಿಪೂರ್ಣವಾಗಿದೆ. ಅವನ ಮಾತುಗಳಲ್ಲಿ ಬದಲಾವಣೆ ಇಲ್ಲ. ಅವನು ಎಲ್ಲವನ್ನೂ ಕೇಳುವವನು ಮತ್ತು ಎಲ್ಲವನ್ನೂ ಬಲ್ಲವನು.

ಖುರಾನ್ 10: 59. ಹೇಳಿರಿ; ಅಲ್ಲಾಹನು ನಿಮಗೆ ಇಳಿಸಿಕೊಟ್ಟಿರುವ ಆಹಾರವನ್ನು ನೀವು ನೋಡಿದಿರಾ? ಅದರಲ್ಲಿ ನೀವೇ ಕೆಲವನ್ನು ನಿಷಿದ್ಧ ಹಾಗೂ ಕೆಲವನ್ನು ಸಮ್ಮತವೆಂದು ಗುರುತಿಸಿಕೊಂಡಿರುವಿರಿ. (ಹಾಗೆಮಾಡಲು) ಅಲ್ಲಾಹನು ನಿಮಗೆ ಅನುಮತಿ ನೀಡಿರುವನೇ? ಅಥವಾ ನೀವು ಅವನ ಮೇಲೆ ಸುಳ್ಳನ್ನು ಆರೋಪಿಸುತ್ತಿರುವಿರಾ?

ಖುರಾನ್ 13: 8. ಪ್ರತಿಯೊಬ್ಬ ಹೆಣ್ಣು ತನ್ನ ಹೊಟ್ಟೆಯಲ್ಲಿ ಏನನ್ನು ಹೊತ್ತಿರುವಳು ಮತ್ತು ಗರ್ಭಗಳಲ್ಲಿ ಅರಳುತ್ತಿರುವುದೇನು ಹಾಗೂ ಮುದುಡುತ್ತಿರುವುದೇನು ಎಂಬುದನ್ನು ಅಲ್ಲಾಹನು ಬಲ್ಲನು. ಅವನ ಬಳಿ ಪ್ರತಿಯೊಂದಕ್ಕೂ ಒಂದು ಪ್ರಮಾಣವು ನಿಶ್ಚಿತವಾಗಿದೆ.

ಖುರಾನ್ 32:7–9 ರಲ್ಲಿ ಮಾನವನನ್ನು ಅಲ್ಲಾಹನು ಸೃಷ್ಟಿಸಲು ಮೊದಲಿಗೆ ಮಣ್ಣು ನಂತರ ಗಲೀಜು ನೀರಿನಿಂದ ಮುಂದಾಗಿ ಆತನಿಗೆ ಆಕಾರ ನೀಡಿದವನು ಉಸಿರು ಊದಿದವನು, ಅದರೂ ಅವನಿಗೆ ಕೃತಜ್ಞತೆ ಸಲ್ಲಿಸುವುದು ಕಡಿಮೆ ಎಂದು ಇದೆ.

ಖುರಾನ್ ಅಧ್ಯಾಯ 82 ರಲ್ಲಿ

6. ಮಾನವನೇ, ಆ ನಿನ್ನ ಉದಾರಿ ಒಡೆಯನ ವಿಷಯದಲ್ಲಿ ನಿನ್ನನ್ನು ಮೋಸಗೊಳಿಸಿದ ವಸ್ತು ಯಾವುದು?

7. ಅವನೇ ನಿನ್ನನ್ನು ಸೃಷ್ಟಿಸಿದನು (ನಿನ್ನ ಅಂಗಾಂಗಗಳನ್ನು) ಸರಿಪಡಿಸಿದನು, ಸಂತುಲಿತವಾಗಿ ನಿನ್ನನ್ನು ರಚಿಸಿದನು.

8. ತಾನಿಚ್ಛಿಸಿದ ರೂಪದಲ್ಲಿ ನಿನ್ನನ್ನು ಜೋಡಿಸಿದನು.

ಅಲ್ಲಿಗೆ ಖುರಾನ್ ಪಕ್ಕಾ ಅನುಯಾಯಿಗಳಿಗೆ ಇದೊಂದು ಗೊಂದಲದ ಉತ್ತರ ವಿಲ್ಲದ ಗೂಡಾಗುವುದು. ಒಂದು ಕಡೆ ಅಬ್ರಾಹಾಮರು ಘೋಷಿಸಿರುವ ಸುನತ್ ಅನುಸರಿಸಿದರೆ ಅದು ಯಹೂದಿಗಳ ಅಬ್ರಹಾಮ್ ಎಂದು ಹೇಳುವುದಕ್ಕೆ ಇಂದು ಅನೇಕ ಸಾಕ್ಷ್ಯಾಧಾರ ಇದೆ (ಅಂದು ಮಾಹಿತಿಯ ಕೊರತೆಯಿಂದ ನಂಬುವ ಕಾಲ ಇತ್ತೇನೋ ಆದರೆ ಇಂದು ಹಾಗೆಯೇ ಇಲ್ಲವಲ್ಲ). ಯಹೂದಿಗಳಿಗೆ ಮುಸ್ಲಿಮರನ್ನು ಕಂಡರೆ ಆಗದು, ಅಲ್ಲಾಹರೇ ಅಬ್ರಹಾಮರ ಮೂರ್ತಿ ಹಾಳು ಮಾಡಿದ್ದಾರೆ, ಒಂದೆಡೆ ಖುರಾನ್ ಅಬ್ರಹಾಮರು ಮುಸ್ಲಿಮರು ಎನ್ನುತ್ತದೆ ಒಂದುಕಡೆ ಖುರಾನ್ ಅಬ್ರಹಾಮರ ಮತವನ್ನು ಅನುಸರಿಸಿ ಅನ್ನುತ್ತದೆ. ಚರಿತ್ರೆಯ ಪುಸ್ತಕವೇನೋ ಅಬ್ರಹಾಮರು ಇಸ್ಲಾಮ್ ಉದಯಕ್ಕೆ ಮುಂಚೆ ಬೇರೆ ಮತದವರು ಎನ್ನುತ್ತದೆ. ಅಬ್ರಹಾಮರ ಕಾಲದಲ್ಲಿಯೇ ಮುಸ್ಲಿಮ್ ಮತ ಇತ್ತು ಅನ್ನುವುದಕ್ಕೆ ಅಂದೇ ಅಲ್ಲಾಹರು ಬಂದಿದ್ದರು ಎನ್ನುವುದಕ್ಕೆ ಹಿಂದಿನ ಪುಸ್ತಕಗಳಲ್ಲಿ ಅಲ್ಲಾಹರ ಹೆಸರು ಇಲ್ಲ, ಇಂದಿನ ಕೆಲವು ಭಕ್ತರು ಮೊಹಮ್ಮದನ ಹೆಸರು ತೋರಿಸಲು ಹೋಗಿ ಮುಗ್ಗರಿಸಿದ್ದಾರೆ. ಇಲ್ಲಿ ನಿಮಗೆ ಒಂದು ಲೋಕಾರೂಡಿ ಗಾದೆ ಜ್ಞಾಪಕಕ್ಕೆ ಬರುವುದಿಲ್ಲವೆ "ಒಂದು ಸುಳ್ಳು ನಿಜವಾಗಿಸಲು ಸಾವಿರ ಸುಳ್ಳು ಹೇಳ ಬೇಕಾದೀತು" ಎಂಬುದು.

ಅಬ್ರಹಾಮರ ಮತವನ್ನು ಅನುಸರಿಸಿ ಎಂದು ಮುಸ್ಲಿಮರಿಗೆ ಕರೆ ಇದೆ.

ಖುರಾನ್ 16:118, 120-123 ರಲ್ಲಿನ ಶ್ಲೋಕ ಹೀಗಿದೆ,

118. ನಾವು ಈ ಹಿಂದೆ ನಿಮಗೆ (ಮೊಹಮ್ಮದರಿಗೆ) ನಿರ್ಬಂದಿಸಿ ತಿಳಿಸಿರುವ ವಸ್ತುಗಳನ್ನು ನಾವು ಯಹೂದಿಗಳ ಪಾಲಿಗೆ ನಿಷೇಧಿಸಿದ್ದೆವು. ನಾವು ಅವರ ಮೇಲೆ ಯಾವ ಅಕ್ರಮವನ್ನೂ ಎಸಗಲಿಲ್ಲ. ಅವರು ತಾವೇ ತಮ್ಮ ಮೇಲೆ ಅಕ್ರಮ ವೆಸಗಿಕೊಂಡಿದ್ದರು.

120. ನಿಜಕ್ಕೂ ಇಬ್ರಾಹೀಮರು (ಅಬ್ರಹಾಮರು) ಸ್ವತಃ ತಾವೇ ಒಂದು ಸಮುದಾಯವಾಗಿದ್ದರು. ಅವರು ಸಂಪೂರ್ಣ ಏಕಾಗ್ರಚಿತ್ತರಾಗಿ ಅಲ್ಲಾಹನಿಗೆ ವಿಧೇಯರಾಗಿದ್ದರು. ಅವರು ಬಹುದೇವಾರಾಧಕರಾಗಿರಲಿಲ್ಲ.

121. ಅವರು ಅವನ ಅನುಗ್ರಹಗಳಿಗೆ ಕೃತಜ್ಞರಾಗಿದ್ದರು. ಅವನು ಅವರನ್ನು ಆರಿಸಿಕೊಂಡನು ಮತ್ತು ಅವರನ್ನು ನೇರಮಾರ್ಗದೆಡೆಗೆ ನಡೆಸಿದನು.

122. ಮತ್ತು ನಾವು ಅವರಿಗೆ ಈ ಲೋಕದಲ್ಲಿ ಹಿತವನ್ನು ನೀಡಿದೆವು. ಇನ್ನು ಪರಲೋಕದಲ್ಲಿ ಖಂಡಿತ ಅವರು ಸಜ್ಜನರ ಸಾಲಲ್ಲಿರುವರು.

123. ನಂತರ, ನೀವು ಏಕಾಗ್ರಚಿತ್ತರಾಗಿದ್ದ ಇಬ್ರಾಹೀಮರ (ಅಬ್ರಹಾಮರ) ಮತವನ್ನು (ಆಂಗ್ಲದಲ್ಲಿ ರಿಲಿಜಿಯನ್) (ಅರೇಬ್ಬಿಯಲ್ಲಿ ಉಲ್ಲೇಕವಾಗಿರುವುದು ಮಿಲ್ಲತ ಅಂದರೆ ಮತ)[26] ಅನುಸರಿಸಬೇಕೆಂದು ನಾವು ನಿಮ್ಮೆಡೆಗೆ ದಿವ್ಯವಾಣಿಯನ್ನು ರವಾನಿಸಿದೆವು. ಅವರು ಬಹುದೇವಾರಾಧಕರಾಗಿರಲಿಲ್ಲ.

**ಖುರಾನ್ – ಅಧ್ಯಾಯ–3 ರಲ್ಲಿ ಅಬ್ರಹಾಮರು ಮುಸ್ಲಿಮರು ಎಂದು ಹೇಳಿದೆ**

67. ಇಬ್ರಾಹೀಮರು (ಅಬ್ರಹಾಮರು) ಯಹೂದಿಯಾಗಲಿ ಕ್ರೈಸ್ತನಾಗಲಿ ಆಗಿರಲಿಲ್ಲ. ಅವರು ನಿಷ್ಠಾವಂತ ಮುಸ್ಲಿಮರಾಗಿದ್ದರು. ಅವರು ಖಂಡಿತ ಬಹುದೇವಾರಾಧಕರಾಗಿರಲಿಲ್ಲ.

68. ಜನರ ಪೈಕಿ ಇಬ್ರಾಹೀಮರೊಂದಿಗೆ (ಅಬ್ರಹಾಮರೊಂದಿಗೆ) ನಿಜವಾದ ನಂಟಿರುವುದು, ಅವರನ್ನು ಅನುಸರಿಸುವವರಿಗೆ – (ಅಂದರೆ) ಈ ದೇವದೂತರಿಗೆ ಮತ್ತು ವಿಶ್ವಾಸಿಗಳಿಗೆ ಮಾತ್ರ. ಅಲ್ಲಾಹನೇ ವಿಶ್ವಾಸಿಗಳ ಪೋಷಕನಾಗಿದ್ದಾನೆ.

**ಖುರಾನ್ ಅಧ್ಯಾಯ–37: 91–98 ರಲ್ಲಿ ಇಬ್ರಾಹಿಮರು ಬಹುದೇವಾರಾಧಕರು / ವಿಗ್ರಹಾರಾಧಕರು ಆಗಿದ್ದರು ಎನ್ನುತ್ತದೆ. ಎಲ್ಲವೂ ಗೊಂದಲದ ದ್ವಂದ್ವ ಹೇಳಿಕೆಗಳು, ಖಂಡಿತ ಇದು ದೇವರ ದ್ವಂದ್ವ ನಿಲುವು ಅಲ್ಲ.**

91. ಅವರು (ಇಬ್ರಾಹೀಮರು) ಅವರ (ತಮ್ಮ ಜನಾಂಗದವರ) ದೇವರುಗಳೆಡೆಗೆ (ವಿಗ್ರಹಗಳೆಡೆಗೆ) ಗಮನ ಹರಿಸಿದರು ಮತ್ತು ಕೇಳಿದರು; "ನೀವು ಏನನ್ನೂ ತಿನ್ನುವುದಿಲ್ಲವೇ?"

92. "ನಿಮಗೇನಾಗಿದೆ? ನೀವೇಕೆ ಮಾತನಾಡುತ್ತಿಲ್ಲ?"

93. ಕೊನೆಗೆ ಅವರು ಅವುಗಳ ಮೇಲೆ ಮುಗಿಬಿದ್ದು ಬಲವಾಗಿ ಹೊಡೆದರು.

94. ಅವರೆಲ್ಲಾ (ಜನಾಂಗದವರೆಲ್ಲಾ) ಅವರೆಡೆಗೆ ಧಾವಿಸಿ ಬಂದರು.

95. ಅವರು (ಇಬ್ರಾಹೀಮರು ಹೇಳಿದರು;) "ನೀವೇನು, ಸ್ವತಃ ನೀವೇ ಕೆತ್ತಿ ನಿರ್ಮಿಸಿದವುಗಳನ್ನು ಪೂಜಿಸುತ್ತೀರಾ?"

---

[26] https://www.islamawakened.com/quran/16/123/w4wbv.html

96. "ನಿಮ್ಮನ್ನು ಮತ್ತು ನೀವು ರಚಿಸುವವುಗಳನ್ನೆಲ್ಲಾ ಅಲ್ಲಾಹನೇ ಸೃಷ್ಟಿಸಿರುವನು".

97. ಅವರು (ಜನಾಂಗದವರು, ಪರಸ್ಪರರೊಡನೆ) "ಅವನಿಗಾಗಿ ಒಂದು ಅಗ್ನಿ ಕುಂಡವನ್ನು ರಚಿಸಿರಿ ಮತ್ತು ಅವನನ್ನು ಬೆಂಕಿಗೆಸೆದು ಬಿಡಿರಿ" ಎಂದರು.

98. ಅವರು (ಜನಾಂಗದವರು), ಅವರಿಗೆ ಹಾನಿ ಮಾಡ ಬಯಸಿದ್ದರು. ಆದರೆ ನಾವು ಅವರನ್ನು ಕೀಳಾಗಿಸಿಬಿಟ್ಟೆವು.

ಅಧ್ಯಾಯ 44 ರಲ್ಲಿ ಈ ಸ್ಟೋರಿ ಮುಂದುವರಿಯುತ್ತದೆ ಇಸ್ರೇಲರನ್ನು ತಾನೇ ರಕ್ಷಿಸಿದ್ದಾಗಿ ಅಲ್ಲಾಹರು ಹೇಳುತ್ತಾರೆ.

30. ನಾವು ಇಸ್ರಾಈಲರ ಸಂತತಿಯನ್ನು ಅಪಮಾನಕಾರಿ ಯಾತನೆಯಿಂದ ವಿಮೋಚಿಸಿದೆವು.

31. ಫಿರ್ಔನನಿಂದ (ಅವರನ್ನು ರಕ್ಷಿಸಿದೆವು). ಅವನು ಅತಿರೇಕವೆಸಗಿದ ವಿದ್ರೋಹಿಯಾಗಿದ್ದನು.

32. ನಾವು ಜ್ಞಾನದ ಆಧಾರದಲ್ಲಿ, ಎಲ್ಲ ಲೋಕಗಳವರ ಪೈಕಿ ಅವರನ್ನು ಆರಿಸಿಕೊಂಡಿದ್ದೆವು.

33. ಮತ್ತು ನಾವು ಅವರಿಗೆ ಪುರಾವೆಗಳನ್ನು ನೀಡಿದ್ದೆವು. ಅವುಗಳಲ್ಲಿ ಸ್ಪಷ್ಟ ಪರೀಕ್ಷೆ ಇತ್ತು.

ಫಿರೌನ್ ಯಾರು ಎಂದು ನೋಡಿದಾಗ ಅತನ ಹೆಸರು ಹಳೇ ಬೈಬಲ್ ಯಹೂದಿಯರ ಗ್ರಂಥದಲ್ಲಿ ಇದೆ – ಅಲ್ಲಿಗೆ ಉಲ್ಲೇಕಿತ ಮತ ಬೋದನೆಗೂ ಖುರಾನಿನ ಬೋದನೆಗೂ ಸಾಮ್ಯತೆ ಇದೆ ಆದರೂ ಖುರಾನ್ ಅವರನ್ನು ಯಹೂದಿಯರು ಎಂದು ಒಪ್ಪುವುದಿಲ್ಲ.

ಧರ್ಮೋಪದೇಶಕಾಂಡ 29:2 ಮೋಶೆಯು ಇಸ್ರಾಯೇಲ್ಯರನ್ನೆಲ್ಲಾ ಕರೆದು ಅವರಿಗೆ––ಕರ್ತನು ಐಗುಪ್ತದೇಶದಲ್ಲಿ ನಿಮ್ಮ ಕಣ್ಣುಗಳ ಮುಂದೆ ಫರೋಹನಿಗೂ ಅವನ ಎಲ್ಲಾ ಸೇವಕ ರಿಗೂ ಅವನ ಎಲ್ಲಾ ದೇಶಕ್ಕೂ ಮಾಡಿದವುಗಳನ್ನೆಲ್ಲಾ ನೋಡಿದ್ದೀರಿ.

ಧರ್ಮೋಪದೇಶಕಾಂಡ 29:13 ಆ ಒಡಂಬಡಿಕೆ ಯಾವದಂದರೆ, ಆತನು ನಿನಗೆ ಹೇಳಿದಂತೆಯೂ ನಿನ್ನ ಪಿತೃಗಳಾದ ಅಬ್ರಹಾಮನಿಗೂ ಇಸಾಕನಿಗೂ ಯಾಕೋಬನಿಗೂ ಪ್ರಮಾಣಮಾಡಿದಂತೆಯೂ ಈಹೊತ್ತು ನಿನ್ನನ್ನು ತನಗೆ ಜನಾಂಗವಾಗಿ ಸ್ಥಾಪಿಸಿ ನಿನಗೆ ದೇವರಾಗ ಬೇಕೆಂಬದೇ.

ಧರ್ಮೋಪದೇಶಕಾಂಡ 29:18 ಈಹೊತ್ತು ನಮ್ಮ ದೇವರಾದ ಕರ್ತನನ್ನು ಬಿಟ್ಟು ಆ ಜನಾಂಗಗಳ ದೇವರುಗಳಿಗೆ ಸೇವೆಮಾಡುವದಕ್ಕೆ ತಿರುಗಿಕೊಳ್ಳುವ ಹೃದಯವುಳ್ಳ

ಪುರುಷನಾದರೂ ಸ್ತ್ರೀಯಾದರೂ ಕುಟುಂಬವಾದರೂ ಗೋತ್ರವಾದರೂ ಇರಬಾರದು. ವಿಷವನ್ನೂ ಮಾಚಿಪತ್ರೆಯನ್ನೂ ಬೆಳೆ ಸುವ ಬೇರು ನಿಮ್ಮಲ್ಲಿ ಇರಬಾರದು.

ಧರ್ಮೋಪದೇಶಕಾಂಡ 29:20 ಅಂಥವನನ್ನು ಕರ್ತನು ಉಳಿಸುವದಿಲ್ಲ; ಆಗಲೇ ಕರ್ತನ ಕೋಪವೂ ರೋಷವೂ ಆ ಮನುಷ್ಯನ ಮೇಲೆ ಹೊಗೆ ಹಾಯುವವು. ಈ ಪುಸ್ತಕದಲ್ಲಿ ಬರೆದಿ ರುವ ಶಾಪವೆಲ್ಲಾ ಅವನ ಮೇಲೆ ನೆಲೆಯಾಗುವದು; ಕರ್ತನು ಅವನ ಹೆಸರನ್ನು ಆಕಾಶದ ಕೆಳಗಿನಿಂದ ಅಳಿಸಿಬಿಡುವನು.

ಹದಿತ್ ಪ್ರಕಾರ ಪ್ರವಾದಿಗಳಿಗೆ ಅಬ್ರಹಾಮ್ ಮತ್ತು ಇಸ್ಮಾಯಿಲ್ ಬಗ್ಗೆ ಗೊತ್ತು, ಸುನನ್ ಅಬು ದಾವುದ್ ಹದಿತ್ 2022 ರಲ್ಲಿ ಹೇಳಿರುವಂತೆ ಮೊಹಮ್ಮದ್ದರು ಮಕ್ಕಾಗೆ ಬಂದಾಗ ಕಾಬಾಕ್ಕೆ ಒಳಹೋಗಲು ನಿರಾಕರಿಸಿದರಂತೆ, ಯಾಕೆಂದರೆ ಅಲ್ಲಿ ಅಬ್ರಹಾಮ್ ಮತ್ತು ಇಶ್ಮಾಯಿಲ್ ರವರ ಬಿಲ್ಲು ಹಿಡಿದ ಪ್ರತಿಮೆಗಳು ಇದ್ದವಂತೆ, ಪ್ರವಾದಿಯವರು ಅದನ್ನು ನಾಷ ಪಡಿಸಲು ಆದೇಶಿಸಿದರಂತೆ. (ಈ ಬಗ್ಗೆ ಶಾಹಿ ಬುಕಾರಿ ಸಂಪುಟ-5, ಪುಸ್ತಕ-59, ಹದಿತ್-584 ರಲ್ಲು ಇದೇ ರೀತಿ ಇದೆ). ಅಲ್ಲಿಗೆ ಇಸ್ಲಾಮ್ ಬರುವ ವೇಳೆಗೆ ಯಹೂದಿಯರು ಮೆಕ್ಕಾದ ಕಾಬಾದಲ್ಲಿ ಅಬ್ರಹಾಮ್ ಮತ್ತು ಇಶ್ಮಾಯಿಲ್ ವಿಗ್ರಹ ಪೂಜೆ ಮಾಡುತ್ತಿದ್ದರು ಎಂದಾಯಿತಲ್ಲ. ಏಕ ದೇವೋಪಾಸನೆಯಿಂದ ಯಹೂದಿಗಳು ತಮ್ಮ ಪ್ರವಾದಿಗಳ ವಿಗ್ರಹಾರಾಧನೆಗೆ ಬಮ್ದು ಬಹುದೇವಾರಾಧಕರು ಆಗಿದ್ದರು ಎನ್ನುವುದು ತಿಳಿದು ಬರುತ್ತದೆ. ಖುರಾನಿನಲ್ಲಿ "ಇಬ್ರಾಹೀಮರು ಕಂಡಿತ ವಿಗ್ರಹಾರಾಧಕರು ಆಗಿರಲಿಲ್ಲ" ಎಂಬ ಉಲ್ಲೇಕವು ಅಂದು ಇಬ್ರಾಹೀಮರ ಮತದ ಅನುಯಾಯಿಗಳು ವಿಗ್ರಹಾರಾಧನೆಗೆ ಇಳಿದಿದ್ದರು ಎನ್ನುವುದು ರುಜುವಾತಾಗುತ್ತದೆ. ಯಹೂದಿಗಳು ಹೇಗೆ ಏಕದೇವೋಪಾಸನೆಯಿಂದ ಬಹುದೇವಾರಾಧನೆ ವಿಗ್ರಹಾರಾದನೆಗೆ ಅಂದೇ ಇಳಿದಿದ್ದರೋ ಅದೇ ರೀತಿ ಇಂದು ಮುಸ್ಲಿಮರು ದರ್ಗಾ ಎಂಬ ಕಲ್ಲು ಗೋರಿಯ ಪೂಜೆ, ಚಂದ್ರನೆಂಬ ಮೂರ್ತಿಯ ಪೂಜೆ, ಟಿಪ್ಪುಸುಲ್ತಾನನ ವಿಗ್ರಹ ಮಾಡಿ ಜಯಂತಿಗಳು, ಮೌಲಿ ಮುಲ್ಲಾಗಳ ದರ್ಗಾಗಳು ದೇವಾಲಯಗಳು ಕಟ್ಟುತ್ತ ಬಹುದೇವಾರಾಧಕರು ಮತ್ತು ವಿಗ್ರಹಾರಾಧಕರು ಆಗಿಬಿಟ್ಟಿದ್ದಾರೆ. ಅವರ ಮನೆಯಲ್ಲಿನ ಹೊಲಸನ್ನು ತೆಗೆಯದೆ ಅನ್ಯ ಧರ್ಮದ ವಿಗ್ರಹರಾಧನೆ ಮತ್ತು ದೇವಾಲಯಗಳ ಬಗ್ಗೆ ಈಗಲೂ ಕೆಂಡ ಕಾರುತ್ತಿರುವುದು ನೋಡಿದರೆ, ಚರಿತ್ರೆಯಿಂದ ಬುದ್ಧಿ ಕಲಿಯದ ಕಠೋರ 1400 ವರ್ಷಗಳ ಹಳೆಯ ಭೋದನೆಯಲ್ಲಿ ಮುಳುಗಿದ್ದಾರೆ ಎಂದರೆ ತಪ್ಪಾಗಲಾರದು. ಅಲ್ಲಾಹನನ್ನು ಬಿಟ್ಟು ಬೇರೆ ಆರಾಧಿಸಬಾರದು ಎನ್ನುತ್ತಾರೆ, ಆದರೂ ಅಲ್ಲಾಹನಿಗೆ 99

ಹೆಸರು ಕೊಟ್ಟು ಆರಾಧಿಸುತ್ತಾರೆ. ಅಲ್ಲಾಹನ ಹೆಸರು ಉರ್ದುವಿನಲ್ಲಿ ಖುದಾ ಅಂತ ಕೂಗುವುದಕ್ಕೂ ಅವರ ಸಿದ್ಧಾಂತಕ್ಕೆ ವಿರುದ್ಧವಾಗಿದೆ.

ಯಹೂದಿಗಳ ಮತ್ತು ಕ್ರೈಸ್ತರ ಬಗ್ಗೆ ಖುರಾನಿನಲ್ಲಿ - ನಾವೇ ಅವರನ್ನು ಕಳಿಸಿದ್ದು ಅವರಲ್ಲಿನ ಧಿಕ್ಕಾರಿಗಳಿಗೆ ಪಾಠ ಕಲಿಸಿದ್ದು ನಾನೇ ಅಲ್ಲಾಹ್ ಅನ್ನುತ್ತದೆ.

ಖುರಾನ್ - 21: 10. ನಾವಿದೋ ನಿಮ್ಮೆಡೆಗೆ ನಿಮ್ಮ ಪ್ರಸ್ತಾಪವಿರುವ (ಯಹೂದರು ಮತ್ತು ಕ್ರೈಸ್ತರ ಬಗ್ಗೆ ಪ್ರಸ್ಥಾಪವಿರುವ) ಒಂದು ಗ್ರಂಥವನ್ನು (ಕುರಾನ್) ಇಳಿಸಿರುವೆವು. ನೀವೇನು ಅರ್ಥಮಾಡಿಕೊಳ್ಳುವುದಿಲ್ಲವೇ? 43:26. ಇಬ್ರಾಹೀಮರು ತಮ್ಮ ತಂದೆಯೊಡನೆ ಹಾಗೂ ತಮ್ಮ ಜನಾಂಗದವರೊಡನೆ ಹೇಳಿದರು; "ನೀವು ಪೂಜಿಸುವ ಎಲ್ಲವುಗಳಿಂದ ನಾನು ಸಂಪೂರ್ಣ ಮುಕ್ತನಾಗಿದ್ದೇನೆ 43:45. ನಿಮಗಿಂತ ಹಿಂದೆ ನಾವು ಕಳಿಸಿದ್ದ ದೂತರನ್ನು ಕೇಳಿ ನೋಡಿರಿ. ನಾವು ಪರಮ ದಯಾಳುವಿನ (ಅಲ್ಲಾಹನ) ಹೊರತು ಬೇರೆ ಯಾರನ್ನಾದರೂ ಪೂಜಾರ್ಹ ದೇವರಾಗಿ ನೇಮಿಸಿದ್ದೇವೆಯೇ? 43:46. ನಾವು ಮೂಸಾರನ್ನು ನಮ್ಮ ಪುರಾವೆಗಳೊಂದಿಗೆ ಫಿರ್‌ಔನ್ ಮತ್ತು ಅವನ ಸರದಾರರೆಡೆಗೆ ಕಳಿಸಿದ್ದೆವು. ಅವರು, ನಿಸ್ಸಂದೇಹವಾಗಿ ನಾನು ಎಲ್ಲ ಲೋಕಗಳ ಒಡೆಯನ ದೂತನಾಗಿದ್ದೇನೆ ಎಂದರು. 43:47. ಹೀಗೆ ಅವರು ನಮ್ಮ ಪುರಾವೆಗಳೊಂದಿಗೆ ಅವರ ಬಳಿಗೆ ಬಂದಾಗ ಅವರು (ಗೇಲಿ ಮಾಡಿ) ನಕ್ಕು ಬಿಟ್ಟರು. 7;128. ಮೂಸಾ, ತಮ್ಮ ಜನಾಂಗದವರೊಡನೆ ಹೇಳಿದರು; ನೀವು ಅಲ್ಲಾಹನ ನೆರವನ್ನು ಬೇಡಿರಿ ಮತ್ತು ಸಹನಶೀಲರಾಗಿರಿ. ಭೂಮಿಯು ಅಲ್ಲಾಹನಿಗೇ ಸೇರಿದೆ. ಅವನು ತನ್ನ ದಾಸರ ಪೈಕಿ ತಾನಿಚ್ಛಿಸಿದವರನ್ನು ಅದರ ಉತ್ತರಾಧಿಕಾರಿಗಳಾಗಿ ಮಾಡುತ್ತಾನೆ. ಅಂತಿಮ ವಿಜಯವು ಸತ್ಯನಿಷ್ಠರಿಗೇ ಸೇರಿದೆ. 7:129. ಅವರು (ಮೂಸಾರ ಜನಾಂಗದವರು) ಹೇಳಿದರು; ನೀವು ನಮ್ಮ ಬಳಿಗೆ ಬರುವ ಮುನ್ನವೂ ನೀವು ನಮ್ಮ ಬಳಿಗೆ ಬಂದ ಬಳಿಕವೂ ನಮ್ಮನ್ನು ಸತಾಯಿಸಲಾಯಿತು. ಅವರು (ಮೂಸಾ) ಹೇಳಿದರು; ಬಹುಬೇಗನೇ, ನಿಮ್ಮೊಡೆಯನು ನಿಮ್ಮ ಶತ್ರುವನ್ನು ನಾಶಪಡಿಸಿ ಭೂಮಿಯಲ್ಲಿ ನಿಮ್ಮನ್ನು ಉತ್ತರಾಧಿಕಾರಿಗಳಾಗಿ ಮಾಡುವನು ಮತ್ತು ನೀವು ಏನೆಲ್ಲ ಮಾಡುವಿರಿ ಎಂಬುದನ್ನು ನೋಡುವನು. 7:130. ನಾವು ಫಿರ್‌ಔನನ ಜನಾಂಗವನ್ನು ಸತತ ಬರಗಾಲ ಹಾಗೂ ಬೆಳೆಗಳ ನಷ್ಟದಲ್ಲಿ ಸಿಲುಕಿಸಿದೆವು – ಅವರು ಪಾಠಕಲಿಯಬೇಕೆಂದು.

ಮಕ್ಕಾ ಕೂಡ ಯಹೂದಿಯರದ್ದು ಎನ್ನುತ್ತದೆ ಖುರಾನ್ ಅದನ್ನು ಕಟ್ಟಿದ್ದು ಅಬ್ರಹಾಮ್ ಅನ್ನುತ್ತದೆ, ಅಬ್ರಹಾಮರು ಮುಸ್ಲಿಮರಾಗಿದ್ದರು– ಆದರು ಅನ್ನುವ ದ್ವಂದ್ವ ಇದೆ.

ಖುರಾನ್ 2: 125. ನಾವು ಆ ಭವನ (ಕಅಬ)ವನ್ನು ಜನರಿಗಾಗಿ, ಪರಸ್ಪರ ಒಟ್ಟು ಸೇರುವ ಹಾಗೂ ಸುರಕ್ಷಿತ ಸ್ಥಳವಾಗಿ ಮಾಡಿದೆವು. ಇಬ್ರಾಹೀಮರು ನಿಂತ ಸ್ಥಾನವನ್ನು ನೀವು ನಮಾಝಿನ ಸ್ಥಳವಾಗಿ ಬಳಸಿರಿ (ಎಂದು ನಾವು ಆದೇಶಿಸಿದ್ದೆವು). ಮತ್ತು ತವಾಫ್ (ಪ್ರದಕ್ಷಿಣೆ) ಮಾಡುವವರು, 'ಇಅ್ತಿಕಾಫ್' ಮಾಡುವವರು, ಬಾಗುವವರು ಹಾಗೂ ಸಾಷ್ಟಾಂಗವೆರಗುವವರಿಗಾಗಿ ನನ್ನ ಭವನವನ್ನು ನಿರ್ಮಲವಾಗಿಡಬೇಕೆಂದು ನಾವು ಇಬ್ರಾಹೀಮ್ ಮತ್ತು ಇಸ್ಮಾಈಲರಿಗೆ ಆದೇಶ ನೀಡಿದ್ದೆವು. 2:127.ಇಬ್ರಾಹೀಮರು ಹಾಗೂ ಇಸ್ಮಾಈಲರು ಆ ಭವನದ ಗೋಡೆಗಳನ್ನು ಎತ್ತರಿಸುತ್ತಾ (ಹೀಗೆಂದು ಪ್ರಾರ್ಥಿಸಿದರು;)– "ನಮ್ಮೊಡೆಯಾ (ಈ ಸೇವೆಯನ್ನು) ನಮ್ಮಿಂದ ಸ್ವೀಕರಿಸು. ಖಂಡಿತವಾಗಿಯೂ ನೀನು ಎಲ್ಲವನ್ನೂ ಕೇಳುವವನು ಮತ್ತು ಬಲ್ಲವನು." 2:128. "ನಮ್ಮೊಡೆಯಾ, ನಮ್ಮಿಬ್ಬರನ್ನೂ ಮುಸ್ಲಿಮರಾಗಿಸು ಮತ್ತು ನಮ್ಮ ಸಂತತಿಗಳಲ್ಲಿ ಒಂದು ಮುಸ್ಲಿಮ್ (ನಿನಗೆ ಶರಣಾದ) ಸಮುದಾಯವನ್ನು ಬೆಳೆಸು ಹಾಗೂ ನಮಗೆ ನಮ್ಮ ಆರಾಧನಾ ವಿಧಾನಗಳನ್ನು ಕಲಿಸಿಕೊಡು ಮತ್ತು ನಮ್ಮ ಪಶ್ಚಾತ್ತಾಪವನ್ನು ಸ್ವೀಕರಿಸು. ನೀನು ಪಶ್ಚಾತ್ತಾಪ ಸ್ವೀಕರಿಸುವವನೂ ಕರುಣಾಳುವೂ ಆಗಿರುವೆ." 2:129. "ನಮ್ಮೊಡೆಯಾ, ಅವರ ನಡುವೆ, ಅವರಿಗೆ ನಿನ್ನ ವಚನಗಳನ್ನು ಓದಿ ಕೇಳಿಸುವ ಹಾಗೂ ಅವರಿಗೆ ಗ್ರಂಥವನ್ನೂ ಯುಕ್ತಿಯನ್ನೂ ಕಲಿಸಿಕೊಡುವ ಮತ್ತು ಅವರನ್ನು ಸಂಸ್ಕರಿಸುವ ಒಬ್ಬ ದೂತನನ್ನು ಅವರೊಳಗಿಂದಲೇ ಬೆಳೆಸು. ಖಂಡಿತವಾಗಿಯೂ ನೀನು ಅತ್ಯಂತ ಸಮರ್ಥನೂ ಯುಕ್ತಿವಂತನೂ ಆಗಿರುವೆ." 2:130. ಸ್ವತಃ ತನ್ನನ್ನೇ ವಂಚಿಸುವವನ ಹೊರತು ಬೇರೆ ಯಾರು ತಾನೇ ಇಬ್ರಾಹೀಮರ ಮಾರ್ಗದಿಂದ ವಿಮುಖನಾಗಬಲ್ಲನು? ನಾವು ಈ ಲೋಕದಲ್ಲೇ ಅವರನ್ನು ಆರಿಸಿಕೊಂಡಿದ್ದೆವು. ಪರಲೋಕದಲ್ಲಿ ಅವರು ಖಂಡಿತ ಸಜ್ಜನರ ಸಾಲಲ್ಲಿರುವರು. 2:131. ಅವರ ಒಡೆಯನು ಅವರೊಡನೆ "ಮುಸ್ಲಿಮನಾಗು" (ಶರಣಾಗು) ಎಂದಾಗಲೇ ಅವರು "ನಾನು ವಿಶ್ವದೊಡೆಯನಿಗೆ ಮುಸ್ಲಿಮನಾದೆ (ಶರಣಾದೆ)" ಎಂದರು. 2:132. ಇದೇ ಮಾರ್ಗವನ್ನು ಇಬ್ರಾಹೀಮರು ತಮ್ಮ ಸಂತತಿಗೆ ಬೋಧಿಸಿದ್ದರು. ಮತ್ತು ಯಅ್ಕೂಬರೂ ಅಷ್ಟೇ. "ನನ್ನ ಪುತ್ರರೇ, ಅಲ್ಲಾಹನು ನಿಮಗಾಗಿ ಇದೇ ಧರ್ಮವನ್ನು ಆರಿಸಿದ್ದಾನೆ. ನೀವಿನ್ನು ಮುಸ್ಲಿಮರಲ್ಲದ ಸ್ಥಿತಿಯಲ್ಲಿ ಸಾಯಬಾರದು" (ಎಂದು ಅವರು ಬೋಧಿಸಿದ್ದರು). 2:133. ಯಅ್ಕೂಬರು ಮರಣದ

ಅಂಚಿನಲ್ಲಿದ್ದಾಗ ನೀವು ನೋಡಿದ್ದಿರಾ? ಅವರು ತಮ್ಮ ಪುತ್ರರೊಡನೆ "ನನ್ನ (ಮರಣದ) ಬಳಿಕ ನೀವು ಯಾರನ್ನು ಆರಾಧಿಸುವಿರಿ?" ಎಂದು ಕೇಳಿದಾಗ ಅವರು, ( ಪುತ್ರರು) "ನಿಮ್ಮ ಒಡೆಯನೂ, ನಿಮ್ಮ ಪೂರ್ವಜರಾದ ಇಬ್ರಾಹೀಮ್, ಇಸ್ಮಾಈಲ್ ಮತ್ತು ಇಸ್ಹಾಕ್‌ರ ಒಡೆಯನೂ ಆಗಿರುವ ಆ ಏಕ ಮಾತ್ರ ಆರಾಧ್ಯನನ್ನು ಮಾತ್ರ ಆರಾಧಿಸುವೆವು ಮತ್ತು ನಾವು ಅವನಿಗೇ ಶರಣಾಗಿರುವೆವು" ಎಂದರು.

ಖುರಾನ್ 2:135. "ನೀವು ಯಹೂದಿಗಳಾಗಿರಿ ಅಥವಾ ಕ್ರೈಸ್ತರಾಗಿರಿ, (ಆಗ ಮಾತ್ರ) ನೀವು ಸನ್ಮಾರ್ಗ ಪಡೆದವರಾಗುವಿರಿ" ಎಂದು ಅವರು (ಮುಸ್ಲಿಮೇತರರು) ಹೇಳುತ್ತಾರೆ. ಹೇಳಿರಿ; "ನಿಜವಾಗಿ ಸತ್ಯದಲ್ಲಿ ಏಕಾಗ್ರಚಿತ್ತರಾಗಿದ್ದ ಇಬ್ರಾಹೀಮರ ಮಾರ್ಗವೇ (ಸನ್ಮಾರ್ಗವಾಗಿದೆ). ಅವರಂತೂ 'ಮುಶ್ರಿಕ್' (ಬಹುದೇವಾರಾಧಕ) ಆಗಿರಲಿಲ್ಲ." 2:136. "ಅಲ್ಲಾಹನನ್ನು, ಅವನು ನಮಗೆ ಕಳಿಸಿಕೊಟ್ಟಿರುವ ಸಂದೇಶವನ್ನು ಮತ್ತು ಅವನು ಇಬ್ರಾಹೀಮ್, ಇಸ್ಮಾಯಿಲ್, ಇಸ್ಹಾಕ್, ಯಅ್ಕೂಬ್ ಹಾಗೂ ಅವರ (ಯಅ್ಕೂಬ್‌ರ) ಸಂತತಿಗಳಿಗೆ ಕಳಿಸಿಕೊಟ್ಟಿದ್ದ ಸಂದೇಶವನ್ನು ಮತ್ತು ಮೂಸಾ ಹಾಗೂ ಈಸಾರಿಗೆ ಮತ್ತು ಇತರೆಲ್ಲ ಪ್ರವಾದಿಗಳಿಗೆ ಅವರ ಒಡೆಯನ ಕಡೆಯಿಂದ ಏನನ್ನು ನೀಡಲಾಗಿತ್ತೋ ಅದನ್ನು ನಾವು ನಂಬಿದ್ದೇವೆ. ನಾವು ಅವರ ಪೈಕಿ ಯಾರ ನಡುವೆಯೂ ತಾರತಮ್ಯ ಮಾಡುವುದಿಲ್ಲ ಮತ್ತು ನಾವು ಅವನಿಗೆ 'ಮುಸ್ಲಿಮ್' ಆಗಿರುವೆವು (ಶರಣಾಗಿರುವೆವು)"ಎಂದು ನೀವು ಘೋಷಿಸಿರಿ.

ಅಂದೇ ಇದ್ದ ಆರೋಪಕ್ಕೆ ಖುರಾನಿನ ಉತ್ತರ:- ಖುರಾನ್ 2: 140. "ಇಬ್ರಾಹೀಮ್, ಇಸ್ಮಾಈಲ್, ಇಸ್ಹಾಕ್, ಯಅ್ಕೂಬ್ ಮತ್ತು ಅವರ ಸಂತತಿಗಳೆಲ್ಲಾ ಯಹೂದಿಗಳು ಅಥವಾ ಕ್ರೈಸ್ತರಾಗಿದ್ದರೆಂದು ನೀವು ಹೇಳುತ್ತೀರಾ? ಹೇಳಿರಿ; ಹೆಚ್ಚು ತಿಳುವಳಿಕೆ ಇರುವುದು ನಿಮಗೋ ಅಲ್ಲಾಹನಿಗೋ? ತನ್ನ ಬಳಿ ಇರುವ, ಅಲ್ಲಾಹನ ಕಡೆಯಿಂದ ಬಂದ ಪುರಾವೆಯನ್ನು ಬಚ್ಚಿಡುವವನಿಗಿಂತ ದೊಡ್ಡ ಅಕ್ರಮಿ ಯಾರಿದ್ದಾನೆ? ನಿಮ್ಮ ಕೃತ್ಯಗಳ ಕುರಿತು ಅಲ್ಲಾಹನು ಅಜ್ಞನಾಗಿಲ್ಲ.

ಮೂಲ ಒಂದೇ ಸಮುದಾಯ ಅಂತ ಒಪ್ಪುತ್ತೆ ಖುರಾನ್ (ಅಂದರೆ ಯಹೂದಿ ಕ್ರೈಸ್ತ ಮುಸ್ಲಿಮ್ ಒಂದೇ ಸಮುದಾಯ ಅಂತ) ಖುರಾನ್ 2: 213. (ಮೂಲತಃ) ಜನರೆಲ್ಲಾ ಒಂದೇ ಸಮುದಾಯವಾಗಿದ್ದರು. ತರುವಾಯ ಅಲ್ಲಾಹನು, ಶುಭವಾರ್ತೆ ನೀಡುವ ಹಾಗೂ ಎಚ್ಚರಿಸುವ ದೂತರನ್ನು ಕಳುಹಿಸಿದನು ಮತ್ತು ಜನರು ಪರಸ್ಪರ ಭಿನ್ನಾಭಿಪ್ರಾಯ ತಾಳಿದ್ದ ವಿಷಯಗಳಲ್ಲಿ ಅವರ ನಡುವೆ ನ್ಯಾಯ ತೀರ್ಮಾನ ಮಾಡಲೆಂದು ಅವರ ಜೊತೆ, ಸತ್ಯವಿರುವ ಗ್ರಂಥವನ್ನಿಳಿಸಿದನು. ಆದರೆ ಯಾರಿಗೆ

ಗ್ರಂಥ ನೀಡಲಾಗಿತ್ತೋ ಅದೇ ಜನರು, ತಮ್ಮ ಬಳಿಗೆ ಸ್ಪಷ್ಟ ಪುರಾವೆಗಳು ಬಂದ ಬಳಿಕ, ಪರಸ್ಪರ ವಿದ್ವೇಷದ ಕಾರಣ, ಆ ಕುರಿತು ಭಿನ್ನಾಭಿಪ್ರಾಯ ತಾಳಿದರು. ಕೊನೆಗೆ ಅಲ್ಲಾಹನು ವಿಶ್ವಾಸಿಗಳಿಗೆ, ಸತ್ಯದ ಕುರಿತಾಗಿ ಅವರು ಭಿನ್ನಾಭಿಪ್ರಾಯ ತಾಳಿದ್ದ ವಿಷಯಗಳಲ್ಲಿ ತನ್ನಿಚ್ಛೆಯಿಂದ ಮಾರ್ಗದರ್ಶನ ನೀಡಿದನು. ಅಲ್ಲಾಹನು ತಾನಿಚ್ಛಿಸಿದವರಿಗೆ, ನೇರ ಮಾರ್ಗವನ್ನು ತೋರಿಸಿ ಕೊಡುತ್ತಾನೆ. 9: 31. ಅವರು ಅಲ್ಲಾಹನ ಹೊರತಾಗಿ, ತಮ್ಮ ವಿದ್ವಾಂಸರನ್ನು, ಸನ್ಯಾಸಿಗಳನ್ನು ಮತ್ತು ಮರ್ಯಮರ ಪುತ್ರ ಮಸೀಹರನ್ನು ದೇವರಾಗಿಸಿಕೊಂಡಿದ್ದಾರೆ. ನಿಜವಾಗಿ ಅವರಿಗೆ, ಒಬ್ಬ ದೇವರ ಹೊರತು ಬೇರೆ ಯಾರನ್ನೂ ಪೂಜಿಸಬಾರದೆಂದು ಆದೇಶಿಸಲಾಗಿದೆ. ಅವನ ಹೊರತು ಬೇರೆ ಯಾರೂ ಪೂಜಾರ್ಹರಲ್ಲ. ಅವರು ಪಾಲುಗೊಳಿಸುವ ಎಲ್ಲದರಿಂದ ಅವನು ಸಂಪೂರ್ಣ ಮುಕ್ತನು.

**ಯಹೂದಿಗಳಲ್ಲಿ ದೇವರ ಹೆಸರು ಏನಿದೆ ನೋಡೋಣ**

ಯಹೂದಿಗಳ ಪವಿತ್ರ ಗ್ರಂಥ ಟೋರಾ/ಟನಕ್/ ತೌರತ್/ ಇದರಲ್ಲಿ ಮೊದಲನೆಯದು ಆಧಿಕಾಂಡ (ಜೆನಿಸಿಸ್) ಎರಡನೆಯದು ವಿಮೋಚನಾಕಾಂಡ (ಎಕ್ಸೋಡಸ್) ಮೂರನೆಯದು ಯಾಜಕಾಂಡ (ಲೆವಿಟಿಕಸ್) ನಂತರ ಅರಣ್ಯಕಾಂಡ (ನಂಬರ್ಸ್), ಧರ್ಮೋಪದೇಶಕಾಂಡ (ಡ್ಯುಟೆರೊನಮಿ), ಯಹೋಶುವನು (ಜೊಶುಹ), ನ್ಯಾಯಸ್ಥಾಪಕರು (ಜಡ್ಜಸ್) ಇತ್ಯಾದಿ ಗ್ರಂಥಗಳು ಬರುತ್ತವೆ. ಯಹೂದಿಯರ ಪ್ರಕಾರ ಮತ್ತು ಖುರಾನ್ ಉಲ್ಲೇಕದಂತೆ ಮೊದಲಿಗೆ ದೇವರು ಆಡಮ್ ಅನ್ನು ಸೃಷ್ಟಿ ಮಾಡಿದ್ದು ಎನ್ನುತ್ತಾರೆ. ಟೋರಾದ ಮೊದಲನೇ ಗ್ರಂಥ ಆಧಿಕಾಂಡದ ಮೊದಲನೇ ಅಧ್ಯಾಯದಲ್ಲಿ 1: 1 ರಲ್ಲಿ "ದೇವರು' ಎನ್ನುವುದಕ್ಕೆ 'ಇಲೋಹಿಮ್' (ĕlōhim ) ಎಂದು ಯಹೂದಿಯರ ಹೀಬ್ರು ಬಾಷೆಯಲ್ಲಿ ಉಪಯೋಗಿಸಲಾಗಿದೆ.[27] ನಂತರ 2:5 ರಲ್ಲಿ ಯೆಹೋವನಾದ (yəhwâ) (yihəyeh) ದೇವರು ಎಂದು ಉಲ್ಲೇಕಿಸಲಾಗಿದೆ. ಆಡಮ್ ಕಾಲದಲ್ಲಿ ದೇವರನ್ನು ಯಾವ ಹೆಸರಿನಿಂದ ಉಲ್ಲೇಕಿತವಾಗಿತ್ತು ಎನ್ನುವುದಕ್ಕೆ ಆಧಿಕಾಂಡ 3:21 ರಲ್ಲಿ ಯೆಹೋವ ದೇವರು ಆದಾಮನಿಗೂ ಅವನ ಹೆಂಡತಿಗೂ ಚರ್ಮದ ಅಂಗಿಗಳನ್ನು ಮಾಡಿ ತೊಡಿಸಿದನು. 4:26 ರಲ್ಲಿ ಜನರು, "ಯೆಹೋವ" ಎಂಬ ಹೆಸರನ್ನು ಹೇಳಿಕೊಂಡು ಆರಾಧಿಸುವುದಕ್ಕೆ ಅಂದಿನಿಂದ ಪ್ರಾರಂಭಿಸಿದರು., ನಂತರ ಬರುವ ಅದಾಮನ ವಂಶಜ ಪ್ರವಾದಿ ನೋಹನ ಕಾಲದಲ್ಲೂ ದೇವರ ಹೆಸರು ಯೆಹೋವ ಎಂದೆ ಉಲ್ಲೇಕವಾಗಿದೆ. ನಂತರ ಬರುವ ಅಬ್ರಹಾಮರ ಚರಿತ್ರೆಯಲ್ಲಿ ಆಧಿಕಾಂಡ 17:1

---

[27] http://www.sacred-texts.com/bib/tan/gen001.htm#001

ಅಬ್ರಾಮನು ತೊಂಭತೊಂಭತ್ತು ವರ್ಷದವನಾದಾಗ ಯೆಹೋವನು ಅವನಿಗೆ ದರ್ಶನದಲ್ಲಿ, "ನಾನು ಸರ್ವಶಕ್ತನಾದ ದೇವರು; ನನ್ನೆದುರಿನಲ್ಲಿ ದೋಷ ಇಲ್ಲದವನಾಗಿ ನಡೆದುಕೊ. 17:2 ನಾನು ನಿನ್ನ ಸಂಗಡ ಒಡಂಬಡಿಕೆ ಮಾಡಿಕೊಳ್ಳುತ್ತೇನೆ; ಅತ್ಯಧಿಕವಾದ ಸಂತತಿಯನ್ನು ನಿನಗೆ ಕೊಡುವೆನು" ಎಂದನು. ನಂತರದ ಪ್ರವಾದಿ ಮೋಸೆಸ್/ಮೋಶೆ ಇವರ ದೇವರೂ ಯೆಹೋವನೇ ಆಗಿದ್ದಾನೆ ವಿಮೋಚನಾಕಾಂಡ 3: 15 ದೇವರು ಪುನಃ ಮೋಶೆಗೆ ಹೇಳಿದ್ದೇನೆಂದರೆ, "ನೀನು ಇಸ್ರಾಯೇಲರಿಗೆ, ನಿಮ್ಮ ಪಿತೃಗಳಾದ ಅಬ್ರಹಾಮ್, ಇಸಾಕ್, ಯಾಕೋಬರ ದೇವರಾಗಿರುವ ಯೆಹೋವನು ನನ್ನನ್ನು ನಿಮ್ಮ ಬಳಿಗೆ ಕಳುಹಿಸಿದ್ದಾನೆ" ಎಂದು ಹೇಳಬೇಕು. ಇದು ಸದಾಕಾಲಕ್ಕೂ ಇರುವ ನನ್ನ ಹೆಸರು. ಇದು ತಲಾಂತರಕ್ಕೂ ನನ್ನನ್ನು ಸ್ಮರಿಸಬೇಕಾದ ನಾಮ. ಅಲ್ಲಿಗೆ ಖುರಾನ್ ಪ್ರಕಾರ ಅಂಗೀಕಾರವಾಗಿರುವ ಅದಾಮ್/ನೋಹ/ಅಬ್ರಹಾಮ್/ಮೋಶೆ ಇವರ ದೇವರು ಅಲ್ಲಾಹನಾಗಿದ್ದನು ಎಂಬುದರಲ್ಲಿ ಒಂದು ಅಂಶ ಗಮನಿಸಿ, ಯಹೂದರ ಪುಸ್ತಕದಲ್ಲಿ ದೇವರು ಎಂದರೆ ಎಲೋಹಿಮ್(ಇಲೋಹಿಮ್) ಅನ್ನುತ್ತಾರೆ, ಅದೇ ಪದಗಳ ಪಕ್ಕದಲ್ಲಿ ಇಲೋಹಿಮ್ ಆದ ಯೆಹೋವನು ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ಹಾಗಾಗಿ ಖುರಾನ್ ಹೇಳುತ್ತಿರುವಂತೆ ಯಹೂದಿಗಳ ದೇವರ ಹೆಸರು ಅಲ್ಲಾಹ ಆಗಿರಲಿಲ್ಲ ಅದು ಯೆಹೋವ ಆಗಿತ್ತು. ಇತ್ತೀಚಿನ ಅನುವಾದಗಳಲ್ಲಿ ಯೆಹೋವ ಎಂದರೆ ಕರ್ತನು ಎಂದು ಅನುವಾದಿಸುತ್ತಿದ್ದಾರೆ.

**ಯಹೂದ್ಯರಲ್ಲಿನ ಅಂದಿನ ಅನ್ಯ ದೇವರುಗಳ ಬಗ್ಗೆ ಅಸಹಿಷ್ಣುತೆ ಖುರಾನ್ ಬಚ್ಚಿ ಇಳಿಸಿದಂತೆ ಇದೆ:-**

ಅಂದಿಗೇ ಯಾಕೂಬನ ಕಾಲದಲ್ಲಿ ಅನ್ಯದೇವರ ಹೊರಹಾಕುವ ಬಗ್ಗೆ ಅವನ ಕುಟುಂಬಕ್ಕೆ ಹೇಳಿದ ಸಾಲು ಆಧಿಕಾಂಡ 35:2 ರಲ್ಲಿ ಇದೆ, ಯಾಕೋಬನಿಗೆ ದೇವರು ಇಸ್ರಾಯೆಲ್ ಎಂದು ಹೆಸರು ಕೊಟ್ಟದ್ದು ಎಂದು ಆಧಿಕಾಂಡ 35:10. ನಂತರ ಮೋಶೆಯ ಕಾಲದಲ್ಲಿ ಅನ್ಯ ದೇವರುಗಳ ಬಗ್ಗೆ ಅಸಹಿಷ್ಣುತೆ ಬೋಧನೆ ಪ್ರಾರಂಬವಾಗುತ್ತದೆ. ವಿಮೋಚನಾಕಾಂಡ 20:22 ಯೆಹೋವನು ಮೋಶೆಗೆ ಹೀಗೆಂದನು, "ನೀನು ಇಸ್ರಾಯೇಲರಿಗೆ ಹೇಳಬೇಕಾದದ್ದೇನೆಂದರೆ; 'ನಾನು ಆಕಾಶದಿಂದ ನಿಮ್ಮ ಸಂಗಡ ಮಾತನಾಡಿದ್ದನ್ನು ನೀವು ನೋಡಿದ್ದೀರಿ.

ವಿಮೋಚನಾಕಾಂಡ 20:23 ನೀವು ಬೆಳ್ಳಿ ಬಂಗಾರಗಳ ದೇವರುಗಳನ್ನು ಮಾಡಿಕೊಳ್ಳಬೇಡಿರಿ. ವಿಮೋಚನಾಕಾಂಡ 20:24 ನೀವು ನನ್ನ ಯಜ್ಞವೇದಿಯನ್ನು ಮಣ್ಣಿನಿಂದ ಮಾಡಬೇಕು. ನೀವು ಅದರ ಮೇಲೆ ನಿಮ್ಮ ಸರ್ವಾಂಗಹೋಮ,

ಸಮಾಧಾನಯಜ್ಞ, ಕುರಿದನಗಳನ್ನು ಸಮರ್ಪಿಸಬೇಕು. ನಾನು ನನ್ನ ಹೆಸರನ್ನು ಗೌರವಿಸುವಂತೆ ಮಾಡುವ ಎಲ್ಲಾ ಸ್ಥಳಗಳಲ್ಲಿಯೂ ನಾನು ನಿಮ್ಮ ಬಳಿಗೆ ಬಂದು ನಿಮ್ಮನ್ನು ಆಶೀರ್ವದಿಸುವೆನು. ವಿಮೋಚನಾಕಾಂಡ 20:25 ನೀವು ನನಗಾಗಿ ಕಲ್ಲಿನಿಂದ ಯಜ್ಞವೇದಿಯನ್ನು ಕಟ್ಟುವುದಾದರೆ, ಅದನ್ನು ಕೆತ್ತಿರುವ ಕಲ್ಲುಗಳಿಂದ ಕಟ್ಟಬಾರದು. ಏಕೆಂದರೆ ಉಳಿ, ಮುಂತಾದುದನ್ನು ಅದರ ಮೇಲೆ ಉಪಯೋಗಿಸಿದರೆ ಅದು ಅಪವಿತ್ರವಾಗುವುದು. ವಿಮೋಚನಾಕಾಂಡ 20:26 ಅದಲ್ಲದೆ ನನ್ನ ಯಜ್ಞವೇದಿಯನ್ನು ನಿಮ್ಮ ನಗ್ನತೆಯು ಕಾಣುವ ಹಾಗೆ ಮೆಟ್ಟಲುಗಳನ್ನು ಬಳಸಿ ಅದನ್ನು ಹತ್ತಬಾರದು' "ಎಂದು ಆಜ್ಞಾಪಿದನು. ಧರ್ಮೋಪದೇಶಕಾಂಡ 4:23 ಎಚ್ಚರಿಕೆಯಾಗಿರಿ, ನಿಮ್ಮ ದೇವರಾದ ಯೆಹೋವನು ನಿಮ್ಮ ಸಂಗಡ ಮಾಡಿದ ನಿಬಂಧನೆಯನ್ನು ನೀವು ಮರೆತು, ಪೂಜಿಸಬೇಡಿರೆಂದು ಆತನು ನಿಷೇಧಿಸಿದ ಯಾವ ವಸ್ತುವಿನ ವಿಗ್ರಹವನ್ನೂ ಮಾಡಿಕೊಳ್ಳಬಾರದು. ಧರ್ಮೋಪದೇಶಕಾಂಡ 4:24 ನಿಮ್ಮ ದೇವರಾದ ಯೆಹೋವನು ತನಗೆ ಸಲ್ಲಬೇಕಾದ ಗೌರವವನ್ನು ಮತ್ತೊಬ್ಬನಿಗೆ ಸಲ್ಲಗೊಡಿಸದೆ ಉರಿಯುವ ಬೆಂಕಿಯಂತೆ ದ್ರೋಹಿಗಳನ್ನು ದಹಿಸಿಬಿಡುವವನಾಗಿದ್ದಾನೆಂದು ತಿಳಿಯಿರಿ. ಧರ್ಮೋಪದೇಶಕಾಂಡ 29:18 "ಎಚ್ಚರಿಕೆಯಿಂದಿರಿ, ನಮ್ಮ ದೇವರಾದ ಯೆಹೋವನನ್ನು ಬಿಟ್ಟು ಆ ಜನಾಂಗಗಳ ದೇವರುಗಳನ್ನು ಸೇವಿಸುವ ಯಾವ ಕುಲವಾಗಲಿ, ಕುಟುಂಬವಾಗಲಿ, ಸ್ತ್ರೀಯರಾಗಲಿ, ಪುರುಷರಾಗಲಿ ನಿಮ್ಮಲ್ಲಿ ಇರಲೇ ಬಾರದು; ನಿಮ್ಮಲ್ಲಿ ಯಾವ ವಿಷದ ಬಳ್ಳಿಯ ಬೇರೂ ಇರಬಾರದು. ಧರ್ಮೋಪದೇಶಕಾಂಡ 6: 14 ಸುತ್ತಮುತ್ತಲಿರುವ ಜನಾಂಗಗಳು ಸೇವಿಸುವ ದೇವರುಗಳನ್ನು ನೀವು ಆರಾಧಿಸಬಾರದು. 15 ನಿಮ್ಮ ಮಧ್ಯದಲ್ಲಿರುವ ನಿಮ್ಮ ದೇವರಾದ ಯೆಹೋವನು ತನಗೆ ಸಲ್ಲಬೇಕಾದ ಗೌರವವನ್ನು ಇನ್ನೊಬ್ಬನಿಗೆ ಸಲ್ಲಗೊಡಿಸುವುದಿಲ್ಲ, ಆತನು ನಿಮ್ಮ ಮೇಲೆ ಕೋಪಗೊಂಡರೆ ನಿಮ್ಮನ್ನು ಭೂಮಿಯ ಮೇಲೆ ಉಳಿಯದಂತೆ ನಾಶಮಾಡಾನು. ಧರ್ಮೋಪದೇಶಕಾಂಡ 7: 16 ನಿಮ್ಮ ದೇವರಾದ ಯೆಹೋವನು ನಿಮ್ಮಿಂದ ಪರಾಜಯ ಹೊಂದುವ ಜನಾಂಗಗಳನ್ನೆಲ್ಲಾ ನೀವು ಕನಿಕರಿಸದೆ ನಾಶಮಾಡಬೇಕು. ಅವರ ದೇವರುಗಳನ್ನು ಪೂಜಿಸಲೇಬಾರದು; ಪೂಜಿಸಿದರೆ ಅವು ನಿಮ್ಮ ಜೀವಕ್ಕೆ ಉರುಲಾಗುವವು. ಧರ್ಮೋಪದೇಶಕಾಂಡ 8:19 ನೀವು ನಿಮ್ಮ ದೇವರಾದ ಯೆಹೋವನನ್ನು ಮರೆತು, ಇತರ ದೇವರುಗಳನ್ನು ಅವಲಂಬಿಸಿ ಪೂಜಿಸಿದರೆ ನೀವು ತಪ್ಪದೆ ನಾಶವಾಗಿ ಹೋಗುವಿರೆಂದು ನಿಮ್ಮನ್ನು ಈಗ ಖಂಡಿತವಾಗಿ ಎಚ್ಚರಿಸುತ್ತೇನೆ. ಧರ್ಮೋಪದೇಶಕಾಂಡ 11:16 ಆದರೆ ನೀವು ಎಚ್ಚರದಿಂದಿರಬೇಕು; ನಿಮ್ಮ ಹೃದಯವು ಮರುಳುಗೊಂಡು ಯೆಹೋವನು ಹೇಳಿದ

ಮಾರ್ಗವನ್ನು ಬಿಟ್ಟು, ಇತರ ದೇವರುಗಳನ್ನು ಅವಲಂಬಿಸಿ ಪೂಜಿಸಿದರೆ, ಧರ್ಮೋಪದೇಶಕಾಂಡ 11:17 ಆತನು ನಿಮ್ಮ ಮೇಲೆ ಸಿಟ್ಟುಗೊಂಡು ಮಳೆಬಾರದಂತೆ ಆಕಾಶವನ್ನು ಮುಚ್ಚಿಬಿಟ್ಟಾನು; ಆಗ ಭೂಮಿಯಲ್ಲಿ ಬೆಳೆಯಾಗದೆ ಯೆಹೋವನು ನಿಮಗೆ ಕೊಡುವ ಆ ಉತ್ತಮ ದೇಶದಲ್ಲಿ ನೀವು ಉಳಿಯದೆ ಬೇಗ ನಾಶವಾಗಿ ಹೋಗುವಿರಿ. ಧರ್ಮೋಪದೇಶಕಾಂಡ 11:28 ಈ ಆಜ್ಞೆಗಳಿಗೆ ಅವಿಧೇಯರಾಗಿ, ನಾನು ಈಗ ಬೋಧಿಸುವ ಮಾರ್ಗವನ್ನು ಬಿಟ್ಟು ನಿಮಗೆ ಗೊತ್ತಿಲ್ಲದ ಇತರ ದೇವರುಗಳನ್ನು ಅವಲಂಬಿಸಿದರೆ ಶಾಪವೂ ನಿಮಗುಂಟಾಗುವವು. ಧರ್ಮೋಪದೇಶಕಾಂಡ 12: 1 ನಿಮ್ಮ ಪಿತೃಗಳ ದೇವರಾದ ಯೆಹೋವನು ನಿಮಗೆ ಸ್ವದೇಶವಾಗುವುದಕ್ಕೆ ಕೊಡುವ ದೇಶದಲ್ಲಿ ನೀವು ಭೂಮಿಯ ಮೇಲೆ ವಾಸಿಸುವ ಎಲ್ಲಾ ದಿನಗಳಲ್ಲಿ ಅನುಸರಿಸಬೇಕಾದ ಆಜ್ಞಾವಿಧಿಗಳು ಇವೇ: ಧರ್ಮೋಪದೇಶಕಾಂಡ 12: 2 ನೀವು ಸ್ವಾಧೀನಮಾಡಿಕೊಳ್ಳುವ ದೇಶದ ಜನಾಂಗಗಳು ದೊಡ್ಡ ಬೆಟ್ಟಗಳ ಮೇಲೆಯೂ, ದಿಣ್ಣೆಗಳ ಮೇಲೆಯೂ ಹರಡಿಕೊಂಡು, ಮರಗಳ ಕೆಳಗೂ ತಮ್ಮ ದೇವರುಗಳನ್ನು ಆರಾಧಿಸುತ್ತಾರಷ್ಟೆ; ಆ ಸ್ಥಳಗಳನ್ನೆಲ್ಲಾ ನೀವು ತಪ್ಪದೆ ನಾಶಮಾಡಬೇಕು. ಧರ್ಮೋಪದೇಶಕಾಂಡ 12: 3 ಅವರ ಬಲಿಪೀಠಗಳನ್ನು ಕೆಡವಿ, ಅದರ ಪವಿತ್ರವಾದ ಕಲ್ಲುಕಂಬಗಳನ್ನು ಒಡೆದು, ಅಶೇರವೆಂಬ ವಿಗ್ರಹಸ್ತಂಭಗಳನ್ನು ಸುಟ್ಟು, ಅವರ ದೇವತಾಪ್ರತಿಮೆಗಳನ್ನು ಕಡಿದುಬಿಟ್ಟು ಆ ದೇವರುಗಳ ಹೆಸರೇ ಉಳಿಯದಂತೆ ಮಾಡಬೇಕು. ಧರ್ಮೋಪದೇಶಕಾಂಡ 12: 29 ನೀವು ಸ್ವಾಧೀನಮಾಡಿಕೊಳ್ಳುವುದಕ್ಕೆ ಹೋಗುವ ದೇಶದ ಜನಾಂಗಗಳನ್ನು ನಿಮ್ಮ ದೇವರಾದ ಯೆಹೋವನು ನಿಮ್ಮ ಮುಂದೆ ನಾಶಮಾಡಿದ ಮೇಲೆ ನೀವು ಅವರ ದೇಶವನ್ನು ವಶಮಾಡಿಕೊಂಡು ಅದರಲ್ಲಿ ವಾಸವಾಗಿರುವಾಗ ಧರ್ಮೋಪದೇಶಕಾಂಡ 12: 30 ನೀವು ಭ್ರಮೆಗೊಂಡು ನಿಮ್ಮ ಎದುರಿನಿಂದ ನಾಶವಾಗಿ ಹೋದವರ ದುಷ್ಟಪದ್ಧತಿಗಳನ್ನು ಅನುಸರಿಸಬಾರದು. ನೀವು, ಈ ದೇಶದ ಜನರು ತಮ್ಮ ದೇವರುಗಳನ್ನು ಹೇಗೆ ಸೇವಿಸುತ್ತಿದ್ದರೋ ಹಾಗೆಯೇ ನಾವೂ ಸೇವಿಸುವೆವು ಎಂದು ಹೇಳಿಕೊಳ್ಳುವವರಾಗಿ ಅವರ ದೇವರುಗಳ ವಿಷಯದಲ್ಲಿ ವಿಚಾರಣೆಯನ್ನು ಎಷ್ಟು ಮಾತ್ರವೂ ಮಾಡಬಾರದು. ಧರ್ಮೋಪದೇಶಕಾಂಡ 12: 31 ಯೆಹೋವನಿಗೆ ಅಸಹ್ಯವಾಗಿರುವ ಹಲವು ಕೆಟ್ಟಕೆಲಸಗಳನ್ನು ಅವರು ತಮ್ಮ ದೇವತೆಗಳಿಗೋಸ್ಕರ ನಡಿಸುತ್ತಾರಲ್ಲಾ. ತಮ್ಮ ಗಂಡು ಹೆಣ್ಣು ಮಕ್ಕಳನ್ನು ತಮ್ಮ ದೇವತೆಗಳಿಗೋಸ್ಕರ ಬೆಂಕಿಯಲ್ಲಿ ಸುಡುತ್ತಾರಲ್ಲಾ. ನೀವು ನಿಮ್ಮ ದೇವರಾದ ಯೆಹೋವನನ್ನು ಹಾಗೆ ಸೇವಿಸಲೇಬಾರದು. ಧರ್ಮೋಪದೇಶಕಾಂಡ 13: 1 ಯಾವ ಪ್ರವಾದಿಯಾಗಲಿ ಅಥವಾ ಕನಸುಗಾರನೇ ಆಗಲಿ ನಿಮ್ಮ ಮಧ್ಯದಲ್ಲಿ ಬಂದು, ನಿಮಗೆ

ಗೊತ್ತಿಲ್ಲದ ಇತರ ದೇವರುಗಳನ್ನು ತೋರಿಸಿ, 2 ಈ ದೇವತೆಗಳನ್ನು ಅವಲಂಬಿಸಿ ಅವುಗಳನ್ನು ಸೇವಿಸೋಣ ಎಂದು ಬೋಧಿಸುತ್ತಾ, ಆ ಬೋಧನೆಯನ್ನು ಸ್ಥಾಪಿಸುವುದಕ್ಕೆ ಒಂದು ಅದ್ಭುತವನ್ನಾಗಲಿ ಅಥವಾ ಮಹತ್ಕಾರ್ಯವನ್ನಾಗಲಿ ತೋರಿಸಿಕೊಡುತ್ತೇನೆಂದು ಹೇಳಿ ಅವನು ಹೇಳಿದಂತೆಯೇ ನಡೆದರೂ ನೀವು ಅವನ ಮಾತಿಗೆ ಕಿವಿಗೊಡಬಾರದು. 3 ಏಕೆಂದರೆ ನಿಮ್ಮ ದೇವರಾದ ಯೆಹೋವನು, ಇವರು ಸಂಪೂರ್ಣ ಹೃದಯದಿಂದಲೂ ಮತ್ತು ಸಂಪೂರ್ಣ ಮನಸ್ಸಿನಿಂದಲೂ ತನ್ನನ್ನೇ ಪ್ರೀತಿಸುವವರು ಹೌದೋ ಅಲ್ಲವೋ ಎಂಬುದನ್ನು ತಿಳಿದುಕೊಳ್ಳುವುದಕ್ಕೆ ನಿಮ್ಮನ್ನು ಪರೀಕ್ಷಿಸುತ್ತಾನೆ. ಧರ್ಮೋಪದೇಶಕಾಂಡ 13: 5 ಆ ಪ್ರವಾದಿಗೆ ಅಥವಾ ಆ ಕನಸುಗಾರನಿಗೆ ಮರಣ ಶಿಕ್ಷೆಯಾಗಬೇಕು. ದಾಸತ್ವದಲ್ಲಿದ್ದ ನಿಮ್ಮನ್ನು ಬಿಡುಗಡೆಮಾಡಿ, ಐಗುಪ್ತದೇಶದೊಳಗಿಂದ ಕರೆದುಕೊಂಡು ಬಂದ ನಿಮ್ಮ ದೇವರಾದ ಯೆಹೋವನಿಗೆ ವಿರುದ್ಧವಾಗಿ ಅವನು ದ್ರೋಹದ ಮಾತುಗಳನ್ನಾಡಿ, ನಿಮ್ಮ ದೇವರಾದ ಯೆಹೋವನು ಹೇಳಿದ ಮಾರ್ಗದಿಂದ ನಿಮ್ಮನ್ನು ತಪ್ಪಿಸಬೇಕೆಂದಿದ್ದನಲ್ಲಾ. ಅವನನ್ನು ಕೊಲ್ಲಿಸಿ, ಆ ದುಷ್ಟತ್ವವನ್ನು ನಿಮ್ಮ ಮಧ್ಯದಿಂದ ತೆಗೆದುಹಾಕಬೇಕು. 6 ಒಡಹುಟ್ಟಿದ ಅಣ್ಣತಮ್ಮಂದಿರಾಗಲಿ, ಮಗನಾಗಲಿ, ಮಗಳಾಗಲಿ, ಪ್ರಾಣಪ್ರಿಯಳಾದ ಹೆಂಡತಿಯಾಗಲಿ, ಆಪ್ತಮಿತ್ರನಾಗಲಿ ಇತರ ದೇವರುಗಳನ್ನು ತೋರಿಸಿ, ನಿಮಗೂ ನಿಮ್ಮ ಪಿತೃಗಳಿಗೂ ಗೊತ್ತಿಲ್ಲದ ಆ ದೇವರುಗಳನ್ನು ಸೇವಿಸೋಣ ಬನ್ನಿರಿ ಎಂದು ರಹಸ್ಯವಾಗಿ ಆಕರ್ಷಿಸಿ, ನಿಮಗೆ ಬೋಧಿಸಿದರೆ, 7 ಆ ದೇವರುಗಳು ಹತ್ತಿರುವಿರುವ ಜನಾಂಗಗಳ ದೇವರುಗಳಾದರೂ, ದೂರವಾದವರ ದೇವರುಗಳಾದರೂ, ಭೂಲೋಕದ ಯಾವ ಭಾಗದವರ ದೇವರುಗಳಾದರೂ 8 ನೀವು ಸಮ್ಮತಿಸಲೂ ಬಾರದು ಮತ್ತು ಕಿವಿಗೊಡಲೂಬಾರದು. ಅವನನ್ನು ಕನಿಕರಿಸಲೂಬಾರದು, ತಪ್ಪಿಸಲೂಬಾರದು, ಬಚ್ಚಿಡಲೂಬಾರದು ಅವನನ್ನು ಕೊಲ್ಲಿಸಲೇಬೇಕು. 10 ...........ಅವನನ್ನು ಕಲ್ಲೆಸೆದು ಕೊಲ್ಲಲೇಬೇಕು. ಧರ್ಮೋಪದೇಶಕಾಂಡ 13: 11 ಇದನ್ನು ಇಸ್ರಾಯೇಲರೆಲ್ಲರೂ ಕೇಳಿ ಭಯಪಟ್ಟು ಅಂಥ ದುಷ್ಕಾರ್ಯವನ್ನು ಇನ್ನು ಮುಂದೆ ಮಾಡದೆ ಇರುವರು. 12 ನಿಮ್ಮ ದೇವರಾದ ಯೆಹೋವನು ನಿಮ್ಮ ನಿವಾಸಕ್ಕಾಗಿ ಕೊಡುವ ಯಾವುದಾದರೂ ಒಂದು ಊರಿನ ವಿಷಯದಲ್ಲಿ, 13 ಅಲ್ಲಿ ವಾಸವಾಗಿರುವ ಇಸ್ರಾಯೇಲರಲ್ಲಿ ಕೆಲವು ಜನ ದುಷ್ಟರು ನಿಮಗೆ ಗೊತ್ತಿಲ್ಲದ ಇತರ ದೇವರುಗಳನ್ನು ತಮ್ಮ ಊರಿನವರಿಗೆ ತೋರಿಸಿ, ಆ ದೇವರುಗಳನ್ನು ಸೇವಿಸೋಣ ಬನ್ನಿರಿ ಎಂದು ಹೇಳಿ ಅವರನ್ನು ಸನ್ಮಾರ್ಗದಿಂದ ತಪ್ಪಿಸಿದ್ದಾರೆಂಬ ಸುದ್ದಿಯನ್ನು ನೀವು ಕೇಳಿದರೆ, 14 ಆ ಸಂಗತಿಯನ್ನು ಚೆನ್ನಾಗಿ ವಿಚಾರಿಸಿ ತಿಳಿದುಕೊಳ್ಳಬೇಕು. ಅಂತಹ ಅಸಹ್ಯಕಾರ್ಯವು ಇಸ್ರಾಯೇಲರಲ್ಲಿ

ನಡೆದದ್ದು 15 ನಿಜವೆಂದು ತಿಳಿದುಬಂದರೆ ಆ ಊರನ್ನು ಸಂಪೂರ್ಣವಾಗಿ ಹಾಳು ಮಾಡಿ, ಅದರಲ್ಲಿರುವ ಎಲ್ಲಾ ಜನರನ್ನೂ, ದನಗಳನ್ನೂ ಕತ್ತಿಯಿಂದ ಸಂಹರಿಸಿಡಬೇಕು. 16 ಅದರಲ್ಲಿರುವ ಎಲ್ಲಾ ಸಾಮಾನುಗಳನ್ನು ಗ್ರಾಮಮಧ್ಯದಲ್ಲಿ ಕೂಡಿಸಿ, ಊರನ್ನೂ ಅದರಲ್ಲಿರವ ಎಲ್ಲಾ ಸಾಮಾನುಗಳನ್ನೂ ನಿಮ್ಮ ದೇವರಾದ ಯೆಹೋವನಿಗೋಸ್ಕರ ಸಂಪೂರ್ಣವಾಗಿ ಸುಟ್ಟುಬಿಡಬೇಕು. ಅದು ಪುನಃ ಕಟ್ಟಲ್ಪಡದೆ ಯಾವಾಗಲೂ ಹಾಳುದಿಬ್ಬವಾಗಿರಬೇಕು. ಧರ್ಮೋಪದೇಶಕಾಂಡ 13: 18 ನೀವು ಹೀಗೆ ನಡೆದು ನಿಮ್ಮ ದೇವರಾದ ಯೆಹೋವನ ಮಾತಿಗೆ ಕಿವಿಗೊಟ್ಟರೆ, ಆಗ ಆತನು ತನ್ನ ರೋಷಾಗ್ನಿಯನ್ನು ಬಿಟ್ಟು ನಿಮಗೆ ದಯೆಯನ್ನು ತೋರಿಸಿ, ನಿಮ್ಮನ್ನು ಕರುಣಿಸಿ, ತಾನು ನಿಮ್ಮ ಪಿತೃಗಳಿಗೆ ವಾಗ್ದಾನ ಮಾಡಿದಂತೆ ನಿಮ್ಮ ಸಂತತಿಯನ್ನು ಹೆಚ್ಚಿಸುವನು. ಧರ್ಮೋಪದೇಶಕಾಂಡ 29: 18 ಎಚ್ಚರಿಕೆಯಿಂದಿರಿ, ನಮ್ಮ ದೇವರಾದ ಯೆಹೋವನನ್ನು ಬಿಟ್ಟು ಆ ಜನಾಂಗಗಳ ದೇವರುಗಳನ್ನು ಸೇವಿಸುವ ಯಾವ ಕುಲವಾಗಲಿ, ಕುಟುಂಬವಾಗಲಿ, ಸ್ತ್ರೀಯರಾಗಲಿ, ಪುರುಷರಾಗಲಿ ನಿಮ್ಮಲ್ಲಿ ಇರಲೇ ಬಾರದು; ನಿಮ್ಮಲ್ಲಿ ಯಾವ ವಿಷದ ಬಳ್ಳಿಯ ಬೇರೂ ಇರಬಾರದು.

**ಯಹೋವರ ಆದೇಶಗಳನ್ನು ಕೇಳದೆ ಅವಿದೇಯತೆ ತೋರುವವರಿಗೆ ಶಾಪಗಳು**

ಧರ್ಮೋಪದೇಶಕಾಂಡ 28: 15 ರಿಂದ 68 ರವರೆಗೆ ಕೊಟ್ಟಿರುವ ಘನಘೋರ ಶಿಕ್ಷಾ ರೂಪದ ಶಾಪಗಳು/ದೈಹಿಕ ಮಾನಸಿಕ ಮತ್ತು ಆರ್ಥಿಕ ಸಂಕಷ್ಟಗಳು ಉಂಟಾಗುವುದು ಎಂಬ ಬೆದರಿಕೆ ಇದೆ.

ಇಂತಹ ಅಸಹಿಷ್ಣುತೆ ಇರುವ ಟೋರಾ / ತೌರತ್ ಗ್ರಂಥವನ್ನು ಖುರಾನಿನಲ್ಲಿ 76 ಭಾರಿ ಖುರಾನಿನಲ್ಲಿ 48 ಭಾರಿ ಹದೀಸ್ ಗಳಲ್ಲಿ ಉಲ್ಲೇಕಿಸಿ ಅದನ್ನು ಅನುಮೋದಿಸಿ ಅದರ ವಿರೋಧಿಗಳು ಧಿಕ್ಕಾರಿಗಳು ಅಂದಿನ ಯಹೂದಿಯರು ಮತ್ತು ಕ್ರೈಸ್ತರು ಎಂದು ಪರಿಗಣಿಸಿದ ಖುರಾನಿನ ಸಾರದಲ್ಲಿ ಅದೇ ಅಸಹಿಷ್ಣುತೆ ಅಡಗಿದೆ. ಯಹೂದಿಯರ ಚರಿತ್ರೆಯಲ್ಲಿ ಅನೇಕ ವಿರೋಧಗಳು, ಸಮಾಜ ಸುಧಾರಕರು ಬಂದು ಆ ಜನರನ್ನು ಇತರೇ ಎಲ್ಲಾ ಜನರೊಂದಿಗೆ ಸಾಮರಸ್ಯದಿಂದ ಬದುಕುವ ಹಾಗೆ ಬದಲಾಯಿಸಿದ್ದರೂ ಕೂಡ ಅದರಿಂದ ಪ್ರಾರಂಬವಾದ ಇಸ್ಲಾಮ್ ಹಾಗೆ ಮುಂದುವರಿದಿದೆ. ಸಾಮೂಹಿಕ ಹತ್ಯೆಯ ಮೂಲಕ ಮತಾಂತರಕ್ಕೆ ಮುನ್ನುಗ್ಗಿ ಸೋತು ಸುಣ್ಣವಾದ ಕ್ರೈಸ್ತರು ಕೂದ ಇಂದು ಅನ್ಯ ಮತಗಳನ್ನು ಇಲ್ಲವಾಗಿಸಲು ಹಿಂಸೆ ತೊರೆದು ವಾಮ ಮಾರ್ಗದ ಅಮಿಷಗಳು ಇತರೆ ಮತಗಳನ್ನು ಛಿದ್ರಗೊಳಸುವುದು ನಂಬಿಕೆ ಗಳನ್ನು ಛಿದ್ರಗೊಳಿಸುವುದು ನಿರತವಾಗಿದೆ. ಆದರೆ

ಇಸ್ಲಾಮಿನಲ್ಲಿ ಮೇಲ್ನೋಟಕ್ಕೆ ಶಾಂತಿ ಅನ್ನುತ್ತಿದ್ದರೂ ಒಳಗೆ ಒಳಗೆ ಜಗತ್ತನ್ನೇ ಇಸ್ಲಾಮಿಕರಣ ಮಾಡಲು ಮುಂದಾಗಿರುವ ಜಿಹಾದಿ ಬಯೋತ್ಪಾದನಾ ತಂಡಗಳೇ ಅವರ ಬದಲಾಗದ ನಡೆಗೆ ಸಾಕ್ಷಿಯಾಗಿದ್ದಾರೆ.

**ಖುರಾನಿನಲ್ಲಿ ಮೋಸೆಸ್ ಮತ್ತು ಅಬ್ರಹಾಮ್ ಬಗ್ಗೆ ಖುರಾನೇ ಸಾಕ್ಷಿಯಾಗಿದೆ**

ಖುರಾನ್ 87:18. ಗತಕಾಲದ ಗ್ರಂಥಗಳಲ್ಲಿ ಇದನ್ನೇ ಹೇಳಲಾಗಿದೆ –

ಖುರಾನ್ 87:19. – ಇಬ್ರಾಹೀಮ್ ಮತ್ತು ಮೂಸಾರ ಗ್ರಂಥಗಳಲ್ಲಿ.

| ಖುರಾನ್ | ಹಳೆ ಪುರಾವೆ ಬೈಬಲ್/ತೌರತ್ |
|---|---|
| ಅಧ್ಯಾಯ-20 – ತ್ವಾಹಾ (ಮಕ್ಕಃ)<br>9. ಇನ್ನು ನಿಮಗೆ ಮೂಸಾರ ಸುದ್ದಿ ತಲುಪಿದೆಯೇ?<br>10. ಅವರು (ದೂರದಲ್ಲಿ) ಬೆಂಕಿಯನ್ನು ಕಂಡಾಗ, ತಮ್ಮ ಮನೆಯವರೊಡನೆ ಹೇಳಿದರು; ನೀವು ಇಲ್ಲೇ ಇರಿ. ನಾನು ಬೆಂಕಿಯನ್ನು ಕಂಡಿದ್ದೇನೆ. ಅಲ್ಲಿಂದ ನಿಮಗಾಗಿ ಕೆಂಡವನ್ನು ತರಲು ನನಗೆ ಸಾಧ್ಯವಾದೀತು ಅಥವಾ ಬೆಂಕಿಯ ಬಳಿ ನನಗೆ (ಮುಂದಿನ ದಾರಿಯ ಕುರಿತು) ಮಾರ್ಗದರ್ಶನ ಸಿಕ್ಕೀತು.<br>11. ಅವರು ಅದರ ಬಳಿಗೆ ತಲುಪಿದಾಗ ನಾವು ಕರೆದೆವು; ಓ ಮೂಸಾ! | ವಿಮೋಚನಾಕಾಂಡ ಅಧ್ಯಾಯ 3<br>.... ಹೋರೇಬ್ ಎಂಬ ದೇವರ ಬೆಟ್ಟಕ್ಕೆ ಬಂದನು. 2 ಆಗ ಯೆಹೋವನ ದೂತನು ಮುಳ್ಳಿನ ಪೊದೆಯೊಳಗಿನಿಂದ ಉರಿಯುವ ಬೆಂಕಿ ಜ್ವಾಲೆಯಲ್ಲಿ ಅವನಿಗೆ ಕಾಣಿಸಿಕೊಂಡನು. ಮೋಶೆಯು ಕಣ್ಣೆತ್ತಿ ನೋಡಿದಾಗ, ಆ ಮುಳ್ಳಿನ ಪೊದೆಯು ಬೆಂಕಿಯಿಂದ ಉರಿಯುತ್ತಿತ್ತು; ಆದರೆ ಅದು ಸುಟ್ಟು ಹೋಗಲಿಲ್ಲ. 3 ಆಗ ಮೋಶೆ, ಇದೇನು ಆಶ್ಚರ್ಯ! ಪೊದೆಯು ಸುಟ್ಟು ಹೋಗುತ್ತಿಲ್ಲವಲ್ಲಾ! ಇದನ್ನು ಹತ್ತಿರಕ್ಕೆ ಹೋಗಿ ನೋಡುವೆನು ಅಂದುಕೊಂಡನು. 4 ಅವನು ಅದನ್ನು ನೋಡುವುದಕ್ಕೆ ಹತ್ತಿರ ಬರುವುದನ್ನು ಯೆಹೋವನು ಕಂಡನು. ಆಗ ದೇವರು ಆ ಪೊದೆಯೊಳಗಿಂದ ಮೋಶೆಯೇ, ಮೋಶೆಯೇ ಎಂದು ಅವನನ್ನು ಕರೆದನು. ಅದಕ್ಕೆ ಮೋಶೆ, ಇಗೋ ಇದ್ದೇನೆ ಅಂದನು. |
| 12. ನಾನೇ ನಿಮ್ಮ ಒಡೆಯ. ನೀವು ನಿಮ್ಮ ಬೂಟುಗಳನ್ನು | 5 ದೇವರು ಅವನಿಗೆ, ನೀನು ಪೊದೆಯ ಹತ್ತಿರ ಬರಬೇಡ! ನಿನ್ನ ಕಾಲಿನ ಕೆರಗಳನ್ನು |

| | |
|---|---|
| ಕಳಚಿರಿ. ನೀವು ಪವಿತ್ರವಾದ 'ತುವಾ' ಕಣಿವೆಯಲ್ಲಿದ್ದೀರಿ. | ತೆಗೆದುಹಾಕು, ಯಾಕೆಂದರೆ ನೀನು ನಿಂತಿರುವ ಸ್ಥಳವು ಪರಿಶುದ್ಧ ಸ್ಥಳವಾಗಿದೆ ಎಂದು ಹೇಳಿದನು. |
| 13. ನಾನು ನಿಮ್ಮನ್ನು ಆರಿಸಿಕೊಂಡಿರುವೆನು. ಇದೀಗ ನಿಮಗೆ ನೀಡಲಾಗುವ ದಿವ್ಯವಾಣಿಯನ್ನು ಕೇಳಿರಿ.<br>14. ಖಂಡಿತವಾಗಿಯೂ ನಾನೇ ಅಲ್ಲಾಹ್. ನನ್ನ ಹೊರತು ಬೇರೆ ದೇವರಿಲ್ಲ. ನನ್ನನ್ನೇ ಪೂಜಿಸಿರಿ ಮತ್ತು ನನ್ನ ನೆನಪನ್ನು ಉಳಿಸಿಕೊಳ್ಳಲು ನಮಾಝ್ ಅನ್ನು ಪಾಲಿಸಿರಿ.<br>15. ಆ ಅಂತಿಮ ಕ್ಷಣವು ಖಂಡಿತ ಬರಲಿದೆ. ಪ್ರತಿಯೊಬ್ಬನಿಗೂ ಅವನ ಶ್ರಮದ ಫಲ ನೀಡಲಿಕ್ಕಾಗಿ, ನಾನು ಅದನ್ನು (ಅದರ ಖಚಿತ ಸಮಯವನ್ನು) ಗುಟ್ಟಾಗಿಡ ಬಯಸುತ್ತೇನೆ.<br>16. ಅದರಲ್ಲಿ ನಂಬಿಕೆ ಇಲ್ಲದವನು ಮತ್ತು ತನ್ನ ಇಚ್ಛೆಯನ್ನು ಅನುಸರಿಸುವವನು ನಿಮ್ಮನ್ನು ಅದರಿಂದ ತಡೆಯದಿರಲಿ. ಅನ್ಯಥಾ ನೀವು ನಾಶವಾಗುವಿರಿ. | 6 ಇದಲ್ಲದೆ ಆತನು ಅವನಿಗೆ, ನಾನು ನಿನ್ನ ತಂದೆಯಾದ, ಅಬ್ರಹಾಮನ ದೇವರು, ಇಸಾಕನ ದೇವರು, ಯಾಕೋಬನ ದೇವರೂ ಆಗಿದ್ದೇನೆ ಎಂದು ಹೇಳಿದನು. ಮೋಶೆಯು ದೇವರನ್ನು ನೋಡುವುದಕ್ಕೆ ಭಯಪಟ್ಟು ಮುಖವನ್ನು ಮುಚ್ಚಿಕೊಂಡನು.<br>10 ಆದುದರಿಂದ ಈಗ ಬಾ, ನನ್ನ ಜನರಾದ ಇಸ್ರಾಯೇಲರನ್ನು ಐಗುಪ್ತ ದೇಶದಿಂದ ಹೊರಗೆ ಬರಮಾಡುವುದಕ್ಕೆ ನಿನ್ನನ್ನು ಫರೋಹನನ ಬಳಿಗೆ ಕಳುಹಿಸುತ್ತೇನೆ ಅಂದನು.<br>15 ದೇವರು ಪುನಃ ಮೋಶೆಗೆ ಹೇಳಿದ್ದೇನೆಂದರೆ, ನೀನು ಇಸ್ರಾಯೇಲರಿಗೆ, ನಿಮ್ಮ ಪಿತೃಗಳಾದ ಅಬ್ರಹಾಮ್, ಇಸಾಕ್, ಯಾಕೋಬರ ದೇವರಾಗಿರುವ ಯೆಹೋವನು ನನ್ನನ್ನು ನಿಮ್ಮ ಬಳಿಗೆ ಕಳುಹಿಸಿದ್ದಾನೆ ಎಂದು ಹೇಳಬೇಕು. ಇದು ಸದಾಕಾಲಕ್ಕೂ ಇರುವ ನನ್ನ ಹೆಸರು. ಇದು ತಲಾಂತರಕ್ಕೂ ನನ್ನನ್ನು ಸ್ಮರಿಸಬೇಕಾದ ನಾಮ. |
| 17. ಓ ಮೂಸಾ, ಆ ನಿಮ್ಮ ಬಲಗೈಯಲ್ಲಿ ಏನಿದೆ? | ವಿಮೋಚನಾಕಾಂಡ ಅಧ್ಯಾಯ–4 |

| | |
|---|---|
| 18. ಅವರು ಹೇಳಿದರು; ಇದು ನನ್ನ ಊರುಗೋಲು. ನಾನು ಇದನ್ನು ಆಧರಿಸಿ ನಿಲ್ಲುತ್ತೇನೆ ಮತ್ತು ನಾನು ಇದರಿಂದ ನನ್ನ ಆಡುಗಳಿಗಾಗಿ ಎಲೆಗಳನ್ನು ಉದುರಿಸುತ್ತೇನೆ. ನನಗೆ ಇದರಿಂದ ಇತರ ಹಲವು ಪ್ರಯೋಜನಗಳೂ ಇವೆ.<br>19. ಅವನು (ಅಲ್ಲಾಹನು) ಹೇಳಿದನು; ಓ ಮೂಸಾ, ನೀವು ಅದನ್ನು ಕೆಳಗಿಡಿರಿ.<br>20. ಅವರು ಅದನ್ನು ಕೆಳಗಿಟ್ಟರು. ಕೂಡಲೇ ಅದು ಓಡಾಡುವ ಸರ್ಪವಾಗಿ ಬಿಟ್ಟಿತ್ತು.<br>21. ಅವನು ಹೇಳಿದನು; ನೀವು ಅದನ್ನು ಹಿಡಿಯಿರಿ ಮತ್ತು ನೀವು ಅಂಜಬೇಡಿ. ನಾವು ಬಹು ಬೇಗನೇ ಅದನ್ನು ಮೊದಲಿನ ಸ್ಥಿತಿಗೆ ಮರಳಿಸುವೆವು.<br>22. ನೀವೀಗ ನಿಮ್ಮ ಕೈಯನ್ನು ನಿಮ್ಮ ತೋಳಿನಡಿಯಲ್ಲಿಡಿರಿ. ಅದು ಯಾವ ಕಷ್ಟವೂ ಇಲ್ಲದೆ ಉಜ್ವಲ ರೂಪದಲ್ಲಿ ಹೊರ ಬರುವುದು. ಇದು ಇನ್ನೊಂದು ಪುರಾವೆ.<br>23. ಇದೇಕೆಂದರೆ, ಮುಂದೆ ನಾವು ನಿಮಗೆ ನಮ್ಮ ದೊಡ್ಡ | 2 ಅದಕ್ಕೆ ಯೆಹೋವನು ಅವನಿಗೆ, ನಿನ್ನ ಕೈಯಲ್ಲಿರುವುದೇನು? ಎಂದು ಕೇಳಿದನು. ಅವನು, ಇದು ಇದು ಒಂದು ಕೋಲು ಅಂದನು.<br>3 ಯೆಹೋವನು ಅವನಿಗೆ, ಅದನ್ನು ನೆಲದ ಮೇಲೆ ಹಾಕು ಎಂದನು. ಅವನು ನೆಲದಲ್ಲಿ ಹಾಕುತ್ತಲೇ ಅದು ಹಾವಾಯಿತು! ಮೋಶೆ ಅದಕ್ಕೆ ಭಯಪಟ್ಟು ಓಡಿಹೋದನು.<br>4 ಯೆಹೋವನು ಮೋಶೆಗೆ, ನಿನ್ನ ಕೈಚಾಚಿ ಅದರ ಬಾಲವನ್ನು ಹಿಡಿ ಎಂದು ಹೇಳಿದನು. ಅವನು ಅದನ್ನು ಹಿಡಿದ ಕೂಡಲೇ ಅದು ಕೋಲಾಯಿತು.<br>6 ಯೆಹೋವನು ತಿರುಗಿ ಅವನಿಗೆ, ನಿನ್ನ ಕೈಯನ್ನು ಎದೆಯಭಾಗದೊಳಗೆ ಇಟ್ಟುಕೋ ಎಂದು ಹೇಳಿದನು. ಅವನು ಹಾಗೆ ಇಟ್ಟುಕೊಂಡು ಹೊರಗೆ ತೆಗೆಯಲು ಅವನ ಕೈ ಕುಷ್ಠ ಹತ್ತಿ ಹಿಮದಂತೆ ಬೆಳ್ಳಗಾಗಿತ್ತು.<br>7 ಯೆಹೋವನು ಅವನಿಗೆ ನಿನ್ನ ಕೈಯನ್ನು ತಿರುಗಿ ಎದೆಯಭಾಗದೊಳಗೆ ಸೇರಿಸು ಎಂದು ಹೇಳಿದನು. ಅವನು ಅದನ್ನು ತಿರುಗಿ ಎದೆಯಭಾಗದೊಳಗೆ ಸೇರಿಸಿ ತೆಗೆದು ನೋಡಿದಾಗ ಅದು ಉಳಿದ ದೇಹದಂತೆ ಆಗಿತ್ತು. |

| ಪುರಾವೆಗಳನ್ನು ತೋರಿಸಲಿರುವೆವು. | |
|---|---|

ಬದಲಾದ ಪದಗಳು ಬದಲಾದ ಹೆಸರುಗಳು ಬದಲಾದ ದೇವರ ಹೆಸರಿನ ಉಲ್ಲೇಕಗಳು ಗಮನಿಸಿದರೆ, ತೌರತ್ ನಲ್ಲಿನ ಎರಡು ಅಧ್ಯಾಯದಲ್ಲಿ ಇರುವುದನ್ನು ಸಂಕ್ಷಿಪ್ತವಾಗಿ ಅಲ್ಲಾಹರ ಹೆಸರು ಸೇರಿಸಿ ತರ್ಜುಮೆ ಮಾಡಿರುವುದು ರುಜುವಾತಾಗುತ್ತದೆ.

ಏಸು ಕ್ರಿಸ್ತನು ಮೋಶೆಯ ಧರ್ಮ ನಿಯಮವನ್ನು ಮುಂದುವರಿಸಲು ಬಂದದ್ದು:-

ಹೊಸ ಒಡಂಬಡಿಕೆ ಬೈಬಲ್ ಮತ್ತಾಯನು 5: 17 ಮೋಶೆಯ ಧರ್ಮನಿಯಮವನ್ನಾಗಲಿ ಪ್ರವಾದಿಗಳ ಪ್ರವಾದನೆಗಳನ್ನಾಗಲಿ ನಿರರ್ಥಕಪಡಿಸುವುದಕ್ಕೆ ನಾನು ಬಂದೆನೆಂದು ನೆನಸಬೇಡಿರಿ; ನಿರರ್ಥಕಪಡಿಸಲು ಬಂದಿಲ್ಲ; ಬದಲಾಗಿ ನೆರವೇರಿಸುವುದಕ್ಕೆ ಬಂದಿದ್ದೇನೆ.

ಕ್ರೈಸ್ತರು ಯಹೂದಿಗಳ ಗ್ರಂಥಗಳನ್ನು ಅವರ ದೇವರನ್ನು, ಅವರ ಪ್ರವಾದಿಗಳನ್ನು ಒಪ್ಪುತ್ತಾರೆ ಆದರೆ ಅವರ ಜನಾಂಗವನ್ನು ಅಂದಿನ ಜನಾಂಗದ ಧರ್ಮ ಗುರುಗಳನ್ನು ಒಪ್ಪುವುದಿಲ್ಲ:- (ಅಲ್ಲಿಗೆ ಧರ್ಮ ಗುರುಗಳಲ್ಲಿನ ಅನೀತಿಯೆ ಧರ್ಮ ವಿಭಜನೆಗೆ ಕಾರಣವಾಯಿತೆ?)

ಹೊಸ ಒಡಂಬಡಿಕೆ ಬೈಬಲ್ ಮತ್ತಾಯನು 23:2 ಶಾಸ್ತ್ರಿಗಳೂ ಫರಿಸಾಯರೂ ಮೋಶೆಯ ಸ್ಥಾನದಲ್ಲಿ ಕುಳಿತುಕೊಂಡಿದ್ದಾರೆ; 23:3 ಆದುದರಿಂದ ಅವರು ನಿಮಗೆ ಏನೆಲ್ಲಾ ಆಜ್ಞಾಪಿಸುತ್ತಾರೋ ಅದನ್ನೆಲ್ಲಾ ಕೈಕೊಂಡು ನಡೆಯಿರಿ; ಆದರೆ ಅವರ ಕ್ರಿಯೆಗಳ ಪ್ರಕಾರ ನಡೆಯಬೇಡಿರಿ; ಅವರು ಹೇಳುತ್ತಾರೆಯೇ ಹೊರತು ಅದರಂತೆ ನಡೆಯುವುದಿಲ್ಲ.

23:13 ಅಯ್ಯೋ, ಕಪಟಿಗಳಾದ ಶಾಸ್ತ್ರಿಗಳೇ, ಫರಿಸಾಯರೇ, ಪರಲೋಕ ರಾಜ್ಯದ ಬಾಗಿಲನ್ನು ಮನುಷ್ಯರ ಎದುರಿಗೆ ಮುಚ್ಚಿಬಿಡುತ್ತೀರಿ. ನೀವಂತೂ ಒಳಕ್ಕೆ ಪ್ರವೇಶಿಸುವುದಿಲ್ಲ, ಒಳಕ್ಕೆ ಪ್ರವೇಶಿಸಬೇಕೆಂದಿರುವವರನ್ನೂ ಪ್ರವೇಶಿಸಗೊಡಿಸುವುದೂ ಇಲ್ಲ. 23:14 ಅಯ್ಯೋ, ಕಪಟಿಗಳಾದ ಶಾಸ್ತ್ರಿಗಳೇ, ಫರಿಸಾಯರೇ ಜನರು ನೋಡಬೇಕೆಂದು ಉದ್ದವಾದ ಪ್ರಾರ್ಥನೆಗಳನ್ನು ಮಾಡುತ್ತೀರೀ. ನೀವು ವಿಧವೆಯರ ಮನೆಗಳನ್ನು ನುಂಗಿ ನಟನೆಮಾಡುತ್ತೀರಿ. ಆದುದರಿಂದ ನೀವು ಹೆಚ್ಚಿನ ದಂಡನೆಯನ್ನು ಹೊಂದುವಿರಿ.

ಮತಾಂತರವನ್ನು ಮಾಡುವ ಯಹೂದಿಗಳ ಕಾರ್ಯವನ್ನು ಟೀಕಿಸುವ ಕ್ರೈಸ್ತನ ಬಗ್ಗೆ ಬೈಬಲ್ ನಲ್ಲಿ ಇದೆ:-

23:15 ಅಯ್ಯೋ, ಕಪಟಿಗಳಾದ ಶಾಸ್ತ್ರಿಗಳೇ, ಫರಿಸಾಯರೇ, ನೀವು ಒಬ್ಬ ಮನುಷ್ಯನನ್ನು ಮತಾಂತರಗೊಳ್ಳಿಸುವುದಕ್ಕಾಗಿ ಭೂಮಿಯನ್ನೂ ಸಮುದ್ರವನ್ನೂ ಸುತ್ತಾಡಿಕೊಂಡು ಬರುತ್ತೀರಿ; ಅವನು ನಿಮ್ಮ ಮತಕ್ಕೆ ಸೇರಿದ ಮೇಲೆ ಅವನನ್ನು ನಿಮಗಿಂತ ಎರಡರಷ್ಟು ನರಕಕ್ಕೆ ಪಾತ್ರನಾಗಮಾಡುತ್ತೀರಿ. 23:23 ಅಯ್ಯೋ, ಕಪಟಿಗಳಾದ ಶಾಸ್ತ್ರಿಗಳೇ, ಫರಿಸಾಯರೇ, ನೀವು ಪುದಿನ, ಮರುಗಪತ್ರೆ, ಸಬಸಿಗೆಸೊಪ್ಪು, ಜೀರಿಗೆಗಳಲ್ಲಿ ದಶಮ ಭಾಗವನ್ನು ಕೊಡುತ್ತೀರಿ ಸರಿ, ಆದರೆ ಧರ್ಮನಿಯಮದಲ್ಲಿ ಮುಖ್ಯವಾದುದನ್ನು ಅಂದರೆ ನ್ಯಾಯವನ್ನೂ, ಕರುಣೆಯನ್ನೂ ನಂಬಿಕೆಯನ್ನೂ ಬಿಟ್ಟುಬಿಟ್ಟಿದ್ದೀರಿ. ಇವುಗಳನ್ನು ಮಾಡಬೇಕು; ಅವುಗಳನ್ನೂ ಬಿಡಬಾರದು. 23:24 ಕುರುಡ ಮಾರ್ಗದರ್ಶಿಗಳೇ, ನೀವು ಸೊಳ್ಳೆ ಸೋಸುವವರು, ಆದರೆ ಒಂಟೆ ನುಂಗುವವರು. 23:27 ಅಯ್ಯೋ, ಕಪಟಿಗಳಾದ ಶಾಸ್ತ್ರಿಗಳೇ, ಫರಿಸಾಯರೇ ನೀವು ಸುಣ್ಣಾ ಹಚ್ಚಿದ ಸಮಾಧಿಗಳಿಗೆ ಹೋಲಿಕೆಯಾಗಿದ್ದೀರಿ; ಇವು ಹೊರಗೆ ಸುಂದರವಾಗಿ ಕಾಣುತ್ತವೆ. ಒಳಗೆ ನೋಡಿದರೆ ಸತ್ತವರ ಎಲುಬುಗಳಿಂದಲೂ ಎಲ್ಲಾ ಹೊಲಸಿನಿಂದಲೂ ತುಂಬಿರುತ್ತವೆ. 23:28 ಹಾಗೆಯೇ ನೀವು ಸಹ ಹೊರಗೆ ಜನರಿಗೆ ನೀತಿವಂತರಂತೆ ಕಾಣಿಸಿಕೊಳ್ಳುತ್ತೀರಿ. ಆದರೆ ಒಳಗೆ ಕಪಟ ಮತ್ತು ಅಕ್ರಮದಿಂದ ತುಂಬಿದವರಾಗಿದ್ದೀರಿ. 23:29 ಅಯ್ಯೋ, ಕಪಟಿಗಳಾದ ಶಾಸ್ತ್ರಿಗಳೇ, ಫರಿಸಾಯರೇ, ನೀವು ಪ್ರವಾದಿಗಳ ಸಮಾಧಿಗಳನ್ನು ಕಟ್ಟಿ, ನೀತಿವಂತರ ಗೋರಿಗಳನ್ನು ಅಲಂಕರಿಸಿ, 23:30 ನಾವು ನಮ್ಮ ಹಿರಿಯರ ಕಾಲದಲ್ಲಿ ಇದ್ದಿದ್ದರೆ ಪ್ರವಾದಿಗಳನ್ನು ಕೊಂದ ಪಾಪದಲ್ಲಿ ಪಾಲುಗಾರರಾಗುತ್ತಿರಲಿಲ್ಲ ಅನ್ನುತ್ತೀರಿ. 23:31 ಹಾಗಾದರೆ ನೀವು ಪ್ರವಾದಿಗಳನ್ನು ಕೊಂದವರ ಮಕ್ಕಳೇ ಹೌದು ಎಂಬುದಕ್ಕೆ ನಿಮಗೆ ನೀವೇ ಸಾಕ್ಷಿಗಳಾಗಿದ್ದೀರಿ. 23:32 ಒಳ್ಳೆಯದು, ನೀವು ನಿಮ್ಮ ಹಿರಿಯರ ಪಾಪದ ಅಳತೆಯನ್ನು ಪೂರ್ತಿಮಾಡುತ್ತೀರಿ. 23:33 ಹಾವುಗಳೇ, ಸರ್ಪಜಾತಿಯವರೇ, ನರಕದಂಡನೆಯಿಂದ ಹೇಗೆ ನೀವು ತಪ್ಪಿಸಿಕೊಳ್ಳುವಿರಿ? 23:34 ಆದುದರಿಂದ ನೋಡಿರಿ, ನಾನು ನಿಮ್ಮ ಬಳಿಗೆ ಪ್ರವಾದಿಗಳನ್ನೂ ಜ್ಞಾನಿಗಳನ್ನೂ ಶಾಸ್ತ್ರಿಗಳನ್ನೂ ಕಳುಹಿಸುತ್ತೇನೆ; ಅವರಲ್ಲಿ ಕೆಲವರನ್ನು ನೀವು ಕೊಲ್ಲುವಿರಿ, ಶಿಲುಬೆಗೆ ಹಾಕುವಿರಿ; ಕೆಲವರನ್ನು ನಿಮ್ಮ ಸಭಾಮಂದಿರಗಳಲ್ಲಿ ಚಾಟಿಗಳಿಂದ ಹೊಡೆದು ಊರಿಂದ ಊರಿಗೆ ಅಟ್ಟಿಕೊಂಡು ಹೋಗುವಿರಿ.

ಆದರೆ ಸ್ವಯಂ ಏಸು ಕ್ರಿಸ್ತನು ಬ್ಯಾಪ್ಟಿಸಮ್ ಮೂಲಕ ಮತಾಂತರಕ್ಕೆ ಕರೆಕೊಡುತ್ತಾರೆ, ಒಬ್ಬರನ್ನು ಯಾವ ಕಾರ್ಯಕ್ಕೆ ಟೀಕಿಸಲಾಯಿತೋ ಅದೇ ಕಾರ್ಯಕ್ಕೆ ಏಸು ಕ್ರಿಸ್ತನು ಕರೆ ಕೊಡುವುದು ಎಂದರೆ ಬೈಬಲ್ ಬೋದನೆ ನೀತಿಯುಕ್ತವಾಗಿದೆಯೇ?

ಮಾರ್ಕನು 16:15 ಆತನು ಅವರಿಗೆ--ನೀವು ಸಮಸ್ತ ಲೋಕಕ್ಕೆ ಹೋಗಿ ಎಲ್ಲಾ ಸೃಷ್ಟಿಗೆ ಸುವಾರ್ತೆಯನ್ನು ಸಾರಿರಿ.

ಮಾರ್ಕನು 16:16 ನಂಬಿ ಬಾಪ್ತಿಸ್ಮ (ದೀಕ್ಷಾಸ್ನಾನ, ಮತಾಂತರ) ಮಾಡಿಸಿಕೊಳ್ಳುವವನು ರಕ್ಷಣೆ ಹೊಂದುವನು. ಆದರೆ ನಂಬದೆ ಹೋಗುವವನು ದಂಡನೆಗೆ ಗುರಿಯಾಗುವನು.

ಮತ್ತಾಯನು 28:18 ಯೇಸು ಬಂದು ಅವರೊಂದಿಗೆ ಮಾತ ನಾಡಿ-- ಪರಲೋಕದಲ್ಲಿಯೂ ಭೂಲೋಕದಲ್ಲಿಯೂ ಎಲ್ಲಾ ಅಧಿಕಾರ ನನಗೆ ಕೊಡಲ್ಪಟ್ಟಿದೆ;

ಮತ್ತಾಯನು 28:19 ಆದದರಿಂದ ನೀವು ಹೋಗಿ ಎಲ್ಲಾ ಜನಾಂಗಗಳಿಗೆ ಬೋಧಿಸಿ ತಂದೆಯ, ಮಗನ, ಪರಿಶುದ್ಧಾತ್ಮನ ಹೆಸರಿನಲ್ಲಿ ಬಾಪ್ತಿಸ್ಮ ಮಾಡಿರಿ;

ಧೀಕ್ಷಾ ಸ್ನಾನದ ಬಗ್ಗೆ ಯಹೂದಿಯರಲ್ಲೂ ಕ್ರೈಸ್ತರಲ್ಲೂ ಉತ್ತರವಿಲ್ಲ

ಮಾರ್ಕನು 11:30 ಯೋಹಾನನ ಬಾಪ್ತಿಸ್ಮವು ಪರಲೋಕದಿಂದಲೋ ಇಲ್ಲವೆ ಮನುಷ್ಯರಿಂದಲೋ, ನನಗೆ (ಯೇಸುವಿಗೆ) ಉತ್ತರಕೊಡಿರಿ ಅಂದನು.

ಮಾರ್ಕನು 11:31 ಆಗ ಅವರು --ಪರಲೋಕದಿಂದ ಎಂದು ನಾವು ಹೇಳಿದರೆ--ನೀವು ಯಾಕೆ ಅವನನ್ನು ನಂಬಲಿಲ್ಲ ಎಂದು ಕೇಳಿ ಯಾನು;

ಮಾರ್ಕನು 11:32 ಆದರೆ ನಾವು--ಮನುಷ್ಯರಿಂದ ಎಂದು ಹೇಳುವದಾದರೆ ನಮಗೆ ಜನರ ಭಯವಿದೆ; ಯಾಕಂದರೆ ಯೋಹಾನನು ನಿಜವಾಗಿಯೂ ಪ್ರವಾದಿಯೆಂದು ಎಲ್ಲರೂ ಎಣಿಸಿಕೊಂಡಿರುವರು ಎಂದು ಅವರು ತಮ್ಮಲ್ಲಿ ತರ್ಕಿಸಿಕೊಂಡರು.

ಮಾರ್ಕನು 11:33 ಅವರು ಪ್ರತ್ಯುತ್ತರವಾಗಿ ಯೇಸುವಿಗೆ--ನಾವು ಹೇಳಲಾರೆವು ಎಂದು ಉತ್ತರ ಕೊಟ್ಟರು. ಅದಕ್ಕೆ ಯೇಸು--ನಾನು ಯಾವ ಅಧಿಕಾರ ದಿಂದ ಇವುಗಳನ್ನು ಮಾಡುತ್ತೇನೆಂದು ನಾನೂ ನಿಮಗೆ ಹೇಳುವದಿಲ್ಲ ಎಂದು ಅವರಿಗೆ ಉತ್ತರ ಕೊಟ್ಟನು.

ಯಹೂದ್ಯರ ಮೂಲಪುರುಷನಾದ ಅಬ್ರಹಾಮನಿಗೂ ಮುಂಚೆ ನಾನಿದ್ದೆ ಎನ್ನುವ ಏಸು ಕ್ರಿಸ್ತ ಸ್ವಯಂ ತಾನೇ ದೇವನೆಂದದ್ದು:-

ಯೋಹಾನನು 8:52 ರಿಂದ 59 ಏಸು ಮತ್ತು ಯಹೂದಿಯರ ಸಂವಾದ:- 52 ಅದಕ್ಕೆ ಯೆಹೂದ್ಯರು ನೀನು ದೆವ್ವಹಿಡಿದವನೆಂದು ಈಗ ನಮಗೆ ತಿಳಿಯಿತು.

ಅಬ್ರಹಾಮನು ಸತ್ತನು ಮತ್ತು ಪ್ರವಾದಿಗಳೂ ಸತ್ತರು, ಆದರೆ ನೀನು "ನನ್ನ ವಾಕ್ಯಕ್ಕೆ ವಿಧೇಯನಾದರೆ ಅವನು ನಿತ್ಯಮರಣವನ್ನು ಅನುಭವಿಸುವುದಿಲ್ಲ" ಎಂದು ಹೇಳುತ್ತೀಯಲ್ಲಾ? 53 ಸತ್ತುಹೋದ ನಮ್ಮ ತಂದೆಯಾದ ಅಬ್ರಹಾಮನಿಗಿಂತಲೂ ನೀನು ದೊಡ್ಡವನೋ? ಪ್ರವಾದಿಗಳೂ ಸತ್ತುಹೋದರು, ನಿನ್ನನ್ನೇ ನೀನು ಯಾರೆಂದು ಭಾವಿಸಿಕೊಳ್ಳುತ್ತಿದ್ದೀ? ಎಂದು ಕೇಳಿದರು. 54 ಯೇಸು ನನ್ನನ್ನು ನಾನೇ ಮಹಿಮೆಪಡಿಸಿಕೊಂಡರೆ ನನ್ನ ಮಹಿಮೆಯು ಏನೂ ಅಲ್ಲ. ನನ್ನನ್ನು ಮಹಿಮೆಪಡಿಸುವವನು ನನ್ನ ತಂದೆಯೇ, ನೀವು ಆತನನ್ನು ನಿಮ್ಮ ದೇವರು ಅನ್ನುತ್ತೀರಿ, 55 ಆದರೂ ನೀವು ಆತನನ್ನು ತಿಳಿಯದೆ ಇದ್ದೀರಿ. ನಾನಂತೂ ಆತನನ್ನು ಬಲ್ಲೆನು, ಆತನನ್ನು ಅರಿಯೆನೆಂದು ಹೇಳಿದರೆ ನಿಮ್ಮ ಹಾಗೆ ಸುಳ್ಳುಗಾರನಾಗುವೆನು. ಆದರೆ ನಾನು ಆತನನ್ನು ತಿಳಿದಿದ್ದೇನೆ. ಆತನ ವಾಕ್ಯಕ್ಕೆ ವಿಧೇಯನಾಗುತ್ತೇನೆ. 56 ನಿಮ್ಮ ಮೂಲಪುರುಷನಾದ ಅಬ್ರಹಾಮನು ನನ್ನ ದಿನವನ್ನು ತಾನು ನೋಡುತ್ತೇನೆಂದು ಉಲ್ಲಾಸಪಟ್ಟನು ಮತ್ತು ಅದನ್ನು ನೋಡಿ ಸಂತೋಷಪಟ್ಟನು ಎಂದು ಹೇಳಿದನು. 57 ಅದಕ್ಕೆ ಯೆಹೂದ್ಯರು, ನಿನಗೆ ಇನ್ನೂ ಐವತ್ತು ವರ್ಷವಾಗಿಲ್ಲ, ನೀನು ಅಬ್ರಹಾಮನನ್ನು ನೋಡಿದ್ದೀಯಾ? ಅಂದರು. 58 ಯೇಸು, ನಿಮಗೆ ನಾನು ನಿಜನಿಜವಾಗಿ ಹೇಳುತ್ತೇನೆ; ಅಬ್ರಹಾಮನು ಹುಟ್ಟುವುದಕ್ಕಿಂತ ಮುಂಚಿನಿಂದಲೂ ನಾನು ಇದ್ದೇನೆ ಎಂದನು. 59 ಆಗ ಅವರು ಆತನ ಮೇಲೆ ಎಸೆಯಲು, ಕಲ್ಲುಗಳನ್ನು ಎತ್ತಿಕೊಂಡರು. ಆದರೆ ಯೇಸು ಮರೆಯಾಗಿ ದೇವಾಲಯದೊಳಗಿನಿಂದ ಹೊರಗೆ ಹೊರಟು ಹೋದನು.

ಯಹೂದಿಯರು ನೀತಿ ಇಲ್ಲದ ನಡವಳಿಕೆ ತೋರುತ್ತಿದ್ದರೆ ಹೌದೆನ್ನುತ್ತದೆ ಬೈಬಲ್

ರೋಮಾಪುರದವರಿಗೆ 9 : 30 ಹಾಗಾದರೆ ಏನು ಹೇಳೋಣ? ನೀತಿಯನ್ನು ಅನುಸರಿಸದ ಅನ್ಯಜನರಿಗೆ ನೀತಿಯು ಅಂದರೆ ನಂಬಿಕೆಯಿಂದುಂಟಾದ ನೀತಿಯು ದೊರಕಿತು. 31 ಆದರೆ ನೀತಿಯನ್ನು ಹಿಂಬಾಲಿಸಿದ್ದ ಇಸ್ರಾಯೇಲ್ಯರು ನೀತಿಯನ್ನು ದೊರಕಿಸುವ ಧರ್ಮವನ್ನು ಹಿಡಿಯಲಾರದೆ ಹೋದರೆಂದು ಹೇಳಬೇಕು. 32 ಅದಕ್ಕೆ ಕಾರಣವೇನು? ಅವರು ನಂಬಿಕೆಯನ್ನು ಅನುಸರಿಸದೆ ನೇಮನಿಷ್ಠೆಗಳನ್ನು ಹಿಂಬಾಲಿಸಿದ್ದರಿಂದ, 33 ಆ ಎಡವುವ ಕಲ್ಲಿಗೆ ಅವರು ಎಡವಿಬಿದ್ದರು.

ಅನ್ಯದೇವರು ಯಹೂದಿಯರ ದೇವರು ಒಂದೆ – ನಂಬಿಕೆಯೇ ದೇವರು ಬೈಬಲ್

ರೋಮಾಪುರದವರಿಗೆ 3:29 ದೇವರು ಯೆಹೂದ್ಯರಿಗೆ ಮಾತ್ರ ದೇವರಾಗಿದ್ದಾನೋ? ಅನ್ಯಜನಗಳಿಗೆ ಸಹ ದೇವರಲ್ಲವೆ? ಹೌದು ದೇವರು ಒಬ್ಬನೇ ಹೀಗಿರಲಾಗಿ ಆತನು

ಅನ್ಯಜನರಿಗೂ ಸಹ ದೇವರಾಗಿದ್ದಾನೆ. 30 ಆತನು ಸುನ್ನತಿಯವರನ್ನು ನೀತಿವಂತರೆಂದು ನಿರ್ಣಯಿಸುವುದಕ್ಕೆ ಅವರ ನಂಬಿಕೆಯೇ ಆಧಾರ. ಹಾಗೆಯೇ ಸುನ್ನತಿಯಿಲ್ಲದವರನ್ನು ನಿರ್ಣಯಿಸುವುದಕ್ಕೂ ನಂಬಿಕೆಯೇ ಕಾರಣ. 31 ಹಾಗಾದರೆ ನಂಬಿಕೆಯಿಂದ ಧರ್ಮಶಾಸ್ತ್ರವನ್ನು ತೆಗೆದು ಹಾಕುತ್ತೇವೋ? ಎಂದಿಗೂ ಇಲ್ಲ. ಧರ್ಮಶಾಸ್ತ್ರವನ್ನು ಸ್ಥಿರಪಡಿಸುತ್ತೇವಷ್ಟೇ.

**ಯಹೂದಿಯರ ಧರ್ಮ ಶಾಸ್ತ್ರ ಮತ್ತು ಅಂದಿನ ಆಚಾರಗಳನ್ನು ಏಸು ಕ್ರಿಸ್ತನ ಬೈಬಲ್ಲಿನ ರೋಮಾಪುರದವರಿಗೆ 7: 7 ರಿಂದ 13 ರವರೆಗೆ ಹೇಳಿರುವುದೇನೆಂದರೆ ಧರ್ಮ ಶಾಸ್ತ್ರ ಆಜ್ಞೆಗಳು ಪಾಪವನ್ನು ಮಾಡುವತ್ತ ತನ್ನ ದಾರಿ ನೋಡಿಕೊಂಡಿದೆ:-** 7:7 ಹಾಗಾದರೆ ಏನು ಹೇಳೋಣ? ಧರ್ಮಶಾಸ್ತ್ರವು ಪಾಪಸ್ವರೂಪವೋ? ಎಂದಿಗೂ ಅಲ್ಲ. ಧರ್ಮಶಾಸ್ತ್ರವಿಲ್ಲದಿದ್ದರೆ ಪಾಪವೆಂದರೆ ಏನೆಂದು ನನಗೆ ಗೊತ್ತಾಗುತ್ತಿರಲಿಲ್ಲ. ದೃಷ್ಟಾಂತವಾಗಿ ದುರಾಶೆ ಪಡಬೇಡ ಎಂದು ಧರ್ಮಶಾಸ್ತ್ರವು ಹೇಳದಿದ್ದರೆ ದುರಾಶೆಯಂದರೆ ಏನೆಂದು ನನಗೆ ತಿಳಿಯುತ್ತಿರಲಿಲ್ಲ. 7:8 ಆದರೆ ಪಾಪವು ಈ ಆಜ್ಞೆಯನ್ನು ಉಪಯೋಗಿಸಿಕೊಂಡು ಸಕಲ ವಿಧವಾದ ದುರಾಶೆಗಳನ್ನು ನನ್ನಲ್ಲಿ ಹುಟ್ಟಿಸಿತು. ಧರ್ಮಶಾಸ್ತ್ರವು ಇಲ್ಲದಿರುವಾಗ ಪಾಪವು ಸತ್ತಂತೆ. 7:9 ಮೊದಲು ನಾನು ಧರ್ಮಶಾಸ್ತ್ರವಿಲ್ಲದವನಾಗಿದ್ದು ಜೀವದಿಂದಿದ್ದೆನು. ಆಜ್ಞೆಯು ಬಂದಾಗ ಪಾಪಕ್ಕೆ ಜೀವ ಬಂದಿತು. ನಾನು ಸತ್ತೆನು. 7:10 ಜೀವಿಸುವುದಕ್ಕಾಗಿ ಕೊಟ್ಟಿರುವ ಆಜ್ಞೆಯೇ ಮರಣಕ್ಕೆ ಕಾರಣವಾಯಿತೆಂದು ನನಗೆ ಕಂಡು ಬಂದಿತು. 7:11 ಹೇಗೆಂದರೆ, ಆಜ್ಞೆಯ ಮೂಲಕವೇ ಪಾಪವು ಸಮಯ ಸಾಧಿಸಿ ನನ್ನನ್ನು ವಂಚಿಸಿತು; ಆ ಕಟ್ಟಳೆಯ ಮೂಲಕವೇ ನನ್ನನ್ನು ಕೊಂದು ಹಾಕಿತು. 7:12 ಹೀಗಿರಲಾಗಿ ಧರ್ಮಶಾಸ್ತ್ರವು ಪರಿಶುದ್ಧವಾದದ್ದು. ಮತ್ತು ಆಜ್ಞೆಯು ಪರಿಶುದ್ಧವೂ, ನ್ಯಾಯವೂ ಮತ್ತು ಒಳ್ಳೆಯದೇ ಆಗಿದೆ. 7:13 ಹಾಗಾದರೆ ಒಳ್ಳೆಯದೆ ನನಗೆ ಮರಣಕ್ಕೆ ಕಾರಣವಾಯಿತೋ? ಹಾಗೆ ಎಂದಿಗೂ ಅಲ್ಲ. ಪಾಪವೇ ಮರಣಕ್ಕೆ ಕಾರಣವಾದದ್ದು. ಅದು ಹಿತವಾದದರ ಮೂಲಕ ನನಗೆ ಮರಣವನ್ನು ಉಂಟುಮಾಡಿದ್ದರಿಂದ ಪಾಪವೇ ಎಂದು ಕಾಣಿಸಿಕೊಂಡಿತು. ಮತ್ತು ಆಜ್ಞೆಯ ಮೂಲಕ ಪಾಪವು ಕೇವಲ ಪಾಪಸ್ವರೂಪವೇ ಎಂದು ಸ್ಪಷ್ಟವಾಯಿತು.

**ಯಹೂದಿಯರಲ್ಲಿ ಅಸೂಯೆ ಮೂಡಿಸಲು ಕ್ರಿಸ್ತನ ಸಂಚು, ಅವರನ್ನು ಸಮಾಜದಿಂದ ಕಡಿದಂತೆ ನಿನ್ನನ್ನು ಕಡಿಯುವೆ ಎಂದು ಭಕ್ತನಿಗೆ ಬೆದರಿಕೆ:-**

ರೋಮಾಪುರದವರಿಗೆ ಅಧ್ಯಾಯ 11: 1 ಹಾಗಾದರೆ ದೇವರು ತನ್ನ ಸ್ವಂತ ಜನರನ್ನು ಬೇಡವೆಂದು ತಿರಸ್ಕರಿಸಿದನೋ ಎಂದು ಕೇಳುತ್ತೇನೆ ಎಂದಿಗೂ ಇಲ್ಲ. ನಾನು ಸಹ

ಇಸ್ರಾಯೇಲ್ಯನು, ಅಬ್ರಹಾಮನ ಸಂತತಿಯವನು, ಬೆನ್ಯಾಮೀನನ ಕುಲದವನು ಆಗಿದ್ದೇನಲ್ಲಾ. 2 ದೇವರು ತಾನು ಮುಂದಾಗಿ ತನ್ನ ಜನರಾಗುವುದಕ್ಕೆ ಗೊತ್ತುಮಾಡಿಕೊಂಡಿದ್ದ ಪ್ರಜೆಗಳನ್ನು ತಳ್ಳಿಬಿಡಲಿಲ್ಲ. ............ 5 ಅದರಂತೆ ಈಗಿನ ಕಾಲದಲ್ಲಿಯೂ ದೇವರ ಕೃಪೆಯಿಂದ ಆರಿಸಿಕೊಂಡವರಾದ ಕೆಲವರು ಉಳಿದಿದ್ದಾರೆ... 11 ಹಾಗಾದರೆ ಅವರು ಬಿದ್ದೇಹೋಗುವಂತೆ ಎಡವಿದರೇನು ಎಂದು ಕೇಳುತ್ತೇನೆ.... 12 ಅವರು ಬಿದ್ದುಹೋದದ್ದು ಸರ್ವಲೋಕದ ಸೌಭಾಗ್ಯಕ್ಕೂ, ಅವರು ಸೋತುಹೋದದ್ದು ಅನ್ಯಜನಗಳ ಸಂಪತ್ತಿಗೂ ಮಾರ್ಗವಾಗಿರಲಾಗಿ ಅವರ ಪೂರ್ಣ ಪುನಃಸ್ಥಾಪನೆಯು ಪ್ರಪಂಚಕ್ಕೆ ಎಷ್ಟೋ ಹೆಚ್ಚಾದ ಭಾಗ್ಯಕ್ಕೆ ಕಾರಣವಾಗುವುದು. 14 ಇದರಿಂದಾಗಿ ಸ್ವಜನರಲ್ಲಿ ಅಸೂಯೆಯನ್ನು ಕೆರಳಿಸಿ nಅವರಲ್ಲಿ ಕೆಲವರನ್ನು ರಕ್ಷಣೆಯ ಮಾರ್ಗಕ್ಕೆ ತಂದೇನು.... 15 ಯಾಕೆಂದರೆ ಇಸ್ರಾಯೇಲ್ಯರನ್ನು ನಿರಾಕರಿಸುವುದರಿಂದ ಲೋಕವು ದೇವರ ಸಂಗಡ ಸಂಧಾನವಾಗುವುದಕ್ಕೆ ಮಾರ್ಗವಾದ ಮೇಲೆ ಅವರನ್ನು ಸೇರಿಸಿಕೊಳ್ಳುವುದರಿಂದ ಏನಾಗುವುದು? ಸತ್ತವರು ಜೀವಿತರಾಗಿ ಎದ್ದುಬಂದತಾಗುವುದಿಲ್ಲವೇ.... 20 ನೀನು ಹೇಳುವುದು ನಿಜ. ಅವರು ನಂಬದೇ ಹೋದ್ದದರಿಂದ ಮುರಿದುಹಾಕಲ್ಪಟ್ಟರು. ನೀನು ನಿಂತಿರುವುದು ನಂಬಿಕೆಯಿಂದಲೇ. 21 ಗರ್ವಪಡಬೇಡ, ಭಯದಿಂದಿರು. ದೇವರು ಹುಟ್ಟುಕೊಂಬೆಗಳನ್ನು ಉಳಿಸದೆ ಇದ್ದ ಮೇಲೆ ನಿನ್ನನ್ನೂ ಉಳಿಸುವುದಿಲ್ಲ. 22 ಆದ್ದರಿಂದ ದೇವರ ದಯೆಯನ್ನೂ, ದಂಡನೆಯನ್ನು ನೋಡು; ಬಿದ್ದವರಿಗೆ ದಂಡನೆಯನ್ನೂ, ನೀನು ದೇವರ ದಯೆಯನ್ನು ಆಶ್ರಯಿಸಿಕೊಂಡೇ ಇದ್ದರೆ ಆತನ ದಯೆಯನ್ನು ಹೊಂದುವಿ. ಇಲ್ಲವಾದರೆ ನಿನ್ನನ್ನೂ ಕಡಿದುಹಾಕುವನು.

ಇಸ್ರಾಯೇಲರ ಸಂತತಿಗಳನ್ನೇ ಕಸಿ ಮಾಡಿ ಬದಲಾಯಿಸುವ ನೇರ ಬೆದರಿಕೆ ಬೈಬಲಿನಲ್ಲಿ:-

ರೋಮಾಪುರದವರಿಗೆ ಅಧ್ಯಾಯ 11: 23 ಇಸ್ರಾಯೇಲ್ಯರ ಕೂಡ ಇನ್ನು ಅಪನಂಬಿಕೆಯಲ್ಲಿ ನಿಲ್ಲದ ಪಕ್ಷಕ್ಕೆ ಅವರನ್ನೂ ಕಸಿಮಾಡುವನು. ದೇವರು ಅವರನ್ನು ತಿರುಗಿ ಕಸಿಕಟ್ಟುವುದಕ್ಕೆ ಸಮರ್ಥನಾಗಿದ್ದಾನೆ. 24 ನೀನು ಹುಟ್ಟು ಕಾಡುಮರದಿಂದ ಕಡಿದು ತೆಗೆಯಲ್ಪಟ್ಟು ನಿನಗೆ ಸಂಬಂಧಪಡದ ಊರು ಮರದಲ್ಲಿ ಕಸಿಕಟ್ಟಿಸಿಕೊಂಡವನಾದ ಮೇಲೆ ಅದರಲ್ಲಿ ಹುಟ್ಟಿದ ಕೊಂಬೆಗಳಾಗಿರುವ ಅವರು ಸ್ವಂತ ಮರದಲ್ಲಿ ಕಸಿಕಟ್ಟಲ್ಪಡುವುದು ಎಷ್ಟೋ ಯುಕ್ತವಾಗಿದೆಯಲ್ಲವೇ.

ಯಹೂದಿಯರ ಬಳಿ ದೇವರು ಒಡಂಬಡಿಕೆ ಕ್ರಿಸ್ತರಲ್ಲಿ ಮುಂದುವರಿಸಲು ಬೋದನೆ – ಅಂದರೆ ಅನ್ಯ ಧರ್ಮೀಯರನ್ನೆಲ್ಲಾ ದೇವರ ರಾಜ್ಯಕ್ಕೆ ಮತಾಂತರ ಮಾಡಿಸುವ ಒಡಂಬಡಿಕೆ – ಅದು ಪಾಪದ ಕೆಲಸ ಅಂತ ದೇವರೆ ಹೇಳುತ್ತಾರೆ– ಆ ಪಾಪವನ್ನು ಪರಿಹರಿಸುತ್ತಾರಂತೆ– ಅದನ್ನು (ಮತಾಂತರ ಗೊಳಿಸುವ ಪಾಪವನ್ನು) ಯಹೂದಿಯರು ಬಿಟ್ಟರಂತೆ ಹಾಗಾಗಿ ಕ್ರೈಸ್ತರು ಆ ಕಾರ್ಯಕ್ಕೆ ಉದಯ:–

ರೋಮಾಪುರದವರಿಗೆ ಅಧ್ಯಾಯ 11: 25 ಸಹೋದರರೇ ನಿಮ್ಮನ್ನು ನೀವೇ ಬುದ್ಧಿವಂತರೆಂಬುದಾಗಿ ಎಣಿಸಿಕೊಳ್ಳದೆ ಇರಲು ಇದುವರೆಗೆ ಗುಪ್ತವಾಗಿದ್ದ ಒಂದು ಸಂಗತಿ ನಿಮಗೆ ತಿಳಿಸಬೇಕೆಂದು ಅಪೇಕ್ಷಿಸುತ್ತೇನೆ ಅದೇನೆಂದರೆ ಇಸ್ರಾಯೇಲ್ಯರಲ್ಲಿ ಒಂದು ಪಾಲು ಜನರಿಗೆ ಉಂಟಾದ ಮೊಂಡತನವು ಯಾವಾಗಲೂ ಇರದೆ ಅನ್ಯಜನಗಳ ಸಮುದಾಯವು ದೇವರ ರಾಜ್ಯದಲ್ಲಿ ಸೇರುವ ತನಕ ಮಾತ್ರ ಇರುವುದು. 26 ಆ ನಂತರ ಇಸ್ರಾಯೇಲ್ ಜನರೆಲ್ಲರೂ ರಕ್ಷಣೆಹೊಂದುವರು. ........ 27 ನಾನು ಅವರ ಸಂಗಡ ಮಾಡಿಕೊಂಡ ಈ ಒಡಂಬಡಿಕೆಯು ನಾನು ಅವರ ಪಾಪಗಳನ್ನು ಪರಿಹರಿಸುವಾಗ ನೆರವೇರುವುದು. ಎಂದು ಬರೆದಿದೆ. 28 ಅವರು ಸುವಾರ್ತೆಯನ್ನು ಬೇಡವೆಂದದ್ದರಿಂದ ದೇವರು ನಿಮಗೆ ಹಿತವನ್ನು ಉಂಟುಮಾಡಿ ಅವರನ್ನು ಶತ್ರುಗಳೆಂದೆಣಿಸಿದ್ದಾನೆ. ಆದರೂ ಅವರು ತಾನು ಆರಿಸಿಕೊಂಡ ಅಬ್ರಹಾಮು, ಇಸಾಕ, ಯಾಕೋಬರೆಂಬ ಪಿತೃಗಳ ವಂಶಸ್ಥರಾಗಿರುವುದರಿಂದ ಅವರನ್ನು ಪ್ರಿಯರೆಂದು ಎಣಿಸಿದ್ದಾನೆ. 29 ದೇವರು ವರಗಳನ್ನು ಅನುಗ್ರಹಿಸುವುದಕ್ಕೆ ಜನರನ್ನು ಕರೆಯುವುದ್ದಕ್ಕೂ ಮನಸ್ಸು ಬದಲಾಯಿಸುವವನಲ್ಲ. 30 ಯಾವ ಪ್ರಕಾರ ನೀವು ಪೂರ್ವದಲ್ಲಿ ಅವಿಧೇಯರಾಗಿದ್ದರೂ ಈಗ ಅವರ ಅವಿಧೇಯತೆಯ ದೆಸೆಯಿಂದ ಕರುಣೆ ಹೊಂದಿದ್ದೀರೋ, 31 ಅದೇ ಪ್ರಕಾರವಾಗಿ ಇಸ್ರಾಯೇಲ್ಯರೂ ಈಗ ಅವಿಧೇಯರಾಗಿದ್ದರೂ ನಿಮಗೆ ದೊರಕಿದ ಕರುಣೆಯನ್ನು ಅವರು ಹೊಂದುವರು. 32 ಯಾಕೆಂದರೆ ದೇವರು ಎಲ್ಲರಿಗೂ ಕರುಣೆಯನ್ನು ತೋರಿಸಬೇಕೆಂಬ ಉದ್ದೇಶವುಳ್ಳವನಾಗಿದ್ದು ಎಲ್ಲರನ್ನೂ ಅವಿಧೇಯತೆಯೆಂಬ ದುಸ್ಥಿತಿಯಲ್ಲಿ ಮುಚ್ಚಿಹಾಕಿದ್ದಾನೆ. 33 ಆಹಾ ದೇವರ ಐಶ್ವರ್ಯವೂ, ಜ್ಞಾನವೂ, ವಿವೇಕವೂ ಅಗಾಧ. ಆತನ ನ್ಯಾಯತೀರ್ಪುಗಳು ಎಷ್ಟೋ ಆಗಮ್ಯವಾದದ್ದು. ಆತನ ಮಾರ್ಗಗಳು ಆಗೋಚರವಾದವುಗಳೂ ಆಗಿವೆ. 34 ಕರ್ತನ ಮನಸ್ಸನ್ನು ತಿಳಿದುಕೊಂಡವರಾರು? ಆತನಿಗೆ ಆಲೋಚನಾಕರ್ತನಾಗಿದ್ದವನು ಯಾರು? 35 ಮುಂಗಡವಾಗಿ ಆತನಿಗೆ ಕೊಟ್ಟು ಆನಂತರ ಪ್ರತಿಫಲವನ್ನು ತೆಗೆದುಕೊಳ್ಳುವವನು ಯಾರು? 36 ಸಮಸ್ತವೂ

ಆತನಿಂದ ಉತ್ಪತ್ತಿಯಾಗಿ, ಆತನಿಂದ ನಡೆಯುತ್ತಾ, ಇರುವುದೆಲ್ಲವೂ ಅತನಿಗೋಸ್ಕರವೇ. ಆತನಿಗೇ ಸದಾಕಾಲವೂ ಮಹಿಮೆಯುಂಟಾಗಲಿ ಸ್ತೋತ್ರ. ಅಮೆನ್. (ಖುರಾನಿನಲ್ಲೂ ಅಲ್ಲಾಹರಿಗೆ ಪ್ರವಾದಿಗೆ ಮಹಿಮೆ ಯುಂಟಾಗಲಿ ಎಂದು ಎಲ್ಲಾ ಕಡೆ ಇದೆ)

ಅನೇಕ ಪ್ರವಾದಿಗಳನ್ನು ಏಸು ಕ್ರಿಸ್ತನನ್ನು ಕೊಂದ ಆರೋಪ ಯಹೂದಿಯರ ಮೇಲೆ ಹಾಕುತ್ತೆ ಬೈಬಲ್:–

1 ಥೆಸಲೊನೀಕದವರಿಗೆ 2:14 ಸಹೋ ದರರೇ, ನೀವು ಯೂದಾಯದಲ್ಲಿ ಕ್ರಿಸ್ತ ಯೇಸುವಿನ ಲ್ಲಿರುವ ದೇವರ ಸಭೆಗಳನ್ನು ಅನುಸರಿಸುವವರಾದಿರಿ. ಅವರು ಯೆಹೂದ್ಯರಿಂದ ಅನುಭವಿಸಿದಂಥ ಕಷ್ಟಗಳನ್ನು ನೀವೂ ನಿಮ್ಮ ಸ್ವದೇಶದವರಿಂದ ಅನುಭವಿಸಿದಿರಿ.

1 ಥೆಸಲೊನೀಕದವರಿಗೆ 2:15 ಆ ಯೆಹೂದ್ಯರು ಕರ್ತನಾದ ಯೇಸುವನ್ನು ಮತ್ತು ತಮ್ಮ ಸ್ವಂತ ಪ್ರವಾದಿಗಳನ್ನು ಕೊಂದರು; ನಮ್ಮನ್ನು ಹಿಂಸಿಸಿದರು; ಅವರು ದೇವರನ್ನು ಮೆಚ್ಚಿಸುವವರಲ್ಲ, ಎಲ್ಲಾ ಮನುಷ್ಯರಿಗೂ ವಿರೋಧಿಗಳಾಗಿದ್ದಾರೆ.

ಟೋರಾ ಕಾನೂನು ವಿಚಾರವಾಗಿಯೇ ಜುದಾಯಿಸಮ್ (ಯಹೂದಿ ಮತ) ಟೀಕೆಗೆ ಗುರಿಯಾಯಿತು, ಕೆಲವು ಆಚರಣೆಗಳು ಕೆಲವು ಸಂಪ್ರದಾಯಗಳು ಸರಿಯಲ್ಲ, ಅದು ಏಕಚಕ್ರಾದಿಪತ್ಯಕ್ಕೆ ಅನುವಾಗುತ್ತೆ, ಬೇರೆ ಸಮುದಾಯಗಳ ಜೊತೆಯಲ್ಲಿ ಇರಲಾಗದೆ ಅವರೇ ಏಕಾಂಗಿಯಾಗಬೇಕಾಗುತ್ತದೆ ಎಂಬ ಟೀಕೆಗೆ ಗುರಿಯಾಯಿತು. ಆದರೆ ಅದನ್ನೇ ಕ್ರೈಸ್ತರು ಇನ್ನೊಂದು ರೀತಿಯಲ್ಲಿ ಶಾಂತಿ/ಸಹೋದರರೆ/ಪ್ರೀತಿಸು ಎಂದು ಹೇಳಿಕೊಳ್ಳುತ್ತಾ ಇನ್ಕವಿಸಿಷನ್ ಜಗತ್ತಿನಾದ್ಯಂತ ಮಾಡಿದ್ದು ಲೆಕ್ಕವೇ ಇಲ್ಲ. ಆದ್ದರಿಂದಲೇ ಇಂದು ಕ್ರೈಸ್ತರಲ್ಲೂ ಅನೇಕ ಒಳಜಗಳಗಳಿಂದ ಒಳಪಂಗಡ ಪ್ರಾರಂಬವಾಯಿತು. ಇವೆರಡೂ ಮತಗಳಲ್ಲಿನ ಮೂಲ ಸಾರವನ್ನು ಹೊತ್ತು ಹೊಸಾ ದೇವರ ಹೆಸರನ್ನು ಇಟ್ಟುಕೊಂಡು ಯಹೂದಿಯರ ಇಲೋಹಿಮ್ ಹೆಸರನ್ನು ಅಲ್ಲಾಹನೆಂದು ಬರೆದು ಮುಂದಾಗಿ ಪ್ರವಾದಿಯಾಗಲು ಬಯಸಿದರೆ ಮೊಹಮ್ಮದ್.

ಯಹೂದಿಗಳ ಕ್ಷೀಣತೆಗೆ ಕಾರಣ?

ನಾವು ಒಂದೇ ಜಾಗತಿಕ ಸಮುದಾಯಕ್ಕೆ ಸೇರಿದ್ದೇವೆ ಎಂದು ತಿಳಿಯುತ್ತಾರೆ. ಯಹೂದಿ ಬಾಲಕರಿಗೆ ಎಂಟು ವರ್ಷ ವಯಸ್ಸಿನಲ್ಲಿ ಸುನ್ನತಿ ಮಾಡಲಾಗುತ್ತದೆ. ಈ ಬಗ್ಗೆ ದೇವರು, ಅಬ್ರಹಾಮನಿಗೆ ನಾಲ್ಕು ಸಾವಿರ ವರ್ಷಗಳ

ಹಿಂದೆ ಸೂಚನೆಗಳನ್ನು ನೀಡಿದ್ದನಂತೆ. ಯಹೂದಿಗಳ ಪ್ರಕಾರ ಈ ಜಗತ್ತಿನಲ್ಲಿ ಒಬ್ಬನೇ ಒಬ್ಬ ದೇವರಿದ್ದಾನೆ. ಅವನನ್ನು ಬಿಟ್ಟರೆ, ಬೇರೆ ಯಾವುದೇ ದೈವ ಇಲ್ಲ, ದೇವರದ್ದು ನಿರಾಕಾರ ಸ್ವರೂಪ, ದೇವರು ತರ್ಕಕ್ಕೆ ಸಿಗುವವನಲ್ಲ, ದೇವರು ಯಾರದೇ ನೆರವಿಲ್ಲದೆ ಈ ಜಗತ್ತನ್ನು ಸೃಷ್ಟಿಮಾಡಿದ್ದಾನೆ. ದೇವರು ಸರ್ವಾಂತರ್ಯಾಮಿ, ಸರ್ವಶಕ್ತ, ದೇವರು ಕಾಲಾತೀತ. ಯಹೂದಿ ಧರ್ಮ ಪ್ರಚಲಿತಕ್ಕೆ ಬರುವ ಮುನ್ನ, ಜನರು ಹತ್ತಾರು ದೇವರುಗಳನ್ನು ನಂಬುತ್ತಿದ್ದರು. ಆದರೆ, ಯಹೂದಿ ಧರ್ಮ ಏಕದೇವೋಪಾಸನೆಯನ್ನು ಆಚರಣೆಗೆ ತಂದಿತ್ತು. ಯಹೂದಿ ಧರ್ಮ, ಇಸ್ಲಾಮ್ ಧರ್ಮ ಮತ್ತು ಕ್ರೈಸ್ತ ಧರ್ಮ ಇವು ಮೂರಕ್ಕೂ ಕೂಡ ಅಬ್ರಹಾಮನೇ ಮೂಲ. ಯಹೂದಿಗಳು, ಮಹಮದ್ ಓರ್ವ ಪ್ರವಾದಿ ಅನ್ನುವುದನ್ನೇ ಒಪ್ಪಿರಲಿಲ್ಲ, ಅವರಿಗೆ ತೊಂದರೆ ಕೊಟ್ಟಿದ್ದರು, ಅನ್ನುವ ನಂಬಿಕೆಗಳ ಕಾರಣಕ್ಕಾಗಿ ಮುಸ್ಲಿಮರು ಯಹೂದಿಗಳ ಮೇಲೆ ದ್ವೇಷ ಬೆಳೆಸಿಕೊಂಡಿದ್ದರಂತೆ. ಅದೇ ರೀತಿ, ಬೈಬಲ್‌ನ ಹೊಸ ಒಡಂಬಡಿಕೆಯಲ್ಲಿ ಹೇಳಿರುವಂತೆ, ಜೆರೂಸಲೇಮಿನ ಯಹೂದಿಗಳು, ಏಸುಕ್ರಿಸ್ತನ ಮೇಲೆ ಧರ್ಮನಿಂದನೆ ಆರೋಪ ಹೊರಿಸಿ ಶಿಲುಬೆಗೇರಿಸುತ್ತಾರೆ. ಹೀಗಾಗಿ, ಆ ಹೊತ್ತಿನಿಂದಲೂ ಸುಮಾರು 2 ಸಾವಿರ ವರ್ಷಗಳವರೆಗೆ ಯಹೂದಿಗಳು ದೇವರ ಕೊಲೆಗಾರರು ಎಂಬ ಆರೋಪ ಹೊತ್ತಿದ್ದಾರೆ. ಈ ಕಾರಣಕ್ಕಾಗಿಯೇ ಯಹೂದಿಗಳು, ಇಡೀ ಯೂರೋಪ್ ಖಂಡದಲ್ಲಿ ಬೇರೆ ಇನ್ಯಾರೂ ಅನುಭವಿಸದಷ್ಟು ಹಿಂಸೆ ಅನುಭವಿಸಬೇಕಾಯಿತು. ಯಹೂದಿ ಪ್ರಾರ್ಥನೆಯಲ್ಲಿ ಯಾವಾಗಲೂ ನಾವು ಮತ್ತು ನಮ್ಮ ಎಂಬ ಪದಗಳನ್ನೇ ಬಳಸಲಾಗುತ್ತದೆ. 'ಕ್ರಿಸ್ತನ ಹತ್ಯೆಗೆ ಯಹೂದಿಗಳಿಗಿಂತಲೂ ರೋಮನ್ನರೇ ಕಾರಣವಿದ್ದಿರಬಹುದು', ಎಂದೂ ಕೂಡ ಕೆಲವು ಇತಿಹಾಸಕಾರರು ಹೇಳುತ್ತಾರೆ. ಆದರೆ, ಇವತ್ತಿನ ದಿನಗಳಲ್ಲಿ ಇಸ್ರೇಲ್ ಬಗ್ಗೆ ಮುಸ್ಲಿಮರಿಗೆ ಇರುವ ಆಕ್ರೋಶಕ್ಕೆ ಕಾರಣ, ಅವರು ಪ್ಯಾಲಸ್ತೀನ್ ದೇಶದ ಭೂ ಭಾಗಗಳನ್ನು ಆಕ್ರಮಿಸಿಕೊಂಡಿದ್ದಾರೆ ಅನ್ನುವುದು.

ಜರ್ಮನಿಯ ಸರ್ವಾಧಿಕಾರಿ ಅಡಾಲ್ಫ್ ಹಿಟ್ಲರ್ ಇಡೀ ಯಹೂದಿ ಜನಾಂಗವನ್ನೇ ಸರ್ವನಾಶ ಮಾಡಬೇಕೆಂಬ ಹುಚ್ಚು ಹಂಬಲ ಹೊಂದಿದ್ದ. ಸುಮಾರು 1933ರಿಂದ 1945ರ ನಡುವೆ ಸುಮಾರು 60 ಲಕ್ಷ ಯಹೂದಿಗಳ ಮಾರಣಹೋಮ ನಡೆಸಿದ್ದ. ಇವರಲ್ಲಿ ಹದಿನೈದು ಲಕ್ಷ ಮಕ್ಕಳೂ ಸೇರಿದ್ದರು. 1947 ರಲ್ಲಿ ವಿಶ್ವಸಂಸ್ಥೆ ಪ್ಯಾಲಸ್ತೇನ್ ಅನ್ನು ಯಹೂದಿ ಮತ್ತು ಅರಬ್ ಪ್ರಾಂತವಾಗಿ ವಿಂಗಡಿಸಿತ್ತು ಆದರೆ ಜೆರುಸಿಲಮ್ ಮುಫ್ತಿಯೊಬ್ಬರು ಯಹೂದಿಗಳನ್ನು ಕೊಲ್ಲಿ ಎಂದು ಸಾಮೂಹಿಕ ಜಿಹಾದ್ ಸಾರಿದ್ದರು.




ಆದರೆ, 1965ರಲ್ಲಿ ವ್ಯಾಟಿಕನ್ ಒಂದು ಘೋಷಣಾ ಪತ್ರ ಪ್ರಕಟಿಸಿತ್ತು. ಅದರಲ್ಲಿ, ಏಸುಕ್ರಿಸ್ತನನ್ನು ಶಿಲುಬೆಗೇರಿಸಿದ್ದರ ಪ್ರಶ್ನೆ ಬಗ್ಗೆ ಹೊಸರೀತಿಯ ವಿವರಣೆ ನೀಡಲಾಗಿತ್ತು. ಕ್ರಿಸ್ತನಿಗೆ ಆದ ಅನ್ಯಾಯಕ್ಕೆ, ಇವತ್ತಿನ ಯಹೂದಿಗಳನ್ನು ಹೊಣೆಗಾರರನ್ನಾಗಿಸಲು ಸಾಧ್ಯವಿಲ್ಲ ಮತ್ತು ಅದೇ ರೀತಿಯಲ್ಲಿ, ಏಸುವನ್ನು ಶಿಲುಬೆಗೇರಿಸಿದ ಸಮಯದಲ್ಲಿ ಜೀವಿಸಿದ್ದ ಎಲ್ಲಾ ಯಹೂದಿಗಳನ್ನೂ ಕೂಡ ತಪ್ಪಿತಸ್ಥರು ಎಂದು ಹೇಳಲು ಸಾಧ್ಯವಿಲ್ಲ ಎಂದು ಘೋಷಿಸಲಾಗಿತ್ತು. ಇದು, ಯಹೂದಿಗಳ ಬಗ್ಗೆ ಕ್ರಿಶ್ಚಿಯನ್ನರಿಗೆ ಇದ್ದ ಧೋರಣೆಗಳಲ್ಲಿ ಒಂದಿಷ್ಟು ಬದಲಾವಣೆಗೆ ಕಾರಣವಾಗಿತ್ತು. 1967 ರಲ್ಲಿ ಈಜಿಪ್ಟಿನ ನಾಸಿರ್ ರವರು ಇಸ್ರೇಲ್ ಅನ್ನು ನಾಶ ಮಾಡುವುದೇ ನಮ್ಮ ಗುರಿ ಎಂದು ಘೋಷಿಸಿದರು. ನಂತರ ಯಾಸಾರ್ ಅರಾಫತ್ ಪ್ಯಾಲಸ್ತೇನ್ ಮುಕ್ತ ಮಾಡಿಸುವ ಹೋರಾಟ.




ಹೀಗೆ ಒಂದು ಏಕದೇವ ಉಪಾಸಕ ಜನಾಂಗ ಯಾವ ತಪ್ಪಿಗೆ ನಾಷವಾಯಿತು ಅದು ನಂತರದ ಪ್ರವಾದಿ ಮೊಹಮ್ಮದರನ್ನು ಒಪ್ಪದಿದುದ್ದಕ್ಕೋ ನಂತರದ ಏಕದೇವೋಪಾಸಕರ ಜನಾಂಗಕ್ಕೆ ಮತ ಪರಿವರ್ತನೆ ಆಗದೆ ಇರುವುದಕ್ಕೋ ನಾವು ಗಂಭೀರವಾಗಿ ಯೋಚಿಸಬೇಕಿರುತ್ತದೆ. ಯಹೂದಿಗಳ ಕ್ಷೀಣತೆ ಯಾವುದೋ ಹೊರ ದೇಶದಿಂದ ಬಂದ ಧರ್ಮ/ಮತ ದಿಂದ ಆದುದ್ದಲ್ಲ. ಕ್ರಸ್ತರು ಮೂಲ ಯಹೂದಿಗಳೆ, ಮೊಹಮ್ಮಡನರು ಮೂಲ ಯಹೂದಿಗಳು/ ಕ್ರೈಸ್ತರು/ ಬಹುದೇವಾರಾಧಕರು/ ವಿಗ್ರಹಾರಾಧಕರು/ ಬುಡಕಟ್ಟು ಜನಾಂಗ ಇತ್ಯಾದಿ. ಅವರ ಮೂಲ ಬೋಧನಾ

ತತ್ವಗಳ ಅನ್ವೇಷಕರೇ ದ್ವೇಶಕ್ಕೆ ಒಳಗಾದ ಈಗಲೂ ಆಗುತ್ತಿರುವ ಹಿಂದಿನ ರಹಸ್ಯವೇ ನಾನು ಚರ್ಚಿಸ ಹೊರಟಿರುವುದು.

ಇಲ್ಲಿ ಮುಸ್ಲಿಮರ ವಾದ ಏನೆಂದರೆ ಅಲ್ಲಾಹ ಮಾತ್ರ ದೇವರು, ಹಾಗಾದರೆ ಅಲ್ಲಾಹ ಶಬ್ದ ಹೇಗೆ ಪ್ರಾರಂಬವಾಯಿತು ಎನ್ನುವುದನ್ನು ಗಮನಿಸಿದಾಗ 'ಅಲ್ ಲಾಹ" 'ಇಲ್ ಇಲಾಹ" ಇಸ್ರೇಲಿನ ಹೀಬ್ರೂ ಬಾಷೆಯಿಂದ ಪಡೆಯಲಾಗಿದ್ದು ಎಂದು ಅನುವಾದಿಸುತ್ತಾರೆ. ಕೆಲವರು ಕೆಲವು ಪ್ರಾಚ್ಯ ಸಂಶೋಧನಾ ಉಲ್ಲೇಕಗಳನ್ನು ನೀಡಿ ಅಲ್ಲಾಹ ಎಂದರೆ ಚಂದ್ರನ ಚಿಹ್ನೆ ಇರುವ ದೇವರು ಎಂದು ಉಲ್ಲೇಕಿಸುತ್ತಾರೆ.

# ಇಸ್ಲಾಮ್ ಮತ ನಶಿಸುತ್ತದೆ - ಶಾಹಿ ಮುಸ್ಲಿಮ್

It is narrated on the authority of Abu Huraira that the Messenger of Allah (ﷺ) said:
Islam initiated as something strange, and it would revert to its (old position) of being strange. so good tidings for the stranger.

حَدَّثَنَا مُحَمَّدُ بْنُ عَبَّادٍ، وَابْنُ أَبِي عُمَرَ، جَمِيعًا عَنْ مَرْوَانَ الْفَزَارِيِّ، قَالَ ابْنُ عَبَّادٍ حَدَّثَنَا مَرْوَانُ، عَنْ يَزِيدَ، - يَعْنِي ابْنَ كَيْسَانَ - عَنْ أَبِي حَازِمٍ، عَنْ أَبِي هُرَيْرَةَ، قَالَ قَالَ رَسُولُ اللَّهِ صلى الله عليه وسلم
" بَدَأَ الإِسْلاَمُ غَرِيبًا وَسَيَعُودُ كَمَا بَدَأَ غَرِيبًا فَطُوبَى لِلْغُرَبَاءِ " .

https://quranx.com/hadith/Musl...

Sahih Muslim / Book 1 / Hadith 270

ಶಾಹಿ ಮುಸ್ಲಿಮ್ ಪುಸ್ತಕ-1, ಹದಿತ್-270 - ಇದು ಅಬು ಹೌರೈರ ಅಧಿಕಾರದಿಂದ ನಿರೂಪಿಸಲಾಗಿದೆ ಎಂದು ಅಲ್ಲಾ ಸಂದೇಶವಾಹಕರು ಹೇಳಿದರು: ಇಸ್ಲಾಂ ಧರ್ಮ ವಿಚಿತ್ರವಾದ ರೀತಿಯಲ್ಲಿ ಪ್ರಾರಂಭವಾಯಿತು, ಮತ್ತು ಇದು ವಿಚಿತ್ರವಾಗಿರುವುದರ (ಹಳೆಯ ಸ್ಥಾನ) ಹಿಂದಿರುಗಿಸುತ್ತದೆ. ಅಪರಿಚಿತರಿಗೆ ಆದ್ದರಿಂದ ಒಳ್ಳೆಯ ಸುದ್ದಿ.

Volume 3, Book 30, Hadith 100 — Sahih Bukhari

Narrated Abu Huraira: https://quranx.com/hadith/Bukh..
Allah's Messenger (ﷺ) said, "Verily, Belief returns and goes back to Medina as a snake returns and goes back to its hole (when in danger).

حَدَّثَنَا إِبْرَاهِيمُ بْنُ الْمُنْذِرِ، حَدَّثَنَا أَنَسُ بْنُ عِيَاضٍ، قَالَ حَدَّثَنِي عُبَيْدُ اللَّهِ، عَنْ خُبَيْبِ بْنِ عَبْدِ الرَّحْمَنِ، عَنْ حَفْصِ بْنِ عَاصِمٍ، عَنْ أَبِي هُرَيْرَةَ ـ رضى الله عنه ـ أَنَّ رَسُولَ اللَّهِ صلى الله عليه وسلم قَالَ
" إِنَّ الإِيمَانَ لَيَأْرِزُ إِلَى الْمَدِينَةِ كَمَا تَأْرِزُ الْحَيَّةُ إِلَى جُحْرِهَا " .

ಶಾಹಿ ಬುಕಾರಿ-ಸಂಪುಟ-3, ಪುಸ್ತಕ-30, ಹದಿತ್-100-ಅಬು ಹುರೈರ ವಿವರಿಸಿದಂತೆ: ಅಲ್ಲಾಸ್ ಸಂದೇಶವಾಹಕರು ಹೀಗೆ ಹೇಳಿದರು, "ಸತ್ಯವಾಗಿಯೂ ನಂಬಿಕೆಯು ಹಿಂದಿರುಗಿ ಮತ್ತೆ ಮದೀನಾಕ್ಕೆ ಹೋಗುತ್ತದೆ, ಹಾವು ಹೇಗೆ (ಅಪಾಯದಲ್ಲಿರುವಾಗ) ಹಿಂದಿರುಗಿ ಅದರ ರಂಧ್ರಕ್ಕೆ ಹೋಗುತ್ತದೆ ಹಾಗೆ.

**ISLAMIC BELIEF WILL END - ITS OWN BOOKS SAYS**

# SELF PROCLAIMED PREDICTIONS

## ಮುಸ್ಲಿಮೇತರರ ಮೇಲಿನ ದ್ವೇಷ ಖುರಾನಿನಲ್ಲಿ

### ಆಂಗ್ಲ ಬರಹಗಾರರೊಬ್ಬರ ಅಭಿಪ್ರಾಯದಂತೆ

ಮುಸ್ಲೀಮರ ಅಲ್ಲಾಹ ಮತ್ತು ದೇವದೂತರು ರಚಿಸಿರುವ ಗ್ರಂಥಗಳಲ್ಲಿ ಹಿಂದುಗಳ/ಮುಸ್ಲಿಮೇತರರ ಮೇಲಿನ ದ್ವೇಶ ಅತಿರೇಕದಲ್ಲಿ ಇದೆ.[28]

**ಆಲಿಸ್ ಎಂಬುವವರು ಬರೆದು ಹೇಳುತ್ತಾರೆ: ಜನವರಿ 20, 2013**

ಪಾಶ್ಚಿಮಾತ್ಯದಲ್ಲಿ ಅನಾಗರೀಕ "ಶರಿಯಾ ಮೂಲದ ಇಸ್ಲಾಂ ಧರ್ಮ" ವನ್ನು ಉತ್ತೇಜಿಸುತ್ತಿರುವುದಕ್ಕೆ ಅಲ್ಲಿನ ಇಸ್ಲಾಮಿಗಳ ನಾಟಕವನ್ನು ಪಾಶ್ಚಾತ್ಯರಲ್ಲಿ ನಿರಂತರವಾಗಿ ಆಗುತ್ತಿರುವುದಕ್ಕೆ ಅಲ್ಲಿನ ಜನರಲ್ಲಿ ಇಸ್ಲಾಮಿಕ್ ನಲ್ಲಿ ಅಡಗಿರುವ ಸಿದ್ದಾಂತಗಳ ಬಗ್ಗೆ ಸಾಮಾನ್ಯ ಅಜ್ಞಾನ, ಪ್ರಜಾಪ್ರಭುತ್ವ ಅನುಕೂಲತೆಗಾಗಿ ಮತ್ತು "ರಾಜಕೀಯವಾಗಿ ಸರಿಯಾದ ಬುದ್ದಿಗೇಡಿತನ" ಅನೇಕ ಪಾಶ್ಚಾತ್ಯ ರಾಜಕಾರಣಿಗಳ ಸ್ವಾರ್ಥದಿಂದ ಮತ್ತು ಬಲವಾದ ಅಜ್ಞಾನದಿಂದ ಇಸ್ಲಾಮಿಕ್ ಷರಿಯಾದ ಅಂತರ್ಗತ ಅಪಾಯದ ಬಗ್ಗೆ ಅವರ ನಡೆಗಳಲ್ಲೇ ಹೊರಹಾಕುತ್ತಿದ್ದಾರೆ.

ಅನೇಕ ಬೂಟಾಟಿಕೆಯ ಪಶ್ಚಿಮದ ಇಸ್ಲಾಮಿಗಳು ತಮ್ಮ ಭಾಷಣಗಳು ಮತ್ತು ಬರಹಗಳ ಮೂಲಕ ಇಸ್ಲಾಂ ಧರ್ಮವನ್ನು ಮೃದುವಾಗಿ ಮಾರಲು ಪ್ರಯತ್ನಿಸುತ್ತಿದ್ದಾರೆ ಮತ್ತು ಪಾಶ್ಚಾತ್ಯರನ್ನು ಬುದ್ಧಿಹೀನಗೊಳಿಸುವುದಕ್ಕಾಗಿ ಮಾತ್ರ "ಅಂತರ್ಗತ ನಂಬಿಕೆ ಬುದ್ದಿಗೇಡಿತನ" ಎಂದು ಕರೆಯುತ್ತಾರೆ. ಈ ಎಲ್ಲ ಇಸ್ಲಾಮಿಸ್ಟ್ಗಳು ಇಸ್ಲಾಂ ಧರ್ಮವನ್ನು ಪಾಶ್ಚಾತ್ಯ ಮೌಲ್ಯಗಳೊಂದಿಗೆ ಹೊಂದಿಕೊಳ್ಳುವಂತೆ ಚಿತ್ರಿಸಿದ್ದಾರೆ. ಸಿನಿಕತೆ ಮತ್ತು ಮೃದುಹೇಳಿಕೆಗಳ ತಂತ್ರಗಳನ್ನು ಬಳಸುವುದು, ಇಸ್ಲಾಂ ಧರ್ಮ ಪ್ರಜಾಪ್ರಭುತ್ವವೆಂದು ಪಾಶ್ಚಾತ್ಯರಿಗೆ ಮನವರಿಕೆ ಮಾಡುವಲ್ಲಿ ಅವರು ಕಷ್ಟಪಟ್ಟು ಪ್ರಯತ್ನಿಸುತ್ತಿದ್ದಾರೆ, ಇಸ್ಲಾಂ ಧರ್ಮವು ಇತರ ಧರ್ಮಗಳ ಬಗ್ಗೆ ಸಹಿಷ್ಣುವಾಗಿದೆ, ಇಸ್ಲಾಂ ಧರ್ಮವು ಧಾರ್ಮಿಕ ಸ್ವಾತಂತ್ರ್ಯದ ಅನ್ವೇಷಣೆಯನ್ನು ಉತ್ತೇಜಿಸುತ್ತದೆ, ಇತ್ಯಾದಿ. ಅವರು ಅನುಕೂಲಕರವಾಗಿ ಮರೆಮಾಚಲು / ಮರೆಮಾಡುತ್ತಿರುವುದು ಪ್ರಾಥಮಿಕವಾಗಿ ಹುಟ್ಟಿದ ಇಸ್ಲಾಂನಲ್ಲಿನ ಉಗ್ರ ಬಲಪಂಥೀಯವಾದದ ಬುನಾದಿ (ಖುರಾನ್) ಮತ್ತು ದ್ವಿತೀಯ (ಹದಿತ್) ಪಠ್ಯಗಳು ಷರಿಯಾ ರೂಪದಲ್ಲಿ (ಇಸ್ಲಾಮಿಕ್ ಕಾನೂನು).

---

[28] ಮೂಲ:-https://www.interfaithshaadi.org/blog/?p=4197

ಷರಿಯಾದ ಅನಾಗರೀಕ ಕಾನೂನುಗಳು ಮತ್ತು ನಿಯಮಗಳು ಮುಸ್ಲಿಮರಿಗೆ ಹೆಚ್ಚು ತೊಂದರೆಗೊಳಗಾಗುತ್ತಿದ್ದಾರೆ. ವಿಷಯದ ಸತ್ಯ, ಈ ಅಲ್ಲಾಹರ ಕಾನೂನುಗಳು ಏನೂ ಅಲ್ಲ

ಷರಿಯಾದ ಅನಾಗರೀಕ ಕಾನೂನುಗಳು ಮತ್ತು ನಿಯಮಗಳು ಮುಸ್ಲಿಮರಿಗೆ ಹೆಚ್ಚು ತೊಂದರೆಯಾಗುತ್ತಿದೆ ಆದರೆ ಪ್ರಾಚೀನ ಅರಬ್ ಪಾಗನಿಕ್ ನಿರ್ದಯ ಬುಡಕಟ್ಟು ಸಾಮಾಜಿಕ ನ್ಯಾಯವು ಇಸ್ಲಾಂನಲ್ಲಿ ಬುದ್ಧಿವಂತಿಕೆಯಿಂದ ಹುರುಪಿನಿಂದ ಅಳವಡಿಸಲಾಗಿದ್ದು ಅದು ಈಗ ಮಾನವಕುಲವೇ ತೊಂದರೆಗೊಳಗಾಗುತ್ತಿದೆ.

ಈ ಇಸ್ಲಾಮಿಸ್ಟ್ಗಳು ಆಗಾಗ್ಗೆ ಪಾಶ್ಚಿಮಾತ್ಯರನ್ನು ಸುಳ್ಳಿನಿಂದ ನಂಬಿಸಲು, ಹೆಚ್ಚಾಗಿ ಬಾಂಗ್ಲಾದೇಶದಂಥ ಕೆಲವು ಅರಬ್ ಅಲ್ಲದ ಮುಸ್ಲಿಂ ಬಹುಸಂಖ್ಯಾತ ರಾಷ್ಟ್ರಗಳನ್ನು ಇಸ್ಲಾಂ ಧರ್ಮ ಮತ್ತು ಪ್ರಜಾಪ್ರಭುತ್ವದ ನಡುವಿನ ಅಂತರ್ಗತ ಭಿನ್ನಾಭಿಪ್ರಾಯಗಳಿಲ್ಲ ಎಂಬ ಸಾಕ್ಷ್ಯವನ್ನು ಉದಾಹರಿಸುತ್ತಿದ್ದಾರೆ. ಈ ದೇಶಗಳಲ್ಲಿ ಹಲವು ಪಾಶ್ಚಾತ್ಯ ಶೈಲಿಯ ಪ್ರಜಾಪ್ರಭುತ್ವಗಳು ಇದ್ದು, ಇಸ್ಲಾಮಿಕ್ ಶರಿಯಾ ಕಾನೂನಿನಿಂದ ಆಳಲ್ಪಡುವುದಿಲ್ಲ. ಮಧ್ಯಪ್ರಾಚ್ಯದ ಹೊರಗಡೆ, ಇಸ್ಲಾಮಿಕ್ ರಿಪಬ್ಲಿಕ್ ಆಫ್ ಪಾಕಿಸ್ತಾನವು ಭಾಗಶಃ ಇಸ್ಲಾಮಿಕ್ ಕಾನೂನುಗಳನ್ನು ಅಳವಡಿಸಿಕೊಂಡಿದೆ ಮತ್ತು ಇಸ್ಲಾಂನ ಹೆಸರಿನಲ್ಲಿ ಕ್ರೂರತೆ ಮತ್ತು ಅನಾಗರಿಕತೆಯು ಅಲ್ಲಿ ನಡೆಯುತ್ತಿದೆ. ಇಸ್ಲಾಂ ಅನ್ನು ಅರ್ಥಮಾಡಿಕೊಳ್ಳಲು, "ಷರಿಯಾ ಕಾನೂನು" ಅನ್ನು ಅರ್ಥಮಾಡಿಕೊಳ್ಳುವುದು ಪ್ರಮುಖ ಅಂಶಗಳಲ್ಲಿ ಒಂದಾಗಿದೆ. ಷರಿಯಾ ಕಾನೂನಿನ ಬಗ್ಗೆ ಓದುಗರಿಗೆ ತಿಳಿಸಲು ನಾನು ಈ ತುಣುಕನ್ನು ಬರೆದಿದ್ದೇನೆ, ಅದು ಕೇವಲ ಕ್ರೂರತೆ, ದ್ವೇಷ, ಮತ್ತು ಇಸ್ಲಾಮಿಕ್ ಫ್ಯಾಸಿಸಮ್ ಅನ್ನು ಮಾತ್ರ ಉತ್ಪಾದಿಸಬಲ್ಲದು.

**ಷರಿಯಾ ಕಾನೂನು ಏನು?**

"ಷರಿಯಾ" (ಅರೇಬಿಕ್ شريعة Šarī'a; "ದಾರಿ" ಅಥವಾ "ಮಾರ್ಗ") ಎಂಬ ಪದವು ಇಸ್ಲಾಂನ ಪವಿತ್ರ ಕಾನೂನಾಗಿದೆ. ಷರಿಯಾ ಕಾನೂನು ಅಕ್ಷರಶಃ ಅರ್ಥ ಜೀವನದ ಧಾರ್ಮಿಕ ಸಂಕೇತವಾಗಿದೆ. ಇದು ಇಸ್ಲಾಮಿಕ್ ವ್ಯವಸ್ಥೆಯ ಕಾನೂನು ಮತ್ತು ಇಸ್ಲಾಮಿಕ್ ಜೀವನದ ವಿಧಾನದ ಸಂಪೂರ್ಣತೆಯನ್ನು ಉಲ್ಲೇಖಿಸಲು ಬಳಸಲಾಗುತ್ತದೆ. ರಾಜಕೀಯ, ದಿನನಿತ್ಯದ ಕಾರ್ಯಗಳು, ಆಹಾರಗಳು, ಬಟ್ಟೆ, ಮನೋರಂಜನೆ, ಕ್ರೀಡಾ, ಕೌಟುಂಬಿಕ ಮತ್ತು ಧಾರ್ಮಿಕ ಕಟ್ಟುಪಾಡುಗಳು, ಮತ್ತು ಹಣಕಾಸು ವ್ಯವಹಾರಗಳೂ ಸೇರಿದಂತೆ ಮುಸ್ಲಿಂ ಜೀವನದ ಎಲ್ಲಾ ಅಂಶಗಳನ್ನು ಷರಿಯಾ ಮಾರ್ಗದರ್ಶನ ಮಾಡುತ್ತದೆ. ಖುರಾನ್ ಮತ್ತು ಹದಿತ್ಗಳನ್ನು ಅರ್ಥ

ಮಾಡಿಕೊಳ್ಳುವ ಸಾಂಪ್ರದಾಯಿಕ ಮುಸ್ಲಿಮರು (ಎಲ್ಲಾ ಮುಲ್ಲಾಗಳು, ಮಾವ್ಲಾನಾಗಳು, ಮುಫ್ಟಿಗಳು, ಮತ್ತು ಇಸ್ಲಾಮಿಕ್ ವಿದ್ವಾಂಸರು) ಷರಿಯಾ (ಇಸ್ಲಾಮಿಕ್ ಕಾನೂನು) ಭೂಮಿಯ ಮೇಲಿನ ಎಲ್ಲಾ ಸಮಾಜಗಳಿಗೆ ಅತ್ಯುನ್ನತ ಮತ್ತು ಉತ್ತಮ ಗುರಿಗಳನ್ನು ವ್ಯಕ್ತಪಡಿಸುತ್ತಾರೆ ಎಂದು ನಂಬುತ್ತಾರೆ. ಇದು "ಅಲ್ಲಾನ ಕಾನೂನು" ಮತ್ತು ಎಲ್ಲದಕ್ಕೂ ಉತ್ತಮವಾದದ್ದು. ಈ ಉತ್ಕಟ ನಂಬಿಕೆಯಿಂದಾಗಿ, ವಿಶ್ವದಾದ್ಯಂತದ ಧಾರ್ಮಿಕ ಮತ್ತು ಮತಾಂಧ ಮುಸ್ಲಿಮರು ತಮ್ಮ ಆಡಳಿತ ಸರ್ಕಾರವು ಆಧುನಿಕ ಜಾತ್ಯತೀತ ಪ್ರಜಾಪ್ರಭುತ್ವವನ್ನು (ಮಾನವರಿಂದ ಮಾಡಿದ ಕಾನೂನುಗಳು) ಬದಲಿಸುವ ಮೂಲಕ ರಾಷ್ಟ್ರದ ಏಕೈಕ ನಿಯಮದಂತೆ "ಇಸ್ಲಾಮಿಕ್ ಷರಿಯಾ" ಯನ್ನು ಸ್ಥಾಪಿಸಲು ನಿರಂತರವಾದ ಹೋರಾಟದಲ್ಲಿದ್ದಾರೆ.

**ಷರಿಯಾ ಮತ್ತು ಅದರ ಮೂಲ ಮತ್ತು ಮೂಲಗಳು:**

ಎಲ್ಲಾ ನಾಲ್ಕು ಮುಸ್ಲಿಮ್ ಶಾಲೆಗಳಲ್ಲಿ "ಷರಿಯಾ ಕಾನೂನು" ಒಂದೇ ರೀತಿಯಾಗಿರುತ್ತದೆ. ಷರಿಯಾದ ಪ್ರಮುಖ ಮೂಲಗಳು ಹೀಗಿವೆ: ಖುರಾನ್, ಹದ್ದೀತ್ ಮತ್ತು ಸುನ್ನಾಹ್–(ಪ್ರವಾದಿ ಮೊಹಮ್ಮದ್ನ ಬೋಧನೆಗಳು ಮತ್ತು ಹೇಳಿದ್ದು). ದ್ವಿತೀಯ ಮೂಲಗಳೆಂದರೆ: ಇಜ್ಮಾ (ಒಮ್ಮತ), ಕಿಯಾಸ್ (ಹೋಲಿಕೆಗಳು), ಇಜ್ತಿಹಾದ್ (ಜವಾಬ್ದಾರಿಯುತ ವೈಯಕ್ತಿಕ ಅಭಿಪ್ರಾಯ), ಮತ್ತು ಇಸ್ತಿಹಿಸನ್ (ನ್ಯಾಯಯುತ ಉಲ್ಲೇಖಗಳು).

**ಷರಿಯಾ ಕಾನೂನಿನ ನಾಲ್ಕು ಮುಖ್ಯ ಶಾಲೆಗಳಿವೆ:**

**ಹನ್ಬಾಲಿ:** ಇದು ಶರಿಯಾ'ದ ಅತ್ಯಂತ ಸಂಪ್ರದಾಯವಾದಿ ಶಾಲೆಯಾಗಿದೆ. ಇದನ್ನು ಸೌದಿ ಅರೇಬಿಯಾದಲ್ಲಿ ಮತ್ತು ಉತ್ತರ ನೈಜೀರಿಯಾದಲ್ಲಿ ಕೆಲವು ರಾಜ್ಯಗಳಲ್ಲಿ ಬಳಸಲಾಗುತ್ತದೆ. **ಮಲಿಕಿ:** ಇದು ಮುಹಮ್ಮದ್ನ ಜೀವಿತಾವಧಿಯಲ್ಲಿ ಮದೀನಾ ಜನರ ಅಭ್ಯಾಸಗಳನ್ನು ಆಧರಿಸಿದೆ. **ಶಫಿಐ:** ಇದು ಸಂಪ್ರದಾಯವಾದಿ ಶಾಲೆಯಾಗಿದ್ದು, ಪ್ರವಾದಿ ಮುಹಮ್ಮದ್ ಅವರ ಸಹಚರರ ಅಭಿಪ್ರಾಯಗಳ ಮೇಲೆ ಮಹತ್ವ ನೀಡುತ್ತದೆ. **ಹನಿಫಿ:** ಇದು ಅತ್ಯಂತ ಉದಾರವಾದ ಶಾಲೆಯಾಗಿದ್ದು, ಕೆಲವು ಸೀಮಿತವಾದ ಆಧುನಿಕ ಪರಿಕಲ್ಪನೆಗಳನ್ನು ತುಲನಾತ್ಮಕವಾಗಿ ತೆರೆದಿರುತ್ತದೆ.

ಮುಸ್ಲಿಮರು ಖುರಾನ್ನಲ್ಲಿ ಬಹಿರಂಗಪಡಿಸಿದಂತೆ ಅಲ್ಲಾ ಮಾತುಗಳ ಮೇಲೆ ಶರಿಯಾ ಕಾನೂನು ಸ್ಥಾಪಿಸಲ್ಪಟ್ಟಿದ್ದು, ಮತ್ತು ಪ್ರವಾದಿ ಮುಹಮ್ಮದ್ನ ಜೀವನದಿಂದ ಸಂಗ್ರಹಿಸಲಾದ ಸಂಪ್ರದಾಯಗಳು ಎಂದು ಪರಿಗಣಿಸುತ್ತಾರೆ. ಷರಿಯಾ ಮೂಲಭೂತ ಬದಲಾವಣೆಗಳಿಗೆ ಒಳಗಾಗುತ್ತಲೇ ಇದೆ, ಕಾಲಿಫ್ಸ್ ಅಬು ಬಕ್ರ್ (632–34) ಮತ್ತು ಉಮರ್ (634–44) ರ ಆಳ್ವಿಕೆಯಿಂದಾಗಿ ಮುಹಮ್ಮದ್ನ ಹತ್ತಿರದ ಒಡನಾಡಿಗಳ

ಸಮಾಲೋಚನೆಗಾಗಿ ಹಲವಾರು ಪ್ರಶ್ನೆಗಳನ್ನು ಕೇಂದ್ರೀಕರಿಸಲಾಯಿತು. ಆದ್ದರಿಂದ, "ಇಸ್ಲಾಮಿಕ್ ಶರಿಯಾ" ನ ಪ್ರಮುಖ ಸಮಸ್ಯೆಗಳನ್ನು ರೂಪಿಸಲು ತತ್ವ ಮಾರ್ಗದರ್ಶನವು ಖುರಾನ್ ಮತ್ತು ಸುನ್ನಾ.

ಆದಾಗ್ಯೂ, "ಶರಿಯಾ ಕಾನೂನು" ಪ್ರಧಾನವಾಗಿ ಪ್ರವಾದಿ ಮುಹಮ್ಮದ್ ಮತ್ತು ಅವನ ನಾಲ್ಕು ಸರಿಯಾದ ಮಾರ್ಗದರ್ಶಿಯಾದ ಕ್ಯಾಲಿಫ್ಗಳ ಆರಂಭಿಕ ಇಸ್ಲಾಮಿಕ್ ನಿಯಮಗಳ ಅನುಕರಣೆಯಿಂದ ಹುಟ್ಟಿಕೊಂಡಿದೆ, ಆದರೆ ಇಸ್ಲಾಮಿಕ್ ಕ್ಯಾಲಿಫೇಟ್ಗಳ ಮುಂಚಿನ ಅವಧಿಯಲ್ಲಿ ಬರೆಯಲಾದ ಸ್ವರೂಪವು (ಕೆಲವು ಕೈಬರಹದ ಟಿಪ್ಪಣಿಗಳನ್ನು ಹೊರತುಪಡಿಸಿ) ಲಭ್ಯವಿಲ್ಲ. .................. ಷರಿಯಾ 750-850 ಸಿಇ ಅವಧಿಯ ಅವಧಿಯಲ್ಲಿ ಅಭಿವೃದ್ಧಿಪಡಿಸಿದರು. ನಿಜವಾದ ಹ್ಯಾಂಡ್-ಲಿಖಿತ "ಷರಿಯಾ ಪುಸ್ತಕಗಳು" ಇಸ್ಲಾಮಿಕ್ ವಿದ್ವಾಂಸರ ನಾಲ್ಕು ಶಾಲೆಗಳಿಂದ ರಚಿಸಲ್ಪಟ್ಟವು ಮತ್ತು ಸಂಕಲಿಸಲ್ಪಟ್ಟವು ಮತ್ತು ಷರಿಯಾದ ಕೊನೆಯ ಆವೃತ್ತಿಯಾದ ಷರಿಯಾದ ಸಂವಿಧಾನವು 632 ಸಿ.ಇ ಯಲ್ಲಿ ಪ್ರವಾದಿ ಮುಹಮ್ಮದ್ನ 150 ವರ್ಷಗಳ ನಂತರ ಸಂಕಲಿಸಲ್ಪಟ್ಟಂತೆ ವಿವಿಧ ಕಾಲಿಫ್ಗಳಿಂದ ಬಳಸಲ್ಪಟ್ಟಿತು.  ಆಧುನಿಕ ದಿನ ಸೌದಿ ನ್ಯಾಯಾಲಯಗಳು ಇಮಾಮ್ ಹನ್ಬಾಲಿ (ಹನಿಬಾಲಿ ಬುಕ್ಲೆಟ್) ಮತ್ತು ಇಮಾಮ್ ಜಾಫ್ರಿ ಬುಕ್ಲೆಟ್ ಇರಾನ್ನಲ್ಲಿ ಬಳಸಿದ ಅತ್ಯಂತ ಸಂಪ್ರದಾಯಶೀಲ ಷರಿಯಾವನ್ನು ಬಳಸುತ್ತವೆ. (ಅಲ್-ಸಿಸ್ತಾನಿ ಶಿಯೈಟ್ ನ್ಯಾಯಶಾಸ್ತ್ರದ ಗುರು). ವಾಸ್ತವಿಕ ಕಾಗದ-ಬೆಂಬಲಿತ ಇಸ್ಲಾಮಿಕ್ ಷರಿಯಾ ಪುಸ್ತಕಗಳನ್ನು ಭಾರತದಲ್ಲಿ ಮುಗಲ್ ಸಾಮ್ರಾಜ್ಯದ 17 ನೆಯ ಶತಮಾನದ ರಾಜ ಔರಂಗಜೇವ್ (ಅಲಮ್ಗಿರ್) ಸಮಯದಲ್ಲಿ ಸಿದ್ಧಪಡಿಸಲಾಯಿತು.

"ಇಸ್ಲಾಮಿಕ್ ಷರಿಯಾ" ದ ಕೆಲವು ಸಾಮಾನ್ಯ ಕಾನೂನುಗಳು ನಿಯಮಿತವಾಗಿ ಇಸ್ಲಾಮಿಕ್ ಆಳ್ವಿಕೆಯ (ಷರಿಯಾ-ಆಧಾರಿತ) ರಾಷ್ಟ್ರಗಳಲ್ಲಿ ಕೆಲವೊಂದು ಚಿಕ್ಕ ಬದಲಾವಣೆಗಳೊಂದಿಗೆ ಅಭ್ಯಾಸ ಮಾಡುತ್ತವೆ:

1- ಜಿಹಾದ್ "ಧರ್ಮವನ್ನು ಸ್ಥಾಪಿಸಲು ಮುಸ್ಲಿಮರಲ್ಲದವರ ವಿರುದ್ಧ ಯುದ್ಧ" ಎಂದು ವ್ಯಾಖ್ಯಾನಿಸಲಾಗಿದೆ ಪ್ರತಿ ಮುಸ್ಲಿಂ ಮತ್ತು ಮುಸ್ಲಿಂ ಮುಖ್ಯಸ್ಥರ (ಕಲಿಫ್) ಕರ್ತವ್ಯ. ಜಿಹಾದ್ ನಿರಾಕರಿಸುವ ಮುಸ್ಲಿಂ ಕಲಿಫ್ಗಳು ಷರಿಯಾವನ್ನು ಉಲ್ಲಂಘಿಸುತ್ತಿದ್ದಾರೆ ಮತ್ತು ಆಡಳಿತಕ್ಕೆ ಅನರ್ಹರಾಗಿದ್ದಾರೆ.

2- ಬಲವಂತದ ಮೂಲಕ ಶಕ್ತಿಯನ್ನು ಗ್ರಹಿಸುವ ಮೂಲಕ ಕಲಿಫ್ ಕಚೇರಿಯನ್ನು ಹಿಡಿದಿಟ್ಟುಕೊಳ್ಳಬಹುದು.

3– ಕೊಲೆ, ವ್ಯಭಿಚಾರ, ದರೋಡೆ, ಕಳ್ಳತನ, ಕುಡಿಯುವುದು ಮತ್ತು ಅತ್ಯಾಚಾರದ ಕೆಲವು ಪ್ರಕರಣಗಳಲ್ಲಿ (ಹುದುದ್ ಪ್ರಕರಣಗಳು) ಗಂಭೀರ ಅಪರಾಧಗಳಿಗೆ ಶಿಕ್ಷೆ ವಿಧಿಸಲು ಇಸ್ಲಾಮಿಕ್ ರಾಜ್ಯ (ಕಲಿಫ್) ನ ಮುಖ್ಯಸ್ಥರಿಗೆ ಅನ್ವಯಿಸುವುದಿಲ್ಲ– ಕೊಡೈಫೈಡ್ ಇಸ್ಲಾಮಿಕ್ ಲಾ ಸಂಪುಟ 3 # 914 ಸಿ ಮತ್ತು ಹೆಡಯಾ ದಿ ಹನಾಫಿ ಕೈಪಿಡಿಯ ಪುಟ 188.

4– ಝುಕಾತ್ – ತಲೆ ತೆರಿಗೆ– ಒಂದು ಶೇಕಡಾವಾರು ಜಿಹಾದ್ ಕಡೆಗೆ ಹೋಗಬೇಕು.

5– ಕಲೀಫನ ಆಜ್ಞೆಗಳನ್ನು ಪಾಲಿಸಬೇಕೆಂಬುದು ಕಡ್ಡಾಯವಾಗಿದೆ, ಅವನು ಅನ್ಯಾಯದವನಾಗಿದ್ದರೂ ಸಹ.

6– ಕಲೀಫ್ ಮುಸ್ಲಿಮರಾಗಿರಬೇಕು, ಗುಲಾಮರಲ್ಲದವರೂ ಪುರುಷರೂ ಆಗಿರಬೇಕು.

7– ಇಸ್ಲಾಂ ಧರ್ಮವನ್ನು ತಿರಸ್ಕರಿಸಿದಲ್ಲಿ ಮುಸ್ಲಿಮ್ ಸಾರ್ವಜನಿಕರು ಒಂದು ಸಂದರ್ಭದಲ್ಲಿ ಕಲಿಫನನ್ನು ತೆಗೆದುಹಾಕಬೇಕು.

8– ಇಸ್ಲಾಂ ಧರ್ಮವನ್ನು ತೊರೆಯುವ ಮುಸ್ಲಿಂ (ಸ್ವಧರ್ಮಪರಿತ್ಯಾಗಿ) ತಕ್ಷಣ ಕೊಲ್ಲಬೇಕು.

9– ಮುಸ್ಲಿಮರು ಇಂತವರನ್ನು ಕೊಂದಾಗ ಕ್ಷಮಿಸಲಾಗುವುದು: ಎ) ಧರ್ಮಭ್ರಷ್ಟರನ್ನ ಬಿ) ವ್ಯಭಿಚಾರಗಾರರನ್ನ ಸಿ) ಹೆದ್ದಾರಿ ದರೋಡೆಗಾರನ್ನ. ಜಾಗರೂಕ ರಸ್ತೆ ನ್ಯಾಯ ಮತ್ತು ಗೌರವ ಕೊಲೆ ಸ್ವೀಕಾರಾರ್ಹ.

10– ಮುಸಲ್ಮಾನರಲ್ಲದವರನ್ನು ಕೊಂದುಹಾಕಿದರೆ ಮುಸ್ಲಿಂಗೆ ಮರಣದಂಡನೆ ದೊರೆಯುವುದಿಲ್ಲ.

11– ಷರಿಯಾ ಗುಲಾಮಗಿರಿಯನ್ನು ಮತ್ತು ಲೈಂಗಿಕ ಗುಲಾಮಗಿರಿಯನ್ನು ಎಂದಿಗೂ ರದ್ದುಪಡಿಸಲಿಲ್ಲ ಮತ್ತು ಅದನ್ನು ನಿಯಂತ್ರಿಸುತ್ತದೆ. ಒಬ್ಬ ಗುಲಾಮನನ್ನು ಅವನ ಗುಲಾಮನ್ನು ಕೊಲ್ಲಲು ಶಿಕ್ಷಿಸಲಾಗುವುದಿಲ್ಲ. ಅರಬ್ ಮುಸ್ಲಿಮರಲ್ಲಿ ಗುಲಾಮಗಿರಿಯು ಇನ್ನೂ ಅಸ್ತಿತ್ವದಲ್ಲಿದೆ.

ಜಿಹಾದ್ – "ಧರ್ಮವನ್ನು ಸ್ಥಾಪಿಸಲು ಮುಸ್ಲಿಮರಲ್ಲದವರ ವಿರುದ್ಧ ಯುದ್ಧ" ಎಂದು ಪ್ರತೀ ಮುಸ್ಲಿಂ ಮತ್ತು ಮುಸಲ್ಮಾನರ ಮುಖ್ಯಸ್ಥರ (ಕಲೀಫ್) ಕರ್ತವ್ಯವಾಗಿದೆ. ಜಿಹಾದ್ ನಿರಾಕರಿಸುವ ಮುಸ್ಲಿಂ ಕಲಿಫ್ಗಳು ಷರಿಯಾವನ್ನು ಉಲ್ಲಂಘಿಸುತ್ತಿದ್ದಾರೆ ಮತ್ತು ಆಡಳಿತಕ್ಕೆ ಅನರ್ಹರಾಗಿದ್ದಾರೆ. ಖುರಾನ್

ಸಂಗತಿಯೊಂದು ನಿಮ್ಮ ಪಾಲಿಗೆ ಕೆಟ್ಟದಾಗಿರಲೂಬಹುದು. ಅಲ್ಲಾಹನಿಗೆ ತಿಳಿದಿದೆ ಮತ್ತು ನಿಮಗೆ ತಿಳಿದಿಲ್ಲ.

4:71. ವಿಶ್ವಾಸಿಗಳೇ, ಸದಾ ಸನ್ನದ್ಧ ಸ್ಥಿತಿಯಲ್ಲಿರಿ. ತರುವಾಯ ನೀವು (ಯುದ್ಧಕ್ಕೆ) ಪ್ರತ್ಯೇಕ ದಂಡುಗಳಾಗಿ ಹೊರಡಿರಿ ಅಥವಾ ಎಲ್ಲರೂ ಜೊತೆಯಾಗಿ ಹೊರಡಿರಿ.

4:76. ವಿಶ್ವಾಸಿಗಳು ಅಲ್ಲಾಹನ ಮಾರ್ಗದಲ್ಲಿ ಹೋರಾಡುತ್ತಾರೆ ಮತ್ತು ಧಿಕ್ಕಾರಿಗಳು ಅಕ್ರಮ ಶಕ್ತಿಗಳ ಮಾರ್ಗದಲ್ಲಿ ಹೋರಾಡುತ್ತಾರೆ. ನೀವು ಶೈತಾನನ ಆಪ್ತರ ವಿರುದ್ಧ ಹೋರಾಡಿರಿ. ಖಂಡಿತವಾಗಿಯೂ ಶೈತಾನನ ಸಂಚು ದುರ್ಬಲವಾಗಿರುತ್ತದೆ.

4:77. ನೀವು ಅವರನ್ನು ಕಂಡಿರಾ? "ನಿಮ್ಮ ಕೈಗಳನ್ನು ತಡೆದಿಟ್ಟುಕೊಳ್ಳಿರಿ (ಆಕ್ರಮಣಕ್ಕೆ ಇಳಿಯಬೇಡಿ), ನಮಾಝ್‌ಅನ್ನು ಪಾಲಿಸಿರಿ ಮತ್ತು ಝಕಾತ್‌ಅನ್ನು ಪಾವತಿಸಿರಿ" ಎಂದು (ಈ ಹಿಂದೆ) ಅವರಿಗೆ ಆದೇಶಿಸಲಾಗಿತ್ತು. ತರುವಾಯ, ಅವರ ಮೇಲೆ ಯುದ್ಧವನ್ನು ಕಡ್ಡಾಯಗೊಳಿಸಲಾದಾಗ ಅವರಲ್ಲೊಂದು ಗುಂಪು, ಅಲ್ಲಾಹನಿಗೆ ಅಂಜಬೇಕಾದ ರೀತಿಯಲ್ಲಿ ಅಥವಾ ಅದಕ್ಕಿಂತಲೂ ಹೆಚ್ಚಾಗಿ ಜನರಿಗೆ ಅಂಜ ತೊಡಗಿತು. ಅವರು "ನಮ್ಮೊಡೆಯಾ, ನೀನು ನಮ್ಮ ಮೇಲೆ ಯುದ್ಧವನ್ನು ಕಡ್ಡಾಯಗೊಳಿಸಿದ್ದೇಕೆ? ನಮಗೆ ನೀನು ಇನ್ನಷ್ಟು ಕಾಲಾವಕಾಶವನ್ನೇಕೆ ನೀಡಲಿಲ್ಲ?" ಎನ್ನುತ್ತಾರೆ. ಹೇಳಿರಿ; "ಇಹಲೋಕದ ಬಂಡವಾಳವೆಲ್ಲಾ ತೀರಾ ತಾತ್ಕಾಲಿಕ. ಧರ್ಮನಿಷ್ಠರ ಪಾಲಿಗೆ ಪರಲೋಕವೇ ಉತ್ತಮವಾಗಿದೆ. (ಅಲ್ಲಿ) ನಿಮ್ಮ ಮೇಲೆ ಕಿಂಚಿತ್ತೂ ಅನ್ಯಾಯ ನಡೆಯದು."

4:84. (ದೂತರೇ,) ನೀವು ಅಲ್ಲಾಹನ ಮಾರ್ಗದಲ್ಲಿ ಹೋರಾಡಿರಿ. ನೀವು ಕೇವಲ ನಿಮ್ಮ ಕುರಿತು ಮಾತ್ರ ಹೊಣೆಗಾರರು. ಇನ್ನು ನೀವು ವಿಶ್ವಾಸಿಗಳನ್ನು (ಹೋರಾಟಕ್ಕೆ) ಸಜ್ಜುಗೊಳಿಸಿರಿ. ಶೀಘ್ರದಲ್ಲೇ ಅಲ್ಲಾಹನು ಧಿಕ್ಕಾರಿಗಳ ಶಕ್ತಿಯನ್ನು ಕುಂದಿಸಿ ಬಿಡಬಹುದು. ಅಲ್ಲಾಹನು ಭಾರೀ ಶಕ್ತಿಯುಳ್ಳವನು ಹಾಗೂ ಕಠೋರ ಶಿಕ್ಷೆ ನೀಡುವವನಾಗಿದ್ದಾನೆ.

8:15. ವಿಶ್ವಾಸಿಗಳೇ, ಯುದ್ಧರಂಗದಲ್ಲಿ ನಿಮಗೆ ಧಿಕ್ಕಾರಿಗಳು ಎದುರಾದಾಗ ಅವರಿಗೆ ಬೆನ್ನು ತೋರಿಸಬೇಡಿ.

8:17. (ದೂತರೇ,) ಅವರನ್ನು (ಯುದ್ಧದಲ್ಲಿ ಶತ್ರುಗಳನ್ನು) ಕೊಂದದ್ದು ನೀವಲ್ಲ. ನಿಜವಾಗಿ ಅಲ್ಲಾಹನೇ ಅವರನ್ನು ಕೊಂದಿರುವನು. ನೀವು ಅದನ್ನು (ಹಿಡಿಮಣ್ಣನ್ನು) ಎಸೆದಾಗ, ನಿಜವಾಗಿ ಅದನ್ನು ಎಸೆದವರು ನೀವಲ್ಲ – ಅಲ್ಲಾಹನೇ ಅದನ್ನು ಎಸೆದಿದ್ದನು. ಅವನು ತನ್ನ ಕಡೆಯಿಂದ, ವಿಶ್ವಾಸಿಗಳನ್ನು ಶ್ರೇಷ್ಠ ಪರೀಕ್ಷೆಗೆ

ಒಳಪಡಿಸ ಬಯಸಿದ್ದನು. ಖಂಡಿತವಾಗಿಯೂ ಅಲ್ಲಾಹನು ಎಲ್ಲವನ್ನೂ ಕೇಳುವವನು ಮತ್ತು ಬಲ್ಲವನಾಗಿದ್ದಾನೆ.

8:39. ಮರ್ದನವು ಇಲ್ಲವಾಗುವ ತನಕ ಮತ್ತು ಧರ್ಮವು ಸಂಪೂರ್ಣವಾಗಿ ಅಲ್ಲಾಹನಿಗೆ ಮೀಸಲಾಗಿ ಬಿಡುವ ತನಕ ನೀವು ಅವರ ವಿರುದ್ಧ ಹೋರಾಡಿರಿ. ಇನ್ನು ಅವರು (ಮರ್ದನದಿಂದ) ದೂರ ಉಳಿದರೆ, ಅಲ್ಲಾಹನಂತು ಅವರು ಮಾಡುತ್ತಿರುವುದನ್ನೆಲ್ಲಾ ನೋಡುತ್ತಿದ್ದಾನೆ. ( ಇಲ್ಲಿ ಮರ್ದನವು ಅಂದರೆ ಫಿತ್ನಾ ಎನ್ನಲಾಗುತ್ತದೆ, ಫಿತ್ನಾ ಎಂದರೆ ಬಹುದೇವಾರಾದನೆ ಮತ್ತು ಅಲ್ಲಾಹನಲ್ಲಿ ನಂಬದಿರುವುದು)

8:65. ದೂತರೇ, ವಿಶ್ವಾಸಿಗಳನ್ನು ಯುದ್ಧಕ್ಕೆ ಸನ್ನದ್ಧಗೊಳಿಸಿರಿ. ನಿಮ್ಮಲ್ಲಿ ಇಪ್ಪತ್ತು ಮಂದಿ ಸಹನ ಶೀಲರಿದ್ದರೆ ಅವರು ಇನ್ನೂರು ಮಂದಿಯನ್ನು ಸೋಲಿಸುವರು ಮತ್ತು ನಿಮ್ಮಲ್ಲಿ ನೂರು ಜನರಿದ್ದರೆ, ಅವರು ಸಾವಿರ ಧಿಕ್ಕಾರಿಗಳನ್ನು ಸೋಲಿಸುವರು – ಏಕೆಂದರೆ ಅವರು (ಧಿಕ್ಕಾರಿಗಳು) ತಿಳುವಳಿಕೆ ಇಲ್ಲದವರಾಗಿದ್ದಾರೆ.

8:66. ಇದೀಗ ಅಲ್ಲಾಹನು ನಿಮ್ಮ ಹೊಣೆಯನ್ನು ಹಗುರಗೊಳಿಸುತ್ತಾನೆ – ನಿಮ್ಮಲ್ಲಿ ದೌರ್ಬಲ್ಯವಿರುವುದನ್ನು ಅವನು ಬಲ್ಲನು. ನಿಮ್ಮಲ್ಲಿ ನೂರು ಜನ ಸಹನಶೀಲರಿದ್ದರೆ, ಅವರು ಇನ್ನೂರು ಮಂದಿಯನ್ನು ಸೋಲಿಸುವರು ಮತ್ತು ನಿಮ್ಮಲ್ಲಿ ಸಾವಿರ ಜನರಿದ್ದರೆ ಅವರು ಅಲ್ಲಾಹನ ಸಮ್ಮತಿಯಿಂದ ಎರಡು ಸಾವಿರ ಮಂದಿಯನ್ನು ಸೋಲಿಸುವರು. ಅಲ್ಲಾಹನು ಸಹನ ಶೀಲರ ಜೊತೆಗಿದ್ದಾನೆ.

9:123. ವಿಶ್ವಾಸಿಗಳೇ, ಧಿಕ್ಕಾರಿಗಳ ಪೈಕಿ ನಿಮ್ಮ ಪಕ್ಕದಲ್ಲಿರುವವರ ವಿರುದ್ಧ (ಮೊದಲು) ಹೋರಾಡಿರಿ – ಅವರು ನಿಮ್ಮಲ್ಲಿ ಕಾಠಿಣ್ಯವನ್ನು ಕಾಣಲಿ. ನಿಮಗೆ ತಿಳಿದಿರಲಿ, ಖಂಡಿತವಾಗಿಯೂ ಅಲ್ಲಾಹನು ಸತ್ಯನಿಷ್ಠರ ಜೊತೆಗಿದ್ದಾನೆ.

61:4. ತಾವು ಸೀಸ ಹೊಯ್ದ ಗೋಡೆಗಳೆಂಬಂತೆ ಸಾಲಾಗಿ (ಸಂಘಟಿತರಾಗಿ) ತನ್ನ ಮಾರ್ಗದಲ್ಲಿ ಹೋರಾಡುವವರನ್ನು ಅಲ್ಲಾಹನು ಖಂಡಿತ ಪ್ರೀತಿಸುತ್ತಾನೆ.

ಸತ್ತ ಮೇಲು ಮೃತರಲ್ಲವಂತೆ ಜಿಹಾದಿಗಳು ಸಾಕ್ಷಾತ್ ದೇವರೇ ಹೇಳಿದ್ದಾರೆ. ಜಿಹಾದಿ ಆಗಿ ಸತ್ತಮೇಲೆ ಒಳ್ಳೆ ಆಹಾರ ಕೊಡುತ್ತಾನಂತೆ ದೇವನು,

2:154. ಅಲ್ಲಾಹನ ಮಾರ್ಗದಲ್ಲಿ ಹತರಾದವರನ್ನು ಸತ್ತವರೆನ್ನಬೇಡಿ. ನಿಜವಾಗಿ ಅವರು ಜೀವಂತವಿದ್ದಾರೆ. ಆದರೆ ನಿಮಗೆ ಅದರ ಅರಿವಿಲ್ಲ.

3:169. ಅಲ್ಲಾಹನ ಮಾರ್ಗದಲ್ಲಿ ಹತರಾದವರನ್ನು ನೀವು ಮೃತರೆಂದು ಪರಿಗಣಿಸಬೇಡಿ. ಅವರು ಜೀವಂತವಿದ್ದಾರೆ ಮತ್ತು ತಮ್ಮ ಒಡೆಯನ ಬಳಿ ಪೋಷಣೆಯನ್ನು ಪಡೆಯುತ್ತಿದ್ದಾರೆ.

22:58. ಅಲ್ಲಾಹನ ಮಾರ್ಗದಲ್ಲಿ ವಲಸೆ ಹೋದ ಹಾಗೂ ಆ ಬಳಿಕ ಹತರಾದ ಅಥವಾ ಮೃತರಾದವರಿಗೆ ಅಲ್ಲಾಹನು ಅತ್ಯುತ್ತಮ ಆಹಾರ ನೀಡಲಿದ್ದಾನೆ. ಖಂಡಿತವಾಗಿಯೂ ಅಲ್ಲಾಹನೇ ಅತ್ಯುತ್ತಮ ಅನ್ನದಾತನಾಗಿದ್ದಾನೆ.

ಅಲ್ಲಾಹನ ಮಾರ್ಗದಲ್ಲಿ ಯುದ್ದ ಮಾಡಿದರೆ ಸ್ವರ್ಗ/ಸಾವಿಲ್ಲ/ ಅನ್ನುವ ಬೋದನೆ ಏಕಾಏಕಿ ಬದಲಾಗಿ ಅಲ್ಲಾಹನ ಮಾರ್ಗದಲ್ಲಿ ಸತ್ತರೆ ಅನ್ನುತ್ತಾರೆ. ಇದಕ್ಕೆ ದ್ವಂದ್ವ ಅನ್ನದೆ ಬೇರೆ ಹೆಸರುಂಟೆ. ಅಲ್ಲಾಹನ ಹೆಸರಿನಲ್ಲಿ ವಲಸೆ ಹೋಗಿ ಎನ್ನುವ ಬೋದನೆ ಕೇಳಿ ರೋಹಿಂಗ್ಯಾ ದಂತಹ ಮುಸ್ಲಿಮರು ಅರೆಬ್ಬಿಯ ಅಂದಿನ ಮುಸ್ಲಿಮರು ಅನ್ನ ಸುಗುತ್ತೆ ಅಂತ ಬಂದಿರಬಹುದು ಅನ್ನ ಸಿಕ್ಕ ಮೇಲೆ ಸುಮ್ಮನೆ ಕೂರಲಾದೀತೆ ಯುದ್ದ. ಇದು ಪಕ್ಕಾ ಭೋದನಾ ಪರಿಣಾಮದ ಪುನರಾವರ್ತಿತ ಚರಿತ್ರೆಗಳು.

ಮುಸ್ಲಿಮರಿಗೆ ಅಲ್ಲಾಹರೇ ಪ್ರಚೋದಿಸುತ್ತಾರೆ, ಖುರಾನ್ ಒಪ್ಪದವರಿಗೆ ಕಠಿಣ ಶಿಕ್ಷೆ ಕೊಡಿ ಎನ್ನುತ್ತದೆ ಮುಸ್ಲಿಮರ ದೇವರು, ಈ ಕಾರಣಕ್ಕೆ ಇಂದು ನಾವು ಆ ವಚನಗಳ ಬಗ್ಗೆ ನಮ್ಮ ಹಕ್ಕು ಉಲ್ಲಂಘನೆ ಆಗುತ್ತಿದ್ದರೂ ಸುಮ್ಮನೆ ಇದ್ದರೆ ಸರಿಯೆ, ಅವುಗಳ ಬಗ್ಗೆ ನ್ಯಾಯಾಲಯದ ಗಮನ ಸೆಳೆದಾಗ ಯಾವ ನ್ಯಾಯಾಲಯವೂ ಸುಮ್ಮನಿರಲಾರದು ಅಲ್ಲವೆ ?

3:21. ಅಲ್ಲಾಹನ ವಚನಗಳನ್ನು ಧಿಕ್ಕರಿಸುವವರು, ಪ್ರವಾದಿಗಳನ್ನು ಅನ್ಯಾಯವಾಗಿ ಕೊಲ್ಲುವವರು ಮತ್ತು ಮಾನವರ ಪೈಕಿ ನ್ಯಾಯವನ್ನು ಆದೇಶಿಸುವವರನ್ನು ಕೊಲ್ಲುವವರು – ಅವರಿಗೆಲ್ಲಾ ಭಾರೀ ಕಠಿಣ ಶಿಕ್ಷೆಯ ಸುವಾರ್ತೆ ನೀಡಿರಿ.

ಅಲ್ಲಾಹನ ಮಾರ್ಗ ಎಂದರೆ ಏನು?

ಅಲ್ಲಾಹನ ಮಾರ್ಗ ಎಂದರೆ ಮುಸ್ಲಿಮರಲ್ಲದವರನ್ನು ಮುಸ್ಲಿಮರನ್ನಾಗಿಸುವುದು, ಜಗತ್ತಿನ ಎಲ್ಲರಲ್ಲಿ ಅಲ್ಲಹನ ಮತ್ತು ಆತನ ಪ್ರವಾದಿ ಮೇಲೆ ನಂಬಿಕೆ ಬರುವವರೆಗೆ ಹೋರಾಡುವುದು.

49 : 15. ನಿಜವಾದ ವಿಶ್ವಾಸಿಗಳು, ಅಲ್ಲಾಹನಲ್ಲಿ ಹಾಗೂ ಅವನ ದೂತರಲ್ಲಿ ನಂಬಿಕೆ ಇಟ್ಟ ಬಳಿಕ ಎಂದೂ ಸಂಶಯಪಡುವುದಿಲ್ಲ ಮತ್ತು ಅವರು ತಮ್ಮ ಸಂಪತ್ತುಗಳನ್ನೂ

ತಮ್ಮ ಜೀವಗಳನ್ನೂ ತೊಡಗಿಸಿ ಅಲ್ಲಾಹನ ಮಾರ್ಗದಲ್ಲಿ ಹೋರಾಡುತ್ತಾರೆ. ಅವರೇ ಸತ್ಯವಂತರು.

47 : 7. ವಿಶ್ವಾಸಿಗಳೇ, ನೀವು ಅಲ್ಲಾಹನಿಗೆ ನೆರವಾದರೆ ಅಲ್ಲಾಹನು ನಿಮಗೆ ನೆರವಾಗುವನು ಹಾಗೂ ನಿಮ್ಮ ಹೆಜ್ಜೆಗಳನ್ನು ಸ್ಥಿರಗೊಳಿಸುವನು.

47 : 4. (ಯುದ್ಧದಲ್ಲಿ) ನೀವು ಧಿಕ್ಕಾರಿಗಳನ್ನು ಎದುರಿಸಿದಾಗ, ಕೊರಳುಗಳನ್ನು ಕತ್ತರಿಸಿರಿ. ಅವರನ್ನು ಚೆನ್ನಾಗಿ ಸದೆಬಡಿದ ಬಳಿಕ (ಉಳಿದವರನ್ನು) ಬಿಗಿಯಾಗಿ ಕಟ್ಟಿ ಹಾಕಿರಿ ಆ ಬಳಿಕ ನೀವು (ಅವರ ಮೇಲೆ) ಔದಾರ್ಯ ತೋರಬಹುದು ಅಥವಾ ಸುಲಿಗೆ ಮಾಡಬಹುದು. ಯುದ್ಧವು ಮುಗಿಯುವ ತನಕ (ಪಾಲಿಸಬೇಕಾದ ನಿಯಮ) ಇದು. ಅಲ್ಲಾಹನು ಬಯಸಿದ್ದರೆ, ಅವರ ವಿರುದ್ಧ ಪ್ರತೀಕಾರ ತೀರಿಸುತ್ತಿದ್ದನು. ಆದರೆ ಅವನು ನಿಮ್ಮಲ್ಲಿ ಕೆಲವರನ್ನು ಮತ್ತೆ ಕೆಲವರ ಮೂಲಕ ಪರೀಕ್ಷಿಸ ಬಯಸುತ್ತಾನೆ. ಅಲ್ಲಾಹನ ಮಾರ್ಗದಲ್ಲಿ ಹತರಾದವರ ಕರ್ಮಗಳು ವ್ಯರ್ಥವಾಗಲಾರವು.

ಹಿಲಾಲಿ ಮತ್ತು ಖಾನ್ ರವರು ಅನುವಾದಿಸಿರುವ ಖುರಾನಿನಲ್ಲಿ 2 : 195 ರಲ್ಲಿ ಹೀಗೆ ಹೇಳಿದೆ ಅಂತಾರೆ "ಮತ್ತು ಅಲ್ಲಾಹನ ನಿಮಿತ್ತ ಖರ್ಚು ಮಾಡಿ (ಅಂದರೆ ಎಲ್ಲಾ ರೀತಿಯ ಜಿಹಾದ್, ಇತ್ಯಾದಿ) ಮತ್ತು ವಿನಾಶಕ್ಕೆ ನಿಮ್ಮನ್ನು ಎಸೆಯಬೇಡಿ (ನಿಮ್ಮ ಸಂಪತ್ತನ್ನು ಅಲ್ಲಾಹನ ಮಾರ್ಗದಲ್ಲಿ ಖರ್ಚು ಮಾಡದೆ) ಮತ್ತು ಒಳ್ಳೆಯದು ಮಾಡಿ. ನಿಜವಾಗಿ, ಅಲ್ಲಾಹನು ಅಲ್-ಮುಹ್ಸಿನನ್ (ಒಲಳ್ಳೆಯದು ಮಾಡುವವರನ್ನು) ಪ್ರೀತಿಸುತ್ತಾನೆ."

61 : 11. ನೀವು ಅಲ್ಲಾಹನಲ್ಲಿ ಮತ್ತು ಅವನ ದೂತರಲ್ಲಿ ನಂಬಿಕೆ ಇಡಿರಿ. ಮತ್ತು ನಿಮ್ಮ ಸಂಪತ್ತುಗಳನ್ನೂ ಜೀವಗಳನ್ನೂ ತೊಡಗಿಸಿ ಅಲ್ಲಾಹನ ಮಾರ್ಗದಲ್ಲಿ ಹೋರಾಡಿರಿ. ನೀವು ಅರಿಯುವವರಾಗಿದ್ದರೆ ಅದುವೇ ನಿಮ್ಮ ಪಾಲಿಗೆ ಉತ್ತಮ.

2 : 244. ನೀವು ಅಲ್ಲಾಹನ ಮಾರ್ಗದಲ್ಲೇ ಯುದ್ಧ ಮಾಡಿರಿ ಮತ್ತು ನಿಮಗೆ ತಿಳಿದಿರಲಿ, ಅಲ್ಲಾಹನು ಎಲ್ಲವನ್ನೂ ಕೇಳುವವನು ಮತ್ತು ತಿಳಿದಿರುವವನಾಗಿದ್ದಾನೆ.

8 : 60. ನೀವು ಅವರನ್ನು ಎದುರಿಸಲು, ನಿಮಗೆ ಸಾಧ್ಯವಿರುವಷ್ಟು ಶಕ್ತಿಯೊಂದಿಗೆ ಹಾಗೂ ಪಳಗಿದ ಕುದುರೆಗಳೊಂದಿಗೆ ಸದಾ ಸನ್ನದ್ಧರಾಗಿರಿ. ಈ ಮೂಲಕ ನೀವು ಅಲ್ಲಾಹನ ಶತ್ರುಗಳನ್ನು, ನಿಮ್ಮ ಶತ್ರುಗಳನ್ನು ಮತ್ತು ಅವರಲ್ಲದೆ – ನಿಮಗೆ ತಿಳಿದಿಲ್ಲದ ಹಾಗೂ ಅಲ್ಲಾಹನಿಗೆ ತಿಳಿದಿರುವ ಇತರರನ್ನು (ಇತರ ಶತ್ರುಗಳನ್ನು) – ಹೆದರಿಸಬಹುದು. ನೀವು ಅಲ್ಲಾಹನ ಮಾರ್ಗದಲ್ಲಿ ಖರ್ಚು ಮಾಡುವ ಪ್ರತಿಯೊಂದು ವಸ್ತುವಿನ ಸಂಪೂರ್ಣ ಪ್ರತಿಫಲವನ್ನು ನಿಮಗೆ ನೀಡಲಾಗುವುದು ಮತ್ತು ನಿಮಗೆ ಕಿಂಚಿತ್ತೂ ಅನ್ಯಾಯವಾಗದು.

ಹಿಲಲಿ ಮತ್ತು ಖಾನ್ ಅನುವಾದದ ಖುರಾನಿನಲ್ಲಿ 8:60 ಅನ್ನು ಆಂಗ್ಲದಲ್ಲಿ ಹೀಗೆ ಅನುವಾದಿಸಿದ್ದಾರೆ. ಮತ್ತು ಅಲ್ಲಾಹರ ಶತ್ರುಗಳ ಮತ್ತು ನಿಮ್ಮ ಶತ್ರುಗಳನ್ನು ಮತ್ತು ಇತರರು ನಿಮಗೆ ತಿಳಿದಿಲ್ಲ ಆದರೆ ಯಾರೆಂದು ಅಲ್ಲಾನಿಗೆ ತಿಳಿದಿದೆ ಬೆದರಿಸುವ ಯುದ್ಧದ ಹಾದಿಗಳು (ಟ್ಯಾಂಕ್ಗಳು, ವಿಮಾನಗಳು, ಕ್ಷಿಪಣಿಗಳು, ಫಿರಂಗಿದಳಗಳು, ಇತ್ಯಾದಿ) ಸೇರಿದಂತೆ ನೀವು ಶಕ್ತಿಯಿಂದ ಮಾಡಬಹುದಾದ ಎಲ್ಲವನ್ನೂ ಸಿದ್ಧಪಡಿಸಿರಿ. ಮತ್ತು ನೀವು ಅಲ್ಲಾಹನ ನಿಮಿತ್ತ ಖರ್ಚು ಮಾಡಿದ್ದು ನಿಮಗೆ ಪೂರ್ತಿ ಮರುಪಾವತಿಯಾಗುವುದು ಮತ್ತು ನಿಮ್ಮನ್ನು ಅನ್ಯಾಯವಾಗಿ ಪರಿಗಣಿಸಲಾಗದು.

ಹದಿತ್ನಲ್ಲಿ ಅಲ್ಲಾಹನ ಮಾರ್ಗ ಏನೆಂದು ಇದೆ

ಸುನಾನ್ ಇಬ್ನ್ ಮಜಾಹ್ - ಸಂಪುಟ-4, ಪುಸ್ತಕ-24, ಹದಿತ್-2858-ಇಬ್ನ್ ಬುರೈದಾಹ್ನಿಂದ ಆತನ ತಂದೆ ಹೀಗೆಂದು ಹೇಳಲಾಗಿದೆ:

"ಒಂದು ಮಿಲಿಟರಿ ಪಡೆಯನ್ನು ನಡೆಸಲು ಅವನು ಒಬ್ಬ ಮನುಷ್ಯನನ್ನು ನೇಮಿಸಿದಾಗ, ಅಲ್ಲಾಹನ ಸಂದೇಶವಾಹಕ ವಿಶೇಷವಾಗಿ ಅಲ್ಲಾಹನಿಗೆ ಭಯಪಡಿ ಮತ್ತು ಮುಸ್ಲಿಮರನ್ನು ಚೆನ್ನಾಗಿ ನಡೆಸಿಕೊಳ್ಳುವಂತೆ ಸಲಹೆ ನೀಡುತ್ತಾನೆ. ಅವರು ಹೇಳಿದರು: 'ಅಲ್ಲಾ ನ ಹೆಸರಿನಲ್ಲಿ ಮತ್ತು ಅಲ್ಲಾಹನ ನಿಮಿತ್ತ ಹೋರಾಡಿ. ಅಲ್ಲಾಹನಲ್ಲಿ ನಂಬಿಕೆ ಇಲ್ಲದವರಲ್ಲಿ ಹೋರಾಡಿರಿ. ಹೋರಾಡಿ ಆದರೆ ವಿಶ್ವಾಸಘಾತುಕರಾಗಿರಬೇಡಿ, ಯುದ್ಧದ ಕೊಳ್ಳೆಗಳಿಂದ ಕದಿಯಬೇಡಿ, ಮಕ್ಕಳನ್ನು ಕೊಲ್ಲಬೇಡಿ ಮತ್ತು ವಿಕಾರಗೊಳಿಸುವುದು ಮಾಡಬೇಡಿ. ಬಹುದೇವಾರಾಧಕರ ನಡುವೆ ನಿಮ್ಮ ಶತ್ರುಗಳನ್ನು ನೀವು ಭೇಟಿಯಾದಾಗ, ಅವರನ್ನು ಮೂರು ವಿಷಯಗಳಿಗೆ ಕರೆ ಮಾಡಿ. ಅವುಗಳಲ್ಲಿ ಯಾವುದಕ್ಕೆ ಅವರು ಪ್ರತಿಕ್ರಿಯಿಸುತ್ತಾರೆ, ಅವರಿಂದ ಅದನ್ನು ಸ್ವೀಕರಿಸಿ ಮತ್ತು ಅವರ ಮೇಲೆ ಹೋರಾಡದಂತೆ ತಡೆಯಿರಿ. ಇಸ್ಲಾಂನ್ನು ಒಪ್ಪಿಕೊಳ್ಳಲು ಅವರನ್ನು ಆಹ್ವಾನಿಸಿ, ಮತ್ತು ಅವರು ಪ್ರತಿಕ್ರಿಯಿಸಿದರೆ ಅದನ್ನು ಒಪ್ಪಿಕೊಂಡರೆ ಅವರನ್ನು ಒಪ್ಪಿಕೊಳ್ಳಿ ಮತ್ತು ಅವರ ಮೇಲೆ ಹೋರಾಡದಂತೆ ತಡೆಯಿರಿ. ನಂತರ ಅವರ ಭೂಮಿ ಬಿಟ್ಟು ಬಹುದೇವಾರಾಧಕರ ಭೂಮಿಗೆ ತೆರಳಲು ಅವರನ್ನು ಆಹ್ವಾನಿಸಿ. ಅವರು ಅದನ್ನು ಮಾಡಿದರೆ, ಬಹುದೇವಾರಾದಕರಂತೆ ಅದೇ ಹಕ್ಕುಗಳು ಮತ್ತು ಕರ್ತವ್ಯಗಳನ್ನು ಅವರು ಹೊಂದಿರುತ್ತಾರೆ ಎಂದು ಅವರಿಗೆ ತಿಳಿಸಿ. ಅವರು ತಿರಸ್ಕರಿಸಿದರೆ, ಅವರು ಮುಸ್ಲಿಮ್ ಬೆಡೂಯಿನ್ನಳಂತೆ (ಮರುಭೂಮಿಯಲ್ಲಿ ವಾಸಿಸುವರು) ಭಕ್ತರಂತೆ ಅಲ್ಲಾಹನ ಅದೇ ನಿಯಮಗಳಿಗೆ ಒಳಪಟ್ಟಿರುತ್ತಾರೆ ಎಂದು ಹೇಳಿಕೊಳ್ಳಿ, ಆದರೆ ಅವರು ಮುಸ್ಲಿಮರೊಂದಿಗೆ ಹೋರಾಡದ ಹೊರತು ಅವರಿಗೆ ಅತ್ಯಮೂಲ್ಯ ಅಥವಾ ಯುದ್ಧದ

ಕೊಳ್ಳೆಗಳ ಪಾಲನ್ನು ಹೊಂದಿರುವುದಿಲ್ಲ. ಅವರು ಇಸ್ಲಾಂನಲ್ಲಿ ಪ್ರವೇಶಿಸಲು ನಿರಾಕರಿಸಿದರೆ, ಪೋಲ್-ತೆರಿಗೆಯನ್ನು ಪಾವತಿಸಲು ಅವರನ್ನು ಕೇಳಿ. ಅವರು ಅದನ್ನು ಮಾಡಿದರೆ, ಅದನ್ನು ಅವರಿಂದ ಸ್ವೀಕರಿಸಿ ಮತ್ತು ಅವರ ಮೇಲೆ ಹೋರಾಡದಂತೆ ತಡೆಯಿರಿ. ಆದರೆ ಅವರು ತಿರಸ್ಕರಿಸಿದರೆ, ನಂತರ ಅಲ್ಲಾಹನ ಸಹಾಯವನ್ನು ಅವರ ವಿರುದ್ಧ ಪಡೆದು ಅವರೊಂದಿಗೆ ಹೋರಾಡಿ. ನೀವು ಅವರಿಗೆ ಮುತ್ತಿಗೆ ಹಾಕಿದರೆ ಮತ್ತು ನೀವು ಅವರಿಗೆ ಅಲ್ಲಾ ಮತ್ತು ನಿಮ್ಮ ಪ್ರವಾದಿಗಳ ರಕ್ಷಣೆ ನೀಡಬೇಕೆಂದು ಅವರು ಬಯಸಿದರೆ, ಅವರಿಗೆ ಅಲ್ಲಾ ಮತ್ತು ನಿಮ್ಮ ಪ್ರವಾದಿಗಳ ರಕ್ಷಣೆ ನೀಡಬೇಡಿ, ಬದಲಿಗೆ ಅವರಿಗೆ ನಿಮ್ಮ ರಕ್ಷಣೆ ಮತ್ತು ನಿಮ್ಮ ತಂದೆಯ ಮತ್ತು ನಿಮ್ಮ ಸಹಚರರ ರಕ್ಷಣೆ ನೀಡಿರಿ. ನೀವು ನಿಮ್ಮ ರಕ್ಷಣೆ ಮತ್ತು ನಿಮ್ಮ ಪಿತೃಗಳ ರಕ್ಷಣೆಗಳನ್ನು ಉಲ್ಲಂಘಿಸುತ್ತೀರಿ, ಆದರೆ ಅಲ್ಲಾ ರಕ್ಷಣೆ ಮತ್ತು ಅವರ ಸಂದೇಶವಾಹಕ ರಕ್ಷಣೆ ಉಲ್ಲಂಘಿಸುವುದು ಸುಲಭವಲ್ಲ. ನೀವು ಅವರಿಗೆ ಮುತ್ತಿಗೆ ಹಾಕಿದರೆ ಮತ್ತು ಅವರು ಅಲ್ಲಾ ಮತ್ತು ಅವನ ಸಂದೇಶವಾಹಕನ ತೀರ್ಪಿನ ಭರವಸೆಯಿಂದ ಹೊರಬರಲು ನೀವು ಬಯಸಿದರೆ, ಅವರಿಗೆ ಅಲ್ಲಾ ಮತ್ತು ಆತನ ಸಂದೇಶವಾಹಕ ತೀರ್ಪಿನ ಭರವಸೆಯನ್ನು ನೀಡಬೇಡಿ. ಅವರಿಗೆ ನಿಮ್ಮ ತೀರ್ಪು ಬರವಸೆ ನೀಡಿ, ಏಕೆಂದರೆ ನೀವು ನಿಜವಾಗಿ ಅಲ್ಲಹನ ಹಾದಿಯಲ್ಲಿ ಅವರ ಬಗ್ಗೆ ತೀರ್ಪು ನೀಡುತ್ತೀರ ಇಲ್ಲವೆ ಎಂಬ ಬಗ್ಗೆ ನಿಮಗೆ ಗೊತ್ತಿಲ್ಲ. ಇದು ಮುಸ್ಲಿಮರ ಅಸಲಿ ಹೋರಾಟದ ಬೋದನೆ. ಇದು ಇಂದಿನ ಜಿಹಾದಿ ಬಯೋತ್ಪಾದಕರು ನಡೆಸುತ್ತಿರುವುದು ಇಂತಹ ಇಸ್ಲಾಮಿಕ್ ರಾಜ್ಯವನ್ನು ಜಗತ್ತಿನಲ್ಲೆಲ್ಲಾ ಸ್ಥಾಪಿಸಲು.

ಎಲ್ಲಿವರೆಗೆ ಇವರ ಯುದ್ಧ/ಹೋರಾಟ/ಜಿಹಾದ್ ಗೊತ್ತೆ ?

ಸುನನ್ ಅನ್ ನಸೈ – ಸಂಪುಟ-5, ಪುಸ್ತಕ-37, ಹದಿತ್-3977, ಅಬು ಹರೈರಾಹ್ ಹೀಗೆಂದು ನಿರೂಪಿಸಿದ್ದಾರೆ: ಅಲ್ಲಾಹನ ಸಂದೇಶವಾಹಕ ಹೇಳಿದರು: "ಲಾ ಇಲಾಹ ಇಲ್ಲಾಲ್ಲಾ ಎಂದು ಹೇಳುವವರೆಗೂ ಜನರೊಂದಿಗೆ ಹೋರಾಡಲು ನಾನು ಆಜ್ಞಾಪಿಸಿದ್ದೇನೆ. (ಅಲ್ಲಾಹ ಬಿಟ್ಟರೆ ಬೇರೆ ಯಾರು ಪೂಜೆಗೆ ಅರ್ಹರು ಇಲ್ಲ) ಲಾ ಇಲಾಹ ಇಲ್ಲಾಲ್ಲಾ ಎಂದು ಹೇಳುವವನು, ಅವನ ಸಂಪತ್ತು ಮತ್ತು ಅವನ ಜೀವನವು ನನ್ನಿಂದ ಸುರಕ್ಷಿತವಾಗಿದೆ ಸರಿಯಾದ ಬಾಕಿ ಹಕ್ಕು ಹೊರತುಪಡಿಸಿ, ಮತ್ತು ಅವನ ಲೆಕ್ಕಾಚಾರವು ಅಲ್ಲಾಹನ ಜೊತೆಯಾಗಿರುತ್ತದೆ. "

ಜಿಹಾದ್ ಎಂದರೆ ಮನುಷ್ಯರ ರಕ್ತ ಚೆಲ್ಲುವುದು ಎನ್ನುತ್ತಾರೆ ಕತೀರ್ – ಇಬ್ನ್ ಅಲ್ ಕತೀರ್ ಖುರಾನ್ 2:190-193 ವ್ಯಾಕ್ಯಾನದಲ್ಲಿ ಇವರ ಉಲ್ಲೇಕ ಹೀಗಿದೆ

.................... ಕೊಲೆಗಿಂತ ಶಿರ್ಕ್ (ವಿಗ್ರಹಾರಾದನೆ) ಕೆಟ್ಟದಾಗಿದೆ – ಜಿಹಾದ್ ಮನುಷ್ಯರನ್ನು ಕೊಲ್ಲುವುದು ಮತ್ತು ಮನುಷ್ಯರ ರಕ್ತವನ್ನು ಹರಿಸುವುದು ಒಳಗೊಂಡಿರುತ್ತದೆ, ಈ ಪುರುಷರು ಅಲ್ಲಾಹನಲ್ಲಿ ಅವಿಧೇಯತೆಯನ್ನು ಮಾಡುತ್ತಿದ್ದಾರೆ ಎಂದು ಅಲ್ಲಾ ಸೂಚಿಸುತ್ತಾನೆ, ಅವನನ್ನು (ಆರಾಧನೆಯಲ್ಲಿ) ಇತರರ ಜೊತೆಗೂಡಿಸಿ ಮತ್ತು ಅವನ ಮಾರ್ಗದಿಂದ ಅಡಚಣೆ ಮಾಡುತ್ತಾನೆ, ಮತ್ತು ಅದು ಕೊಲ್ಲುವುದಕ್ಕಿಂತ ಹೆಚ್ಚು ದುಷ್ಟ ಮತ್ತು ಹೆಚ್ಚು ಹಾನಿಕಾರಕವಾಗಿದೆ. ಅಬು ಮಲಿಕ್ ಅಲ್ಲಾ ಹೇಳಿದ್ದನ್ನು ಕುರಿತು ಪ್ರತಿಕ್ರಿಯಿಸಿದ್ದಾರೆ: (ಮತ್ತು ಅಲ್-ಫಿಟ್ನಾ ಕೊಲ್ಲುವುದಕ್ಕಿಂತಾ ಕೆಟ್ಟದಾಗಿದೆ.) ಅರ್ಥವೇನೆಂದರೆ ನೀವು (ನಂಬಿಕೆಯಿಲ್ಲದವರು) ಮಾಡುತ್ತಿರ್ವುದು ಕೊಲೆಗಿಂತ ಕೆಟ್ಟದಾಗಿದೆ." ...................... (ಮತ್ತು ಅಲ್-ಫಿಟ್ನಾ ಕೊಲ್ಲುವುದಕ್ಕಿಂತಾ ಕೆಟ್ಟದಾಗಿದೆ.) ಶಿರ್ಕ್ (ಬಹುದೇವಾರಾಧನೆ) ಕೊಲ್ಲುವುದಕ್ಕಿಂತಾ ಕೆಟ್ಟದ್ದು.

ಮುಸ್ಲಿಮರನ್ನು ಉಳಿಸಲಿಕ್ಕಾಗಿ ಮುಸ್ಲಿಮೇತರರ ಸದ್ದಡಗಿಸಲಿಕ್ಕಾಗಿ ಅಲ್ಲಾಹರ ಬೋದನೆ ಇದೆ, ಅದಕ್ಕಾಗೇ ಖುರಾನ್ ಕಳುಹಿಸಲ್ಪಟ್ಟಿದೆ, ಹೋರಾಟಗಾರರಿಗೆ ಸ್ವರ್ಗ ಎನ್ನುವರೀತಿಯಲ್ಲಿ ಖುರಾನ್ ಬೋದನೆ ಇದೆ.

3 : 132. ನೀವು ಅಲ್ಲಾಹನ ಹಾಗೂ (ಅವನ) ದೂತರ ಆಜ್ಞಾಪಾಲಕರಾಗಿರಿ – ನೀವು (ಅವನ) ಕರುಣೆಗೆ ಪಾತ್ರರಾಗಬಲ್ಲಿರಿ.

3 : 138. ಇದು – ಎಲ್ಲ ಮಾನವರಿಗಾಗಿ ಒಂದು ಸ್ಪಷ್ಟ ಪ್ರಕಟಣೆಯಾಗಿದೆ ಮತ್ತು ಇದು ಧರ್ಮನಿಷ್ಠರಿಗಾಗಿ ಮಾರ್ಗದರ್ಶನ ಹಾಗೂ ಉಪದೇಶವಾಗಿದೆ.

3 : 141. ಅಲ್ಲಾಹನು ವಿಶ್ವಾಸಿಗಳನ್ನು ಸಂಸ್ಕರಿಸಲಿಕ್ಕಾಗಿ ಹಾಗೂ ಧಿಕ್ಕಾರಿಗಳ ಸದ್ದಡಗಿಸಲಿಕ್ಕಾಗಿ ಹೀಗೆ ಮಾಡುತ್ತಾನೆ.

3 : 142. ನೀವೇನು, ಅಲ್ಲಾಹನು ನಿಮ್ಮ ಪೈಕಿ ಹೋರಾಟ ನಡೆಸಿದವರನ್ನು ಮತ್ತು ಸಹನಶೀಲರನ್ನು ಗುರುತಿಸುವ ಮುನ್ನವೇ ನೀವು ಸ್ವರ್ಗ ಪ್ರವೇಶಿಸುವಿರಿ ಎಂದು ಕೊಂಡಿರುವಿರಾ?

ಸ್ವರ್ಗ ಸೇರಬೇಕೆಂದರೆ ಅಲ್ಲಾಹರು ನಿಬಂದನೆ ಹಾಕುತ್ತಾರೆ, ಅದು ಅಲ್ಲಾಹನ ಮತ್ತು ಪ್ರವಾದಿಯ ಮಾತು ಕೇಳಿದರೆ, ಹೋರಾಡಿದರೆ, ತಮ್ಮ ತನು ಮನ ಅಲ್ಲ ತಮ್ಮ ಹಣ ಮತ್ತು ದೇಹವನ್ನು ವಿನಿಯೋಗಿಸಿ ಯುದ್ಧ ಮಾಡಿ ಅನ್ನುತ್ತಾರೆ. ಯುದ್ಧ ಮಾಡುವವನಿಗೆ ಅವನಿಗೆ ಸಹಾಯ ಮಾಡುವವನಿಗೆ ಮಾತ್ರ ಸ್ವರ್ಗವಂತೆ. ಯುದ್ಧ ಮಾಡುವವರನ್ನು ಇವರು ಘಾಜಿ ಅನ್ನುತ್ತಾರೆ. ಅಲ್ಲಾಹನು ಹೀಗೆಲ್ಲಾ

ಮಾಡುವುದು ಮುಸ್ಲಿಮರನ್ನು ರಕ್ಷಣೆ ಮಾಡಲಂತೆ ಮುಸ್ಲಿಮೇತರರನ್ನು ಸದ್ದಡಗಿಸಲು (ಅರ್ಥಾತ್ ಕೊಲ್ಲಲು) ಅಂತೆ. ಇಲ್ಲಿ ಯಾರು ತಾನೆ ಹೇಳುತ್ತಾರೆ ಇವರ ಭೋದನೆ ನಮ್ಮ ಸಂವಿಧಾನ ಮತ್ತು ಕಾನೂನುಗಳಿಗೆ ಪೂರಕವಾಗಿದೆ ಎಂದು.

ಜಿಹಾದಿ ಬಯೋತ್ಪಾದಕರು ಅಲ್ಲಾಹನ ಅತಿಥಿಗಳಂತೆ ?

ಹೀಗಾದರೆ ಬಯೋತ್ಪಾದನೆ ಕೊನೆ ಆಧೀತೆ, ಇದು ನಾವು ಹೇಳುತ್ತಿರುವುದು ಅಲ್ಲ ಮುಸ್ಲಿಮರ ವೆಬ್ ತಾಣಗಳೇ ಸಾರುತ್ತಿವೆ.

"ಅಲ್ಲಾದ ಅತಿಥಿಗಳು ಮೂವರು: ಘಝಿ (ಅಲ್ಲಾಹನಿಗಾಗಿ ಕೇವಲ ಜಿಹಾದಿನಲ್ಲಿ ಹೋರಾಡುವ ಯೋಧ), ಹಜ್ಜಿ (ಹಜ್ ನಿರ್ವಹಿಸುವ ಯಾತ್ರಿಕರು) ಮತ್ತು ಮುತಾಮಿರ್ (ಉಮಾರಾವನ್ನು ನಿರ್ವಹಿಸುವ ಯಾತ್ರಿಕರು)".

ಉಲ್ಲೇಖ: ಹದಿತ್ ಸಂಖ್ಯೆ 2626, ಹಜ್ ರೈಟ್ಸ್ ಪುಸ್ತಕ, ಸುನನ್ ಅನ್-ನಾಸಾಯಿ, ಸಂಪುಟ. 3.[46]

ಸುನನ್ ಅನ್ ನಸಾಯಿ - ಸಂಪುಟ-3, ಪುಸ್ತಕ-24, ಹದಿತ್ 2626: ಅಬು ಹರೈರಾಹ್ ಹೇಳಿದರು: "ಅಲ್ಲಾಹುವಿನ ಸಂದೇಶವಾಹಕ ಹೇಳಿದ್ದು: 'ಅಲ್ಲಾದ ಅತಿಥಿಗಳು ಮೂರು: ಘಜಿ, ಹಜ್ (ಯಾತ್ರಿ) ಮತ್ತು ಮುತಾಮಿರ್'

ಶಾಹಿ ಬುಕಾರಿ - ಸಂಪುಟ-4, ಬುಕ್-52, ಹದಿತ್-96 :-[47] ಝೈದ್ ಬಿನ್ ಖಲೀದ್ ವಿವರಿಸಿದಂತೆ: ಅಲ್ಲಾಹನ ಸಂದೇಶವಾಹಕ, "ಘಾಜಿಗೆ ತಯಾರಾಗುವವನು ಅಲ್ಲಾಹರ ಕಾರಣಕ್ಕೆ ಮುಂದಾಗುವವನು ಅವನಿಗೆ ಸಮಾನವಾದ ಪ್ರತಿಫಲವನ್ನು ನೀಡಲಾಗುತ್ತದೆ) ಇದು ಘಜಿ ಎಂದು ಹೇಳುತ್ತಾನೆ, ಮತ್ತು ನಂತರ ಘಾಜಿಯ ಅವಲಂಬಿತರನ್ನು ಸರಿಯಾಗಿ ನೋಡಿಕೊಳ್ಳುವವನು ಅಲ್ಲಾಹನ ಕಾರಣದಲ್ಲಿ ಹೋಗುವ ಘಾಜಿಗೆ ಸಮನಾಗಿರುತ್ತಾರೆ."

ರಿಯಾದ್ ಅಸ್-ಸಲಿಹಿನ್ - ಪುಸ್ತಕ-12, ಹದಿತ್-1306:- ಝೈದ್ ಬಿನ್ ಖಲೀದ್ (ಅಲ್ಲಾ ಅವನಿಗೆ ಸಂತೋಷವಾಗಲಿ) ವರದಿ: ಅಲ್ಲಾಹನ ಸಂದೇಸವಾಹಕನು ಹೀಗೆ ಹೇಳಿದರು, "ಯಾವನು ಘಾಜಿ (ಹೋರಾಟಗಾರ) ನ ರೀತಿಯಲ್ಲಿ ಅಲ್ಲಾಹನ ದಾರಿಯಲ್ಲಿ ಸಜ್ಜುಗೊಳಿಸುತ್ತಾನೆ ಅವನು ಯುದ್ಧದಲ್ಲಿ ಪಾಲ್ಗೊಂಡಿದ್ದಾನೆ, ಮತ್ತು ಯಾವನು ಘಾಜಿಯ ಇಲ್ಲದಾಗ ಅವಲಂಬಿತರನ್ನು

---

[46] https://www.takemetoumrah.com/benefits-of-umrah/

[47] https://quranx.com/Hadith/

ನೋಡಿಕೊಳ್ಳುತ್ತಾನೋ, ಅವನು ಹೋರಾಟದಲ್ಲಿ ಪಾಲ್ಗೊಂಡಿದ್ದಾನೆ ಎಂದು. "(ಅಲ್-ಬುಖಾರಿ ಮತ್ತು ಮುಸ್ಲಿಂ).

ಅಲ್ಲಿಗೆ ಮುಗಿಯಿತಲ್ಲಾ ಇಲ್ಲಿ ಹೋರಾಟಗಾರರನ್ನು ಮಾತ್ರ ಹತ್ತಿಕಿದರೆ ಪ್ರಯೋಜನವಿಲ್ಲ, ಇವರ ಗ್ರಂಥಗಳು ಹೋರಾಟಗಾರರನ್ನು/ಬಯೋತ್ಪಾದಕರನ್ನು ಪೋಷಿಸುವವನು ಸಮಾನರು ಎಂದು ಇರುವಾಗ ಇವರ ಮೂಲ ಭೋದನಾ ಗ್ರಂಥಗಳನ್ನೇ ನಿಷೇದಿಸದೆ ವಿದಿಯಿಲ್ಲ.

ಅಲ್ಲಾಹ ನಿಮ್ಮನ್ನು ಸಾಯಿಸಲು ಬಹುದು ಅವನ ಮಾರ್ಗದಲ್ಲಿ ಹೋರಾಡಿ

2 : 28. (ಮಾನವರೇ,) ಅಲ್ಲಾಹನನ್ನು ಧಿಕ್ಕರಿಸಲು ನಿಮಗೆ ಹೇಗೆ ತಾನೇ ಸಾಧ್ಯವಾಗುತ್ತದೆ? ನೀವು ಜೀವರಹಿತರಾಗಿದ್ದಾಗ ನಿಮಗೆ ಜೀವ ಕೊಟ್ಟವನು ಅವನು. ಮತ್ತೆ ಅವನು ನಿಮ್ಮನ್ನು ಸಾಯಿಸುವನು ಮತ್ತು ಆ ಬಳಿಕ ಪುನಃ ಅವನು ನಿಮ್ಮನ್ನು ಜೀವಂತಗೊಳಿಸುವನು. ಕೊನೆಗೆ ಅವನ ಕಡೆಗೇ ನಿಮ್ಮನ್ನು ಮರಳಿಸಲಾಗುವುದು.

2 : 218. ವಿಶ್ವಾಸಿಗಳು ಹಾಗೂ ಅಲ್ಲಾಹನ ಮಾರ್ಗದಲ್ಲಿ ವಲಸೆ ಹೋದವರು ಮತ್ತು ಹೋರಾಡಿದವರೇ, ಅಲ್ಲಾಹನ ಅನುಗ್ರಹವನ್ನು ನಿರೀಕ್ಷಿಸುತ್ತಿರುವವರಾಗಿದ್ದಾರೆ. ಅಲ್ಲಾಹನಂತು ಕ್ಷಮಿಸುವವನು ಮತ್ತು ಕರುಣೆ ತೋರುವವನಾಗಿದ್ದಾನೆ.

ಹತರಾದರೂ ಮೃತರಾದರೂ ಅಲ್ಲಾಹನ ಮಾರ್ಗದಲ್ಲಿ ಹೋರಾಡಿ

3 : 157. ನೀವು ಅಲ್ಲಾಹನ ಮಾರ್ಗದಲ್ಲಿ ಹತರಾದರೆ ಅಥವಾ ಮೃತರಾದರೆ ಅಲ್ಲಾಹನ ಕಡೆಯಿಂದ ನಿಮಗೆ ಕ್ಷಮೆ ಹಾಗೂ ಕರುಣೆಯು ಪ್ರಾಪ್ತವಾಗುವುದು. ಅದು, ನೀವು ಸಂಗ್ರಹಿಸುತ್ತಿರುವ ಎಲ್ಲಕ್ಕಿಂತಲೂ ಉತ್ತಮವಾಗಿದೆ.

4 : 74. ಪರಲೋಕಕ್ಕಾಗಿ ಇಹಲೋಕದ ಬದುಕನ್ನು ಮಾರಿಕೊಂಡವರು ಅಲ್ಲಾಹನ ಮಾರ್ಗದಲ್ಲಿ ಹೋರಾಡಬೇಕು. ಅಲ್ಲಾಹನ ಮಾರ್ಗದಲ್ಲಿ ಹೋರಾಡಿದವನು, ಹತನಾದರೂ ವಿಜಯಿಯಾದರೂ ನಾವಂತು ಅವನಿಗೆ ಬಹು ಬೇಗನೇ ಭವ್ಯ ಪ್ರತಿಫಲ ನೀಡಲಿದ್ದೇವೆ.

ಇದಕ್ಕೇ ಇಂದಿನ ಮುಸ್ಲಿಮ್ ಬಯೋತ್ಪಾದಕರು ತಮ್ಮ ವಿಡಿಯೋಗಳಲ್ಲಿ ನೀವು ವಿಡಿಯೋ ನೋಡುವ ಹೊತ್ತಿಗೆ ನಾನು ಸ್ವರ್ಗದಲ್ಲಿ ಇರುತ್ತೇನೆ ಎಂದು ಯಾವ ಅಳುಕು ಇಲ್ಲದೆ ಹೇಳುವುದು. ಇವರಿಗೆ ಕೊಲ್ಲುವ ಬಗ್ಗೆ ಪಾಪ ಪ್ರಜ್ಞೆ ಇಲ್ಲದಿರುವಿಕೆಯು ಇವರ ಬೋದನಾ ಫಲವೇ ಆಗಿದೆ.

ಖುರಾನ್ ನಲ್ಲಿ ಬೋದಿಸಿರುವ ಅಹಿಂಸೆಯನ್ನು ಖುರಾನ್ ಹೇಗೆ ವಾಪಸ್ ಪಡೆದಿದೆ ಗೊತ್ತಾ – ಹಿಂದೆ ಆದೇಶಿಸಲಾಗಿತ್ತು ಈಗ ಯುದ್ದ ಕಡ್ಡಾಯ ಗೊಳಿಸಿದ್ದೇವೆ ಅನ್ನುವ

ಒಂದ್ ಶ್ಲೋಕ ಇಡೀ ಖುರಾನಿನಲ್ಲಿ ಬರುವ ಅಹಿಂಸಾ ಭೋದನೆ ಎಲ್ಲಿದ್ದರೂ ತೊರೆದು ಹಾಕುತ್ತದೆ.

4 : 77. ನೀವು ಅವರನ್ನು ಕಂಡಿರಾ? "ನಿಮ್ಮ ಕೈಗಳನ್ನು ತಡೆದಿಟ್ಟುಕೊಳ್ಳಿರಿ (ಆಕ್ರಮಣಕ್ಕೆ ಇಳಿಯಬೇಡಿ), ನಮಾಝ್‌ಅನ್ನು ಪಾಲಿಸಿರಿ ಮತ್ತು ಝಕಾತ್‌ಅನ್ನು ಪಾವತಿಸಿರಿ" ಎಂದು (ಈ ಹಿಂದೆ) ಅವರಿಗೆ ಆದೇಶಿಸಲಾಗಿತ್ತು. ತರುವಾಯ, ಅವರ ಮೇಲೆ ಯುದ್ಧವನ್ನು ಕಡ್ಡಾಯಗೊಳಿಸಲಾದಾಗ ಅವರಲ್ಲೊಂದು ಗುಂಪು, ಅಲ್ಲಾಹನಿಗೆ ಅಂಜಬೇಕಾದ ರೀತಿಯಲ್ಲಿ ಅಥವಾ ಅದಕ್ಕಿಂತಲೂ ಹೆಚ್ಚಾಗಿ ಜನರಿಗೆ ಅಂಜ ತೊಡಗಿತು. ಅವರು "ನಮ್ಮೊಡೆಯಾ, ನೀನು ನಮ್ಮ ಮೇಲೆ ಯುದ್ಧವನ್ನು ಕಡ್ಡಾಯಗೊಳಿಸಿದ್ದೇಕೆ? ನಮಗೆ ನೀನು ಇನ್ನಷ್ಟು ಕಾಲಾವಕಾಶವನ್ನೇಕೆ ನೀಡಲಿಲ್ಲ?" ಎನ್ನುತ್ತಾರೆ. ಹೇಳಿರಿ; "ಇಹಲೋಕದ ಬಂಡವಾಳವೆಲ್ಲಾ ತೀರಾ ತಾತ್ಕಾಲಿಕ. ಧರ್ಮನಿಷ್ಠರ ಪಾಲಿಗೆ ಪರಲೋಕವೇ ಉತ್ತಮವಾಗಿದೆ. (ಅಲ್ಲಿ) ನಿಮ್ಮ ಮೇಲೆ ಕಿಂಚಿತ್ತೂ ಅನ್ಯಾಯ ನಡೆಯದು."

ಅಲ್ಲಾಹನ ಮಾರ್ಗದಲ್ಲಿ ವಲಸೆ ಹೋಗುವುದು ಹತರಾಗುವುದು ಮಾಡಿದರೆ ಒಳ್ಳೆ ಆಹಾರ ಕೊಡುತ್ತಾನಂತೆ ಅಲ್ಲಾ ಅದಕ್ಕೆ ಇರಬೇಕು "ಮುಸ್ಲಿಮರ ವಲಸೆ ಪ್ರಕರಣ" ಜಗತ್ತಿನಲ್ಲಿ ಜಾಸ್ತಿ ಇರುವುದು.

22 : 58. ಅಲ್ಲಾಹನ ಮಾರ್ಗದಲ್ಲಿ ವಲಸೆ ಹೋದ ಹಾಗೂ ಆ ಬಳಿಕ ಹತರಾದ ಅಥವಾ ಮೃತರಾದವರಿಗೆ ಅಲ್ಲಾಹನು ಅತ್ಯುತ್ತಮ ಆಹಾರ ನೀಡಲಿದ್ದಾನೆ. ಖಂಡಿತವಾಗಿಯೂ ಅಲ್ಲಾಹನೇ ಅತ್ಯುತ್ತಮ ಅನ್ನದಾತನಾಗಿದ್ದಾನೆ.

ಕೆಲವರು ಜಿಹಾದ್ / ಹೋರಾಟ ಎಂದರೆ ಧರ್ಮ ಯುದ್ಧ ರಕ್ತಪಾತವಲ್ಲ ಎನ್ನುತ್ತಾರೆ. ಅಲ್ರೀ ಧರ್ಮ ಯುದ್ದಕ್ಕೆ ಜನರನ್ನು ಒಲಿಸಿಕೊಳ್ಳುವ ತರ್ಕ ಬೇಕು, ಪ್ರತಿಪಾದಿಸುವ ಸತ್ಯಾಂಶ ಬೇಕು, ಹಿತಿಹಾಸದ ಆದರ್ಶ ಕತೆಗಳು ಬೇಕು, ತತ್ವ ಜ್ಞಾನದ ಭೋದನೆ ಬೇಕು, ಜೀವನದ ಶಾಂತಿಯ ಬದುಕಿಗೆ ಬದುಕುವ ಮಾರ್ಗ ಸೂಚಿ ಬೇಕು ಅದು ಬಿಟ್ಟು ನಿಮ್ಮ ಸಾಹಿತ್ಯದಲ್ಲಿ ಹೋರಾಡಿ, ಜೀವವನ್ನು ಪಣಕ್ಕಿಡಿ, ವಧಿಸಿ, ವಧಿಸಲ್ಪಡಿ ಎಂದರೆ ಶಾಂತಿ ಹೋರಾಟದ ಭೋದನೆಯೆ, ಇದನ್ನು ತಪ್ಪಾಗಿ ಅನ್ವಯಿಸಲಾಗುತ್ತದೆ ಎಂದೆ ಹೇಗೆ ತಾನೆ ಹೇಳುತ್ತೀರಿ.

4 : 95. ವಿಶ್ವಾಸಿಗಳ ಪೈಕಿ, ಸೂಕ್ತ ಕಾರಣವಿಲ್ಲದೆ (ಹೋರಾಟದಲ್ಲಿ ಭಾಗವಹಿಸದೆ) ಕುಳಿತಿರುವವರು ಮತ್ತು ತಮ್ಮ ಸಂಪತ್ತುಗಳನ್ನು ಹಾಗೂ ತಮ್ಮ ಜೀವಗಳನ್ನು ತೊಡಗಿಸಿ ಅಲ್ಲಾಹನ ಮಾರ್ಗದಲ್ಲಿ ಜಿಹಾದ್ (ಹೋರಾಟ) ನಡೆಸುವವರು

ಸಮಾನರಲ್ಲ. ತಮ್ಮ ಸಂಪತ್ತುಗಳನ್ನು ಹಾಗೂ ತಮ್ಮ ಜೀವಗಳನ್ನು ತೊಡಗಿಸಿ ಜಿಹಾದ್ ಮಾಡುವವರಿಗೆ ಅಲ್ಲಾಹನು, ಕುಳಿತಿರುವವರಿಗಿಂತ ಹೆಚ್ಚಿನ ಹಿರಿಮೆಯನ್ನು ಅನುಗ್ರಹಿಸಿದ್ದಾನೆ. ಪ್ರತಿಯೊಬ್ಬರಿಗೂ ಅವನು ಸತ್ಫಲದ ವಾಗ್ದಾನವನ್ನೇ ಮಾಡಿರುತ್ತಾನೆ. ಮತ್ತು ಕುಳಿತವರಿಗೆ ಹೋಲಿಸಿದರೆ, ಅಲ್ಲಾಹನು ಹೋರಾಟಗಾರರಿಗೆ ಭಾರೀ ಪ್ರತಿಫಲವನ್ನು ಅನುಗ್ರಹಿಸಿದ್ದಾನೆ.

ಅನ್ಯಧರ್ಮೀಯರು ತಮ್ಮ ಆಸ್ತಿ ಮತ್ತು ಜೀವನವನ್ನು ತಮ್ಮದಾಗಿಸಿಕೊಳ್ಳಲು ಅಲ್ಲಾಹನನ್ನು ಬಿಟ್ಟು ಬೇರೆ ಯಾರನ್ನು ಪೂಜಿಸಬಾರದು ಎನ್ನುವ ಬೋದನೆ ಇಸ್ಲಾಮಿನ ಹದಿತ್ ಗ್ರಂಥದಲ್ಲಿ ಇದೆ.

ಶಾಹಿ ಬುಕಾರಿ – ಸಂಪುಟ–4 – ಪುಸ್ತಕ–52 – ಹದಿತ್–196–ಅಬು ಹುರೈರ ವಿವರಿಸಿದಂತೆ: ಅಲ್ಲಾನ ಮತಪ್ರಚಾರಕನು, ಹೇಳಿದ, ಅಲ್ಲಾ ಎಂದು ಹೇಳುವ ತನಕ ಜನರೊಂದಿಗೆ ಹೋರಾಡಲು ನಾನು ಆದೇಶಿಸಿದ್ದೇನೆ "ಅಲ್ಲಾಹನನ್ನು ಬಿಟ್ಟು ಬೇರೆ ಯಾರನ್ನೂ ಜನರು ಪೂಜಿಸುವ ಹಕ್ಕನ್ನು ಹೊಂದಿಲ್ಲ," ಯಾರು "ಅಲ್ಲಾಹನನ್ನು ಬಿಟ್ಟು ಯಾರನ್ನೂ ಜನರು ಪೂಜಿಸುವ ಹಕ್ಕನ್ನು ಹೊಂದಿಲ್ಲ," ಎಂದು ಹೇಳುತ್ತಾರೆ ಅವನ ಜೀವನ ಮತ್ತು ಆಸ್ತಿಯನ್ನು ಇಸ್ಲಾಮಿಕ್ ಕಾನೂನಿಗೆ ಹೊರತುಪಡಿಸಿ ನನ್ನಿಂದ ಉಳಿಸಲಾಗುವುದು, ಮತ್ತು ಅವನ ಜಮಾ ಖರ್ಚಿನ ಪಟ್ಟಿ ಅಲ್ಲಾ ಜೊತೆ ಇರುತ್ತದೆ, (ಅವನಿಗೆ ಶಿಕ್ಷಿಸಲು ಅಥವಾ ಕ್ಷಮಿಸಲು.) "

ಮುಸ್ಲಿಮರನ್ನು ಯುದ್ದಕ್ಕೆ ಪ್ರೇರೇಪಿಸಿ ಮುಸ್ಲಿಮೇತರರ ಕತ್ತು ಕೊಯಲು, ಬೆರಳುಗಳನ್ನು ಕತ್ತರಿಸಲು, ಕೈಕಾಲುಗಳನ್ನು ಕ್ರೂರವಾಗಿ ಕತ್ತರಿಸಲು ಮತ್ತು ಅವರನ್ನು ಲೂಟಿ ಮಾಡಲು ಬೋದನೆಯಿಂದ ಪ್ರೇರೇಪಿಸುತ್ತದೆ ಖುರಾನ್

ಖುರಾನ್ 47:4. ನೀವು ಧಿಕ್ಕಾರಿಗಳನ್ನು (ಯುದ್ಧದಲ್ಲಿ) ಎದುರಿಸಿದಾಗ, ಕೊರಳುಗಳನ್ನು ಕತ್ತರಿಸಿರಿ. ಅವರನ್ನು ಚೆನ್ನಾಗಿ ಸದೆಬಡಿದ ಬಳಿಕ (ಉಳಿದವರನ್ನು) ಬಿಗಿಯಾಗಿ ಕಟ್ಟಿ ಹಾಕಿರಿ ಆ ಬಳಿಕ ನೀವು (ಅವರ ಮೇಲೆ) ಔದಾರ್ಯ ತೋರಬಹುದು ಅಥವಾ ಸುಲಿಗೆ ಮಾಡಬಹುದು. ಯುದ್ಧವು ಮುಗಿಯುವ ತನಕ (ಪಾಲಿಸಬೇಕಾದ ನಿಯಮ) ಇದು. ಅಲ್ಲಾಹನು ಬಯಸಿದ್ದರೆ, ಅವರ ವಿರುದ್ಧ ಪ್ರತೀಕಾರ ತೀರಿಸುತ್ತಿದ್ದನು. ಆದರೆ ಅವನು ನಿಮ್ಮಲ್ಲಿ ಕೆಲವರನ್ನು ಮತ್ತೆ ಕೆಲವರ ಮೂಲಕ ಪರೀಕ್ಷಿಸ ಬಯಸುತ್ತಾನೆ. ಅಲ್ಲಾಹನ ಮಾರ್ಗದಲ್ಲಿ ಹತರಾದವರ ಕರ್ಮಗಳು ವ್ಯರ್ಥವಾಗಲಾರವು.

ಖುರಾನ್ 8:12. (ಜ್ಞಾಪಕದಲ್ಲಿರಲಿ), ನಿಮ್ಮ ಒಡೆಯನು ದೇವದೂತರುಗಳಿಗೆ ಪ್ರೇರೇಪಿಸಿದಾಗ – "ನಾನು ನಿಮ್ಮೊಂದಿಗಿದ್ದೇನೆ ಆದುದರಿಂದ

ವಿಶ್ವಾಸಿಗಳನ್ನು ನೀವು ಸ್ಥಿರವಾಗಿಡಿರಿ, ನಾನು ಧಿಕ್ಕಾರಿಗಳ ಮನದಲ್ಲಿ ಆತಂಕವನ್ನು ಬಿತ್ತಲಿದ್ದೇನೆ, ನೀವು ಅವರ ಕೊರಳ ಮೇಲೆ ಹೊಡೆಯಿರಿ ಮತ್ತು ಅವರ ಪ್ರತಿಯೊಂದು ಬೆರಳ ತುದಿಗೆ ಹೊಡೆಯಿರಿ" ಎಂಬ ದಿವ್ಯವಾಣಿಯನ್ನು ಕಳುಹಿಸಿದನು.

ಖುರಾನ್ 8:13 ಏಕೆಂದರೆ ಅವರು ಅಲ್ಲಾ ಮತ್ತು ಆತನ ಸಂದೇಶವಾಹಕನನ್ನು ವಿರೋಧಿಸಿದರು. ಮತ್ತು ಯಾರು ಅಲ್ಲಾ ಮತ್ತು ಆತನ ಸಂದೇಶವಾಹಕನನ್ನು ವಿರೋಧಿಸುತ್ತಾರೋ ಅವರಿಗೆ ಅಲ್ಲಾಹ ಕಠೋರ ದಂಡ ವಿಧಿಸುತ್ತಾನೆ.

ಖುರಾನ್ 5:33. ಅಲ್ಲಾಹ್ ಮತ್ತು ಅವನ ದೂತರ ವಿರುದ್ಧ ಯುದ್ಧ ಸಾರಿದವರಿಗೆ ಮತ್ತು ಭೂಮಿಯಲ್ಲಿ ಅಶಾಂತಿಯನ್ನು ಹಬ್ಬಲು ಹೆಣಗಾಡುವವರಿಗೆ ಇರುವ ಪ್ರತಿಫಲವೇನೆಂದರೆ, ಅವರನ್ನು ಕೊಲ್ಲಬೇಕು ಅಥವಾ ಶಿಲುಬೆಗೇರಿಸಬೇಕು ಅಥವಾ ಅವರ ಕೈಗಳನ್ನು ಹಾಗೂ ಕಾಲುಗಳನ್ನು ವಿರುದ್ಧ ಕಡೆಗಳಲ್ಲಿ (ಉದಾ: ಬಲಗೈ ಮತ್ತು ಎಡಕಾಲು) ಕತ್ತರಿಸಬೇಕು ಅಥವಾ ಅವರನ್ನು ನಾಡಿನಿಂದ ಹೊರಗಟ್ಟಬೇಕು. ಇದು ಇಹಲೋಕದಲ್ಲಿ ಅವರಿಗಿರುವ ಅಪಮಾನ. ಇನ್ನು ಪರಲೋಕದಲ್ಲಂತೂ ಅವರಿಗಾಗಿ ಭಾರೀ ಹಿಂಸೆ ಕಾದಿದೆ.

4:84. (ದೂತರೇ,) ನೀವು ಅಲ್ಲಾಹನ ಮಾರ್ಗದಲ್ಲಿ ಹೋರಾಡಿರಿ. ನೀವು ಕೇವಲ ನಿಮ್ಮ ಕುರಿತು ಮಾತ್ರ ಹೊಣೆಗಾರರು. ಇನ್ನು ನೀವು ವಿಶ್ವಾಸಿಗಳನ್ನು (ಹೋರಾಟಕ್ಕೆ) ಸಜ್ಜುಗೊಳಿಸಿರಿ. ಶೀಘ್ರದಲ್ಲೇ ಅಲ್ಲಾಹನು ಧಿಕ್ಕಾರಿಗಳ ಶಕ್ತಿಯನ್ನು ಕುಂದಿಸಿ ಬಿಡಬಹುದು. ಅಲ್ಲಾಹನು ಭಾರೀ ಶಕ್ತಿಯುಳ್ಳವನು ಹಾಗೂ ಕಠೋರ ಶಿಕ್ಷೆ ನೀಡುವವನಾಗಿದ್ದಾನೆ.

8:39. ಮರ್ದನವು (ಫಿಟ್ನಾ) ಇಲ್ಲವಾಗುವ ತನಕ ಮತ್ತು ಧರ್ಮವು ಸಂಪೂರ್ಣವಾಗಿ ಅಲ್ಲಾಹನಿಗೆ ಮೀಸಲಾಗಿ ಬಿಡುವ ತನಕ ನೀವು ಅವರ ವಿರುದ್ಧ ಹೋರಾಡಿರಿ. ಇನ್ನು ಅವರು (ಮರ್ದನದಿಂದ) ದೂರ ಉಳಿದರೆ, ಅಲ್ಲಾಹನಂತು ಅವರು ಮಾಡುತ್ತಿರುವುದನ್ನೆಲ್ಲಾ ನೋಡುತ್ತಿದ್ದಾನೆ.

ಕವಿ ಮತ್ತು ತತ್ವಜ್ಞಾನಿ ಇಬ್ನ್ ಅಲ್-ಅರಾಬಿ, ಇಸ್ಲಾಂನ ಅರಬ್ ಅಂಡಲುಸಿಯನ್ ಸುನ್ನಿ ವಿದ್ವಾಂಸ, ಫಿಟ್ನಾದ ಅರ್ಥಗಳನ್ನು ಈ ರೀತಿಯಾಗಿ ಸಂಕ್ಷೇಪಿಸಿದ್ದಾರೆ: "ಫಿಟ್ನಾ ಅಂದರೆ ಪರೀಕ್ಷೆ, ಫಿಟ್ನಾ ಎಂದರೆ ವಿಚಾರಣೆ, ಫಿಟ್ನಾ ಎಂದರೆ ಸಂಪತ್ತು, ಫಿಟ್ನಾ ಎಂದರೆ ಮಕ್ಕಳು, ಫಿಟ್ನಾ ಅಂದರೆ ಕುಫ್ರ್ (ಸತ್ಯದ ನಿರಾಕರಣೆ), ಫಿಟ್ನಾ ಎಂದರೆ ಜನರಲ್ಲಿ ಭಿನ್ನಾಭಿಪ್ರಾಯದ ಅರ್ಥ, ಫಿಟ್ನಾ ಎಂದರೆ ಬೆಂಕಿಯಿಂದ ಬರೆಯುವುದು. "ಆದರೆ ಈ ಪದವನ್ನು ವಿವಾದ, ವಿಘಟನೆ, ಹಗರಣ, ಅಸ್ತವ್ಯಸ್ತತೆ

ಅಥವಾ ಮುಸ್ಲಿಂ ಸಮುದಾಯದೊಳಗೆ ಅಪಶ್ರುತಿ ಉಂಟುಮಾಡುವ ಶಕ್ತಿಗಳನ್ನು ವಿವರಿಸಲು ಬಳಸಲಾಗುತ್ತದೆ.[48]

ಕಲ್ಲಿನ ದೇವರನ್ನು ಸುಡಲಾಗುವುದು ಎನ್ನುತ್ತದೆ ಖುರನ್ ಇದು ಸರಿಯೆ?

ಖುರಾನ್ ಸುರಾ 2 (ದನ) ಅಯಾತ್ 21 ರಿಂದ 24 ರ ವರೆಗೆ ತಿಳಿಸಿರುವಂತೆ ಅಲ್ಲಾಹನನ್ನ ಪುಜಿಸದೆ ಧಿಕ್ಕರಿಸುವವರಿಗೆ ಅವರು ಪೂಜಿಸುವ ಕಲ್ಲಿನ ದೇವರನ್ನು ನರಕದಲ್ಲಿ ಸುಡಲಾಗುವುದು ಎನ್ನುತ್ತದೆ. ಇವರ ಇಸ್ಲಾಮೀಕರಣಕ್ಕೆ ನಾವು ಪ್ರತಿರೋದ ವ್ಯಕ್ತ ಪಡಿಸಿದರೆ ಈ ರೀತಿಯ ಶಿಕ್ಷೆ ಎಂದು ಇಂದು ಅವರ ಗ್ರಂಥಗಳೇ ಹೇಳುತ್ತಿರುವಾಗ, ಅದು ನಮ್ಮ ಸಂವಿಧಾನಕ್ಕೆ ಪೂರಕವಾದವೇ ? ಅವುಗಳ ಬೋದನಾ ಅಂಶಗಳನ್ನ ಇಲ್ಲಿವರೆಗೆ ಯಾಕೆ ಸರ್ಕಾರಗಳಾಗಲೀ ನ್ಯಾಯಾಲಯಗಳಾಗಲೀ ನಿಶೇಧಿಸಿಲ್ಲ ?

2:21. ಜನರೇ, ನಿಮ್ಮನ್ನು ಮತ್ತು ನಿಮ್ಮ ಹಿಂದಿನವರನ್ನು ಸೃಷ್ಟಿಸಿದ ನಿಮ್ಮ ಒಡೆಯನನ್ನೇ ಪೂಜಿಸಿರಿ ? ನೀವು ಸುರಕ್ಷಿತರಾಗಬಹುದು.

2:22. ಅವನೇ, ನಿಮಗಾಗಿ ಭೂಮಿಯನ್ನು ಹಾಸಾಗಿ ಹಾಗೂ ಆಕಾಶವನ್ನು ಚಪ್ಪರವಾಗಿ ಮಾಡಿದವನು ಮತ್ತು ಆಕಾಶದಿಂದ ನೀರನ್ನು ಇಳಿಸಿದವನು ಹಾಗೂ ಆ ಮೂಲಕ ನಿಮಗೆ ಆಹಾರವಾಗಿ ಫಲಗಳನ್ನು ಬೆಳೆಸಿದವನು. ನೀವು (ಇದನ್ನೆಲ್ಲಾ) ತಿಳಿದಿರುತ್ತಾ, ಯಾರನ್ನೂ ಅಲ್ಲಾಹನಿಗೆ ಸಾಟಿಯಾಗಿಸಬೇಡಿ.

2:23. ನಾವು ನಮ್ಮ ದಾಸನಿಗೆ ಇಳಿಸಿ ಕೊಟ್ಟಿರುವುದರ (ಕುರ್‌ಆನಿನ) ಕುರಿತು ನಿಮಗೆ ಸಂಶಯವಿದ್ದರೆ, ಅಂತಹ ಒಂದು ಅಧ್ಯಾಯವನ್ನಾದರೂ ನೀವು ರಚಿಸಿ ತನ್ನಿರಿ ಮತ್ತು ಅದಕ್ಕಾಗಿ ಅಲ್ಲಾಹನ ಹೊರತು ನಿಮ್ಮೆಲ್ಲ ಸಹಾಯಕರನ್ನೂ ಕರೆಯಿರಿ ? ನೀವು ಸತ್ಯವಂತರಾಗಿದ್ದರೆ (ಇಷ್ಟನ್ನು ಮಾಡಿರಿ).

2:24. ನಿಮಗೆ ಅದನ್ನು ಮಾಡಲಾಗದಿದ್ದರೆ ? ಮತ್ತು ಖಂಡಿತ ನಿಮಗೆ ಅದನ್ನು ಮಾಡಲಾಗುವುದಿಲ್ಲ ? ಮನುಷ್ಯರು ಮತ್ತು ಕಲ್ಲುಗಳೇ ಇಂಧನವಾಗಿರುವ (ನರಕದ) ಬೆಂಕಿಗೆ ಅಂಜಿರಿ ? ಸತ್ಯ ಧಿಕ್ಕಾರಿಗಳಿಗಾಗಿ ಅದನ್ನು ಸಿದ್ಧ ಪಡಿಸಲಾಗಿದೆ.

ಮೌದುದಿ – ಸಯ್ಯಿದ್ ಅಬುಲ್ ಅಲಾ ಮೌದುದಿ – ತಾಫಿಂ ಅಲ್ ಖುರಾನ್ ಎಂಬ ತಫ಼ಸೀರ್ ಖುರಾನ್ ಸುರಾ 2 (ದನ) ಅಯಾತ್ 23 ರಿಂದ 24

---

48 https://www.thoughtco.com/the-meaning-of-fitna-in-islam-2004280

ರ ವ್ಯಾಖ್ಯಾನವು ಇಂತಿದೆ  ಈ ಪ್ರಸ್ತಾಪವು ಎಂದರೆ: "ನೀನೇ ಮಾತ್ರ ನರಕಕ್ಕೆ ಇಂಧನವಾಗಿಲ್ಲ, ಆದರೆ ನೀವು ಜಗತ್ತಿನಲ್ಲಿ ದೇವತೆಗಳಂತೆ ಆರಾಧಿಸುವ ಕಲ್ಲಿನ ವಿಗ್ರಹಗಳು ಸಹ ಸೇರಿವೆ, ದೇವರಲ್ಲಿ (ಅಲ್ಲಾಹರಲ್ಲಿ) ಯಾವುದಾದರೂ ಪಾಲುದಾರಿಕೆಯನ್ನು ಹೊಂದಿಲ್ಲವೆಂದು ತೋರಿಸಲು ನಿಮ್ಮೊಂದಿಗಿರುತ್ತವೆ."

ಅಲ್ಲಾಹನಿಗೆ ಸರಿಸಮನಾಗಿ ಯಾವ ದೇವರನ್ನು ತರಬೇಡಿ, ನೀವು ಅಲ್ಲಾಹನನ್ನು ಮಾತ್ರ ಪೂಜಿಸಿದರೆ ಸುರಕ್ಷಿತರಾಗಿರಬಹುದು, ಇಲ್ಲವೆ ಅಸುರಕ್ಷತೆ ಕಾಡುತ್ತಿರುತ್ತದೆ. ಖುರಾನಿಗೆ ಸಮನಾಗಿ ತಾಕತ್ತಿದ್ದರೆ ನಿಮ್ಮೆಲ್ಲಾ ದೇವರುಗಳನ್ನು ಸೇರಿಸಿ ಬರೆದು ತನ್ನಿರಿ, ನಿಮಗೆ ಆಗುವುದಿಲ್ಲ ಅಂತ ಗೊತ್ತಿದೆ, ನಿಮಗೆ ನರಕ ಕಾದಿದೆ ಅದರಲ್ಲಿ ನಿಮ್ಮನ್ನು ನಿಮ್ಮ ಆಕಲ್ಲು ದೇವರನ್ನು ಇಂದನವಾಗಿ ಸುಟ್ಟು ಹಾಕುತ್ತೇವೆ. ಇದು ಸಾಮಾನ್ಯನ ಬಾಷೆಯಲ್ಲಿರುವ ತಾತ್ಪರ್ಯ. ಅಲ್ರೀ ಜಗತ್ತಿನ ಯಾವ ಬಗವಂತಾ ಹೇಳಿದಾನ್ರೀ ನನ್ನ ನಂಬು ನನ್ನ ವಿಚಾರ ನಂಬು ಇಲ್ಲವೇ ನಿನಗೆ ಘೋರ ಶಿಕ್ಷೆ ಕಾದಿದೆ ಎಂದು. ನಾವು ಓದಿದ ಚರಿತ್ರೆಯಲ್ಲಿ ಹಿಟ್ಲರ್ ಎಂಬವವನು ಈ ರೀತಿ ತನ್ನ ತತ್ವ ಸಿದ್ಧಾಂತವನ್ನ ಒಪ್ಪದವರನ್ನ ಹೊಡೆದು ಹಾಕಿದ್ದನಂತೆ.

ಎಲ್ಲರಲ್ಲೂ ದೇವರನ್ನು ಕಾಣುವವರು ನಮ್ಮ ಹಿಂದು ಸನಾತನ ಧರ್ಮದವರು, ಮಗುವಲ್ಲಿ, ತಾಯಿಯಲ್ಲಿ, ತಂದೆಯಲ್ಲಿ, ಗುರುಗಳಲ್ಲಿ, ಹಿರಿಯರಲ್ಲಿ, ಸಹೋದರಿಯಲ್ಲಿ, ಸಹೋದರನಲ್ಲಿ, ಅತಿಥಿಗಳಲ್ಲಿ, ಅಘೋಚರ ಶಕ್ತಿಗಳಲ್ಲಿ, ನೈಸರ್ಗಿಕ ವಿಸ್ಮಯಗಳಲ್ಲಿ, ಬೆಳಕಿನಲ್ಲಿ, ಕತ್ತಲೆಯಲ್ಲಿ, ಜಲದಲ್ಲಿ, ಮಣ್ಣಿನಲ್ಲಿ, ಭೂಮಂಡಲದಲ್ಲಿ, ಆಕಾಶದಲ್ಲಿ, ವಾಯುವಿನಲ್ಲಿ ಹೀಗೆ ಅನೇಕ ರೂಪಗಳಲ್ಲಿ ದೇವಾನು ದೇವತೆಗಳನ್ನು ಕಂಡವರು ಕಾಣುತ್ತಿರುವವರು ನಾವು. ನಿಮ್ಮ ಅಲ್ಲಾಹ ದೇವರೆಂದರೆ ತಲೆ ಬಾಗಿ ನಮಸ್ಕರಿಸುವ ಸಂಸ್ಕಾರವುಳ್ಳವರು ನಾವು ನಿಮ್ಮ ಪ್ರವಿದಿಗಳಿಗೂ ನಮಸ್ಕರಿಸುವವರು ನಾವು, ಅವರು ಗುರು ಹಿರಿಯರು ಎಂಬ ಕಾರಣದಿ ಇರಬಹುದು, ಎಲ್ಲರಲ್ಲಿ ದೇವರು ಕಾಣುವ ಮನೋಬಾವ ಇರಬಹುದು. ಆದರೆ ನಾವು ಕಂಡಂತ ಆ ಜೀವಂತ / ಅಜೀವ ವಿಸ್ಮಯ ದೇವರುಗಳನ್ನೆಲ್ಲಾ ನೂಕಾಚೆ ದೂರ ಅಲ್ಲಾಹನೊಬ್ಬನೇ ದೇವನು ಎಂದು ಸಾರುವ ಬಾರ ಇಲ್ಲದೆ ಹೋದರೆ ನೀನು ಕಠೋರವಾಗಿ ಹತನಾಗುವೆ ನೋಡ ಎಂದರೆ ನಮ್ಮ ಆ ಮುಗ್ಧ ಮನಸ್ಸು ಒಪ್ಪುವುದು ಅಂತಾ ಬಾವಿಸಿದ್ದೀರಾ ಖಂಡಿತಾ ಇಲ್ಲ. ನಾವು ಅನುಸರಿಸುವ ಧರ್ಮದಲ್ಲಿ ದಯೆ ಇದೆ, ಬೆದರಿಕೆ ಇಲ್ಲ, ಬಲವಂತ ಇಲ್ಲ, ನಾವು ಯಾರನ್ನು ನಂಬಿಕೆ ಆಧಾರದಲ್ಲಿ ನೀಚರೆಂದು ಬಾವಿಸಿಲ್ಲ. ಸಂಸ್ಕಾರದ ಆಧಾರದಲ್ಲಿ ನೀಚ ಉಚ್ಚ ಎಂದು ಗುರುತಿಸಿರಬಹುದು. ಇತರರ ನಂಬಿಕೆಯನ್ನು ಗೌರವಿಸುವವರು ನಾವು. ಇದನ್ನರಿಯದೆ ಈಗಲೂ ನಮ್ಮ ಮೇಲಿನ ದ್ವೇಶ ಕಾರುವ ಸಾಲುಗಳು ಅರ್ಥ

ತಿಳಿದೋ ತಿಳಿಯದಯೋ ಅಂದಕಾರದಲ್ಲೋ, ಅಹಂಮಿನಲ್ಲೋ ಪಠಣೆ ಮತ್ತು ಆಚರಣೆ ಜಾರಿಯಲ್ಲಿ ಇದೆಯಲ್ಲಾ ಅದಕ್ಕೆ ಏನೆನ್ನಬೇಕು ತಿಳಿಯುತ್ತಿಲ್ಲ.
ಸುಳ್ಳಾದರೂ ಹೇಳಿ ಖುರಾನ್ ಮೇಲಿನ ನಂಬಿಕೆ ಉಳಿಸಿಕೊಳ್ಳಿ ಎನ್ನುತ್ತದೆ ಖುರಾನ್

ಖುರಾನ್ ಅಧ್ಯಾಯ 3 ಅಯಾತ್ 28. ವಿಶ್ವಾಸಿಗಳು, ವಿಶ್ವಾಸಿಗಳನ್ನು ಬಿಟ್ಟು ಧಿಕ್ಕಾರಿಗಳನ್ನು ತಮ್ಮ ಪೋಷಕ ರಾಗಿಸಿಕೊಳ್ಳಬಾರದು. ಹಾಗೆ ಮಾಡಿದಾತನಿಗೆ ಅಲ್ಲಾಹನೊಂದಿಗೆ ಯಾವ ನಂಟೂ ಉಳಿಯದು ? ನೀವು ಅವರಿಂದ ಸುರಕ್ಷಿತರಾಗಿರಲು ಕೇವಲ ಭದ್ರತೆಯ ಕ್ರಮವಾಗಿ ಹಾಗೆ ಮಾಡಿದ್ದರೆ ಅದು ಕ್ಷಮ್ಯ. ಅಲ್ಲಾಹನು ತನ್ನ ಕುರಿತು ನಿಮ್ಮನ್ನು ಎಚ್ಚರಿಸುತ್ತಾನೆ. ಕೊನೆಗೆ ನೀವು ಅಲ್ಲಾಹನೆಡೆಗೇ ಮರಳಬೇಕಾಗಿದೆ.

ಖುರಾನ್ ಅಧ್ಯಾಯ 16 ಅಯಾತ್ 106. (ಧಿಕ್ಕಾರವನ್ನು ಪ್ರಕಟಿಸಲು) ನಿರ್ಬಂಧಿತನಾಗಿದ್ದು, ಮನಸಾರೆ ವಿಶ್ವಾಸದಲ್ಲೇ ಸಂತೃಪ್ತನಾಗಿರುವವನ ಹೊರತು ? ಅಲ್ಲಾಹನಲ್ಲಿ ವಿಶ್ವಾಸವಿಟ್ಟ ಬಳಿಕ ಆತನನ್ನು ಧಿಕ್ಕರಿಸಿದವನು ಮತ್ತು ಧಿಕ್ಕಾರಕ್ಕಾಗಿ ತನ್ನ ಮನಸ್ಸನ್ನು ತೆರೆದವನು, ಅಲ್ಲಾಹನ ಕ್ರೋಧಕ್ಕೆ ತುತ್ತಾಗುವನು ಮತ್ತು ಅವರಿಗೆ ಭಾರೀ ಘೋರ ಶಿಕ್ಷೆ ಸಿಗಲಿದೆ.

ಮೌದುದಿ – ಸೈಯಿದ್ ಅಬುಲ್ ಅಲಾ ಮೌದುದಿ ? ತಫಿಮ್ ಅಲ್ ಖುರಾನ್ ಎಂಬ ತಫ್ಸೀರ್ ನಲ್ಲಿ ವ್ಯಾಖ್ಯಾನಿಸಿರುವಂತೆ ಅಂದರೆ, "ನಂಬಿಕೆಯುಳ್ಳವನು (ಮುಸ್ಲಿಮ್) ಇಸ್ಲಾಂನ ಶತ್ರುಗಳ ಕೈಗೆ ಸಿಕ್ಕಾಗ ದರ್ಪ ಮತ್ತು ದುಷ್ಕೃತ್ಯಗಳಿಂದ ಹೆದರಿದಾಗ. ಅವನು ತನ್ನ ನಂಬಿಕೆಯನ್ನು ಮರೆಮಾಚಬಹುದು, ಮತ್ತು ಅವರಲ್ಲಿ ಒಬ್ಬನಾಗಿರುವಂತೆ ಅವರಲ್ಲಿ ವಾಸಿಸಬಹುದು ಅಥವಾ ಅವರು ಅವನ ನಂಬಿಕೆಯನ್ನು (ಇಸ್ಲಾಮ್ ಅನ್ನು) ತಿಳಿದಿದ್ದರೆ, ಅವರು, ತಮ್ಮ ಜೀವವನ್ನು ರಕ್ಷಿಸಲು ಅವರ ಸ್ನೇಹಕ್ಕಾಗಿ ಒಂದು ತೋರಿಕೆಯನ್ನು ಮಾಡಬಹುದು. ಅತ್ಯಂತ ಭಯದ ಸಂದರ್ಭದಲ್ಲಿ, ಅವರ ದಬ್ಬಾಳಿಕೆಯನ್ನು ತಾಳಿಕೊಳ್ಳಲು ತಾವು ಶಕ್ತವಾಗಿಲ್ಲವೆಂದು ಭಾವಿಸಿದರೆ, ಅವನ ನಂಬಿಕೆಯನ್ನು (ಇಸ್ಲಾಮನ್ನು) ತ್ಯಜಿಸಲು ಸಹ ಅವರು ಅನುಮತಿ ನೀಡುತ್ತಾರೆ. "

ಮೌದುದಿ – ಸೈಯಿದ್ ಅಬುಲ್ ಅಲಾ ಮೌದುದಿ ? ತಫಿಮ್ ಅಲ್ ಖುರಾನ್ ಎಂಬ ತಫ್ಸೀರ್ ನಲ್ಲಿ ವ್ಯಾಖ್ಯಾನಿಸಿರುವಂತೆ ಅಮ್ಮರ್ ಬಿನ್ ಯಾಸಿರ್ ಎನ್ನುವವರು ಪವಿತ್ರ ಪ್ರವಾದಿಯ ಬಳಿಗೆ ಅಳುತ್ತ ಬಂದು, "ಓ ಅಲ್ಲಾ ನ ಸಂದೇಶವಾಹಕರೇ, ನಾನು ನಿನ್ನ ಬಗ್ಗೆ ಕೆಟ್ಟದಾಗಿ ಮಾತನಾಡುವವತನಕ ಮತ್ತು ಅವರ ದೇವತೆಗಳನ್ನು ಹೊಗಳುವ ತನಕ ಅವರು ನನ್ನನ್ನು ಬಿಡಲಿಲ್ಲ" ಎಂದು ಹೇಳಿದರು.

ಪವಿತ್ರ ಪ್ರವಾದಿ, "ನಿನ್ನ ಹೃದಯದಲ್ಲಿ ಈ ಬಗ್ಗೆ ನೀವು ಹೇಗೆ ಭಾವಿಸುತ್ತೀರಿ?" ಎಂದು ಕೇಳಿದನು. "ನನ್ನ ಹೃದಯವು ನಂಬಿಕೆಯ ಬಗ್ಗೆ ಸಂಪೂರ್ಣವಾಗಿ ಮನವರಿಕೆಯಾಗಿದೆ" ಎಂದು ಅವರು ನಮ್ರವಾಗಿ ಉತ್ತರಿಸಿದರು. ಈ ಸಮಯದಲ್ಲಿ ಪವಿತ್ರ ಪ್ರವಾದಿ, "ಅವರು ನಿಮ್ಮನ್ನು ಮತ್ತೆ ಅದೇ ಚಿತ್ರಹಿಂಸೆಗೆ ಹಾಕಿದರೆ, ನೀವು ಅದೇ ಪದಗಳನ್ನು ಹೇಳಬಹುದು".

ಇವುಗಳ ತಾತ್ಪರ್ಯ ಖುರಾನ್ ಮೇಲಿರುವ ನಂಬಿಕೆಯ ಬಗ್ಗೆ ವಿವಾದಗಳು ಎದ್ದಾಗ, ಅದನ್ನು ರಕ್ಷಿಸುವ ಮತ್ತು ನಂಬಿಕೆಯನ್ನು ಮನದಲ್ಲಿಯೇ ಜೀವಂತ ಇಡುವ ಮುಸ್ಲಿಮರು, ಇತರೆ ಮುಸ್ಲಿಮೇತರರ ಜೊತೆ ಅದು ಹೀಗಲ್ಲ ಹಾಗೆ, ಎಂದು ತೋರಿಕೆಯನ್ನು ಮಾಡಬಹುದು, ಅರ್ಥಾತ್ ಸುಳ್ಳನ್ನು ಹೇಳಿಯಾದರೂ ತಮ್ಮ ನಂಬಿಕೆಯನ್ನು ಕಾಪಾಡಿಕೊಳ್ಳಬೇಕು ಎಂದು ಸ್ಪಷ್ಟವಾಗಿ ಹೇಳುತ್ತದೆ ಖುರಾನ್.

ಮುಸ್ಲಿಮೇತರರ ದೇವರನ್ನು ಮಲಿನ ಅನ್ನುತ್ತಾರೆ – ಅದು ಸುಳ್ಳು ಅನ್ನಬಾರದಂತೆ ? ಅದಕ್ಕೆ ಅಪಮಾನಕರ ಶಿಕ್ಷೆ

ಅಧ್ಯಾಯ 22 ಅಯಾತ್ 30. .............. ನೀವು ವಿಗ್ರಹಗಳ ಮಾಲಿನ್ಯದಿಂದ ದೂರವಿರಿ ಮತ್ತು ಸುಳ್ಳು ಮಾತಿನಿಂದ ದೂರವಿರಿ.

ಅಧ್ಯಾಯ 22 ಅಯಾತ್ 57. ಇನ್ನು ಧಿಕ್ಕಾರಿಗಳು ಮತ್ತು ನಮ್ಮ ವಚನಗಳನ್ನು ಸುಳ್ಳೆಂದವರು. ಅವರಿಗೆ, ಅಪಮಾನಾತ್ಮಕ ಶಿಕ್ಷೆ ಇದೆ.

ದೇವರ ವಿಷಯದಲ್ಲಿ ಜಗಳ ಬೇಡ ಧಿಕ್ಕರಿಸದೆ ಅಲ್ಲಹನ ಒಪ್ಪಿ ಇಲ್ಲವೆ ಕುದಿಯುವ ನೀರನ್ನು ಸುರಿಯುತ್ತೇವೆ ಬೆಂಕಿಯನ್ನು ಹಚ್ಚುತ್ತೇವೆ.

ಅಧ್ಯಾಯ 22 ಅಯಾತ್ 19. (ನೋಡಿರಿ;) ಆ ಎರಡು ಗುಂಪುಗಳು ತಮ್ಮ ಒಡೆಯನ ವಿಷಯದಲ್ಲಿ ಜಗಳಾಡಿದವು. (ಅವರ ಪೈಕಿ) ಧಿಕ್ಕಾರಿಗಳಿಗಾಗಿ ನರಕಾಗ್ನಿಯ ಉಡುಗೆಯನ್ನು ಕತ್ತರಿಸಿಡಲಾಗಿದೆ. ಕುದಿಯುವ ನೀರನ್ನು ಅವರ ತಲೆಗಳ ಮೇಲೆ ಸುರಿಯಲಾಗುವುದು.

ಇದು ಯಹೂದರು ಮತ್ತು ಕ್ರೈಸ್ತರ ಬಗ್ಗೆ ಹೇಳಲಾಗಿದೆ ಎಂದು ವ್ಯಾಖ್ಯಾನಿಸುತ್ತಾರೆ.

ಅಲ್ಲಾಹ ಒಬ್ಬನೇ ದೇವರು ನಿಮ್ಮ ದೇವರಿಗೆ ನೊಣದಿಂದ ಕಿತ್ತುಕೊಳ್ಳುವ ಶಕ್ತಿಯಿಲ್ಲ ( ಇನ್ನು ನಮ್ಮದೇನು ಕಿತ್ತುಕೊಳ್ತೀರ ಅಂದಂತಿದೆ):-

ನಿಮ್ಮ ದೇವರು ಶಕ್ತಿವಂತ, ಆತನಿಗೆ ನಿಮಗೆಲ್ಲಾ ಸಹಾಯ ಮಾಡುವ ಶಕ್ತಿ ಇದೆ, ಅಂತ ಎಷ್ಟು ಬೇಕೋ ಅಷ್ಟು ಸಾರಿ ಅದರಲ್ಲಿ ಯಾರದ್ದೇನು ಅಭ್ಯಂತರ, ಅವರಿಗೆ ಇಷ್ಟವಾದದ್ದನ್ನು ಅವರು ಪೂಜಿಸಲಿ. ನಿಮ್ಮ ದೇವರ ಕೈಯಿಂದ ನೊಣ ಕಿತ್ತುಕೊಂಡು

ಹೋದಾಗಲೂ ಅದರಿಂದ ಕಿತ್ತು ಕೊಳ್ಳುವ ಶಕ್ತಿ ನಿಮ್ಮ ದೇವರಿಗೆ ಇಲ್ಲ ಎನ್ನುತೀರಲ್ಲ, ಅದನ್ನೇ ಇಂದಿಗೂ ಬೋದಿಸುತ್ತಿದ್ದೀರಲ್ಲ. ಇದು ನಮ್ಮ ನಂಬಿಕೆಯಲ್ಲಿ ಹಸ್ತಕ್ಷೇಪ ಮಾಡಿದಂತೆ ಆಗುವುದಿಲ್ಲವೆ. ಅದಕ್ಕಾಗಿಯೇ ಇಂದಿಗೂ ಅಜಾನ್ ಕೂಗುವಾಗ ಅಲ್ಲಾಹ್ ಬಿಟ್ಟರೆ ನಿಜವಾದ ದೇವರು ಯಾವುದೂ ಇಲ್ಲ ಎಂದು ಪ್ರತಿದಿನ 10 ಬಾರಿ ಕೂಗಿ ಕೂಗಿ ಹೇಳಲಾಗುತ್ತಿದೆ. ಇದನ್ನು ಜಾತ್ಯಾತೀತ ಸಂವಿಧಾನದಲ್ಲಿ ಒಪ್ಪಲಾಗುತ್ತದೆಯೇ. ನಿಮ್ಮ ನಂಬಿಕೆಯ ದೇವರಿನ ಬಗ್ಗೆ ಕೇವಲವಾಗಿ ಕಂಡಾಗ ನಿಮಗೆ ಹ್ಯಾಗೆ ಕೋಪ, ಕೊಲ್ಲು, ಹೊಡಿ, ಬಡಿ ಎಂಬ ಬಾವನೆಗಳು ಬರುತ್ತೇವೆಯೋ ಹಾಗೆ ಬೇರೆಯವರಿಗೂ ಬರುವುದಿಲ್ಲವೆ. ಸ್ವಲ್ಪವಾದರೂ ಇಂತಹ ಸಾಲು ನಮ್ಮ ಸಂವಿಧಾನ ಬಾಹಿರ ತೆಗೆದು ಹಾಕೋಣ ಅಂತ ನಿಮ್ಮಲ್ಲಿ ಯಾಕೆ ಚಿಂತನೆ ನಡೆದಿಲ್ಲ ?

ಅಧ್ಯಾಯ 22 ಅಯಾತ್ 73. ಈ ಬೋದನೆ ಇದೆ:- ಮಾನವರೇ, ನಿಮಗೊಂದು ಉದಾಹರಣೆ ನೀಡಲಾಗುತ್ತಿದೆ. ಅದನ್ನು ಆಲಿಸಿರಿ; ನೀವು ಅಲ್ಲಾಹನ ಹೊರತು ಯಾರನ್ನೆಲ್ಲಾ ಕೂಗಿ ಪ್ರಾರ್ಥಿಸುತ್ತೀರೋ ಅವರು ಖಂಡಿತ ಒಂದು ನೊಣವನ್ನು ಕೂಡಾ ಸೃಷ್ಟಿಸಲಾರರು. ಅದಕ್ಕಾಗಿ ಅವರೆಲ್ಲರೂ ಒಂದುಗೂಡಿದರೂ ಸರಿಯೇ. ಇನ್ನು, ಒಂದು ನೊಣವು ಅವರಿಂದ ಏನನ್ನಾದರೂ ಕಿತ್ತುಕೊಂಡರೆ ಅದನ್ನು ಅದರಿಂದ ಬಿಡಿಸಿಕೊಳ್ಳುವುದಕ್ಕೂ ಅವರಿಂದ ಸಾಧ್ಯವಿಲ್ಲ. ಅಪೇಕ್ಷಿಸುವವರೂ ದುರ್ಬಲರು ಮತ್ತು ಯಾರಿಂದ ಅಪೇಕ್ಷಿಸಲಾಗುತ್ತಿದೆಯೋ ಅವರೂ ದುರ್ಬಲರು.

ಪ್ರತಿ ದಿನ ಐದು ಬಾರಿ ಅಜಾನ್/ಅದಾನ್ ಕೂಗುವ ವಿಚಾರವಗಿ ಗಮನಹರಿಸುವ "ಅಲ್ಲಹು ಅಕ್ಬರ್" ಎಂದು ನಾಲ್ಕು ಬಾರಿ ಕೂಗುತ್ತಾರೆ. ಅಂದರೆ "ಅಲ್ಲಾಹನು ಅತ್ಯಂತ ಶ್ರೇಷ್ಠ", ನಂತರ "ಅಶ್ ಹದು ಅನ್ ಲಾ ಇಲಾಹ ಇಲ್ಲ್ ಅಲ್ಲಾಹ" ಎಂದು ಎರಡು ಬಾರಿ ಹೇಳಲಾಗುತ್ತದೆ. ಅಂದರೆ "ಅಲ್ಲಾಹ್ ಬಿಟ್ಟರೆ ನಿಜವಾದ ದೇವರು ಯಾವುದೂ ಇಲ್ಲ ಎಂದು ಸಾಕ್ಷೀ ಕರಿಸುತ್ತೇನೆ" ನಂತರ "ಅಶ್ ಹದು ಅನ್ನಾ ಮುಹಮ್ಮಡನ್ ರಸೂಲ್ ಉಲ್ಲಾ" ಎಂದು ಎರಡು ಬಾರಿ ಹೇಳಲಾಗುತ್ತದೆ. ಅಂದರೆ "ಮೊಹಮದ್ ರವರೇ ಅಲ್ಲಾಹನ ಸಂದೇಶವಾಹಕರು ಎಂದು ಸಾಕ್ಷೀ ಕರಿಸುತ್ತೇನೆ". ನಂತರ "ಹಯಾ ಅಲಸ್ ಸಲಾಹ್" ಎಂದು ಎರಡು ಬಾರಿ ಹೇಳಲಾಗುತ್ತದೆ. ಅಂದರೆ "ಪ್ರಾರ್ಥನೆಗೆ ಬನ್ನಿ". ನಂತರ "ಹಯಾ ಅಲ್ ಅಲ್ ಫ಼ಲಾ". ಎಂದು ಎರಡು ಬಾರಿ ಹೇಳಲಾಗುತ್ತದೆ. ಅಂದರೆ "ಯಶಸ್ಸಿಗೆ ಬನ್ನಿ", ನಂತರ "ಅಲ್ಲಾಹನು ಅತ್ಯಂತ ಶ್ರೇಷ್ಠ" "ಅಲ್ಲಾಹನು ಅತ್ಯಂತ ಶ್ರೇಷ್ಠ" "ಅಲ್ಲಾಹ್ ಬಿಟ್ಟರೆ ನಿಜವಾದ ದೇವರು ಯಾವುದೂ ಇಲ್ಲ"

ಎಂದು ಕೂಗಲ್ಪಡುವ ಅಜಾನ್ ನಲ್ಲಿ ಕುರಾನ್ ನ ಸಂಪೂರ್ಣ ಬೋದನಾ ಮಹತ್ವ ಅಡಗಿದೆ.[49]

ಮುಸ್ಲಿಮರಿಗೆ ಬೋದಿಸಲ್ಪಡುವುದು ಇದೆ "ಅಲ್ಲಾಹ್ ಬಿಟ್ಟರೆ ನಿಜವಾದ ದೇವರು ಯಾವುದೂ ಇಲ್ಲ" ಅಂದರೆ ಬಹುದೇವಾರದಕರು ಮತ್ತು ಇತರೆ ದೇವಾರದಕರು ಪೂಜಿಸುವ ದೇವರುಗಳು ನಿಜವಾದ ದೇವರು ಅಲ್ಲ. ಇದು ಪ್ರತಿ ದಿನ ಐದು ಬಾರಿ ಯಾರಿಗೆ ಕೂಗಿ ಹೇಳಲಾಗುತ್ತಿದೆ. ಅದು ಮುಸ್ಲಿಮರಿಗೆ ಮಾತ್ರವೇ ಆಗಿದ್ದರೆ ಯಾರೂ ಚಿಂತಿಸುತ್ತಿರಲಿಲ್ಲ, ಆದರೆ ಇದು ಇತರೆ ಧಾರ್ಮಿಕ ಬಾವನೆಗಳಿಗೆ ನೇರ ಹಸ್ತಕ್ಷೇಪ ಮಾಡುವಂತಹ ಪ್ರಾಯೋಗಿಕ ಸಾದನವಾಗಿ ಬಿಟ್ಟಿದೆ.

ಮುಸ್ಲಿಮರಿಗೆ ಮುಸ್ಲಿಮೇತರರ ವಿರುದ್ದ ಯುದ್ದ ಮಾಡುವುದು ಕಡ್ಡಾಯಗೊಳಿಸಲಾಗಿದೆ. ಎಲ್ಲಿವರೆಗೆ ಯುದ್ದ ದಂಡ ಪಾವತಿಸಿ ಇಸ್ಲಾಮಿಗೆ ಶರಣಾಗುವ ವರೆಗೆ (ಮತ ಪರಿವರ್ತನೆ ಆಗುವವರೆಗೆ). ಮುಸ್ಲಿಮೇತರರು ಆರಾಧಿಸುವ ದೇವರೆಲ್ಲ ಪೂಜೆಗೆ ಅರ್ಹರಲ್ಲ, ಅಲ್ಲಾಹ ಒಬ್ಬನಿಗೇ ಪುಜೆ ಸಲ್ಲಬೇಕು. ಅವರ ಮತದ ಪ್ರಚಾರ ಮುಸ್ಲಿಮೇತರಿಗೆ ಎಷ್ಟೇ ಅಪ್ರಿಯವಾಗಿದ್ದರು ಅದನ್ನು ವಿಸ್ತರಿಸಬೇಕು ಎಂಬ ಬೋದನೆ ಖುರಾನ್ ನಲ್ಲಿ ಇದೆ.

ಖುರಾನ್ 2:216. ನಿಮಗೆ ಯುದ್ಧವನ್ನು ಕಡ್ಡಾಯಗೊಳಿಸಲಾಗಿದೆ ಮತ್ತು ಅದು ನಿಮಗೆ ಅಪ್ರಿಯವಾಗಿದೆ. ಆದರೆ ನಿಮಗೆ ಅಪ್ರಿಯವಾಗಿರುವ ಸಂಗತಿಯೊಂದು ನಿಮ್ಮ ಪಾಲಿಗೆ ಹಿತಕರವಾಗಿರಲೂ ಬಹುದು. ಹಾಗೆಯೇ, ನೀವು ತುಂಬಾ ಪ್ರೀತಿಸುವ ಸಂಗತಿಯೊಂದು ನಿಮ್ಮ ಪಾಲಿಗೆ ಕೆಟ್ಟದಾಗಿರಲೂಬಹುದು. ಅಲ್ಲಾಹನಿಗೆ ತಿಳಿದಿದೆ ಮತ್ತು ನಿಮಗೆ ತಿಳಿದಿಲ್ಲ.

ಖುರಾನ್ 9:29. ಅಲ್ಲಾಹನಲ್ಲಿ ಹಾಗೂ ಅಂತಿಮ ದಿನದಲ್ಲಿ ವಿಶ್ವಾಸವಿಡದ ಮತ್ತು ಅಲ್ಲಾಹ್ ಮತ್ತವನ ದೂತರು ನಿಷೇಧಿಸಿರುವುದನ್ನು ನಿಷಿದ್ಧವೆಂದು ಪರಿಗಣಿಸದವರ ವಿರುದ್ಧ ಹಾಗೂ ಗ್ರಂಥನೀಡಲ್ಪಟ್ಟವರ ಪೈಕಿ, ಸತ್ಯ ಧರ್ಮವನ್ನು ಸ್ವೀಕರಿಸದವರ ವಿರುದ್ಧ ಯುದ್ಧ ಸಾರಿರಿ – ಅವರು ತಮ್ಮ ಕೈಯಿಂದ 'ಜಿಝಿಯಾ' (ದಂಡ) ಪಾವತಿಸಿ, ಅಧೀನರಾಗಿ ಬಿಡುವ ತನಕ.

ಖುರಾನ್ 9:31. ಅವರು ಅಲ್ಲಾಹನ ಹೊರತಾಗಿ, ತಮ್ಮ ವಿದ್ವಾಂಸರನ್ನು, ಸನ್ಯಾಸಿಗಳನ್ನು ಮತ್ತು ಮರ್ಯಮರ ಪುತ್ರ ಮಸೀಹರನ್ನು

[49] https://www.alislam.org/library/book/salat/

ದೇವರಾಗಿಸಿಕೊಂಡಿದ್ದಾರೆ. ನಿಜವಾಗಿ ಅವರಿಗೆ, ಒಬ್ಬ ದೇವರ ಹೊರತು ಬೇರೆ ಯಾರನ್ನೂ ಪೂಜಿಸಬಾರದೆಂದು ಆದೇಶಿಸಲಾಗಿದೆ. ಅವನ ಹೊರತು ಬೇರೆ ಯಾರೂ ಪೂಜಾರ್ಹರಲ್ಲ. ಅವರು ಪಾಲುಗೊಳಿಸುವ ಎಲ್ಲದರಿಂದ ಅವನು ಸಂಪೂರ್ಣ ಮುಕ್ತನು.

ಖುರಾನ್ 9:32. ಅವರು ಅಲ್ಲಾಹನ ಪ್ರಕಾಶವನ್ನು ತಮ್ಮ ಬಾಯಿಯಿಂದ ಊದಿ ನಂದಿಸ ಬಯಸುತ್ತಾರೆ. ಅಲ್ಲಾಹನು ಮಾತ್ರ ತನ್ನ ಪ್ರಕಾಶವನ್ನು ಪರಿಪೂರ್ಣವಾಗಿ ವ್ಯಾಪಿಸದೆ ಬಿಡಲಾರನು – ಧಿಕ್ಕಾರಿಗಳಿಗೆ ಅದು ಎಷ್ಟೇ ಅಪ್ರಿಯವಾಗಿದ್ದರೂ ಸರಿಯೇ.

ಖುರಾನ್ 9:33. ಅವನೇ, ತನ್ನ ದೂತನನ್ನು ಮಾರ್ಗದರ್ಶನದೊಂದಿಗೆ ಹಾಗೂ ಎಲ್ಲ ಧರ್ಮಗಳಿಗೆದುರಾಗಿ ಬೆಳಗಲು ಸತ್ಯ ಧರ್ಮದೊಂದಿಗೆ ಕಳುಹಿಸಿದವನು. ಬಹುದೇವಾರಾಧಕರಿಗೆ ಅದು ಎಷ್ಟೇ ಅಪ್ರಿಯವಾಗಿದ್ದರೂ ಸರಿಯೇ.

ಖುರಾನ್ 9:73. ದೂತರೇ, ನಂಬಿಕೆ ಇಲ್ಲದವರ ಮತ್ತು ನಿರಾದಾರವಾಗಿ ಹಕ್ಕು ಮಂಡಿಸುವವರ ವಿರುದ್ಧ ಹೋರಾಡಿರಿ ಹಾಗೂ ಅವರ ಪಾಲಿಗೆ ಕಠಿಣರಾಗಿರಿ. ನರಕವೇ ಅವರ ನೆಲೆಯಾಗಿದೆ. ಅದು, ತುಂಬಾ ಕೆಟ್ಟ ನೆಲೆಯಾಗಿದೆ.

ಖುರಾನ್ 9:123. ವಿಶ್ವಾಸಿಗಳೇ, ನಂಬಿಕೆ ಇಲ್ಲದವರ ಪೈಕಿ ನಿಮ್ಮ ಪಕ್ಕದಲ್ಲಿರುವವರ ವಿರುದ್ಧ (ಮೊದಲು) ಹೋರಾಡಿರಿ – ಅವರು ನಿಮ್ಮಲ್ಲಿ ಕಾಠಿಣ್ಯವನ್ನು ಕಾಣಲಿ. ನಿಮಗೆ ತಿಳಿದಿರಲಿ, ಖಂಡಿತವಾಗಿಯೂ ಅಲ್ಲಾಹನು ಸತ್ಯನಿಷ್ಠರ ಜೊತೆಗಿದ್ದಾನೆ.

ಅಲ್ಲಾಹನ ಪಾಲಿಸದಿದ್ದರೆ ಪಟ್ಟಣಗಳನ್ನೇ ನಾಶ ಮಾಡುವೆ ಅನ್ನುತ್ತದೆ ಖುರಾನ್

ಖುರಾನ್ 17:6 ರ ಬಗ್ಗೆ ಈ ಅನುವಾದಗಳು ಇವೆ[50]

ಅಹ್ಮದ್ ಅಲಿ

"ನಾವು ಒಂದು ಮಾನವ ವಸತಿಯನ್ನು ನಾಶಮಾಡಿದಾಗ ಅದರ ಜನರಿಗೆ ಸುಲಭವಾಗಿ ಜೀವಿಸುವಂತೆ ನಾವು ನಮ್ಮ ಆಜ್ಞೆಯನ್ನು ಕಳುಹಿಸುತ್ತೇವೆ ಮತ್ತು ಅವರು ಅವಿಧೇಯರಾದಾಗ, ಅವರ ವಿರುದ್ಧದ ದಂಡನೆಯು ಸಮರ್ಥಿಸಲ್ಪಟ್ಟಿದೆ ಮತ್ತು ನಾವು ಅವರನ್ನು ಸಂಪೂರ್ಣವಾಗಿ ನಾಶಪಡಿಸುತ್ತೇವೆ.

ಅಲಿ ಖಾರೈ

---

[50] https://quranx.com/17.16

ಒಂದು ಪಟ್ಟಣವನ್ನು ನಾಶಮಾಡಲು ನಾವು ಆಶಿಸಿದಾಗ ಅದರ ಶ್ರೀಮಂತರಿಗೆ ನಾವು ಆಜ್ಞಾಪಿಸುತ್ತೇವೆ. (ಅಲ್ಲಾಹನನ್ನು ಪಾಲಿಸಿ ಎಂದು) ಆದರೆ ಅವರು ಅದರಲ್ಲಿ ಉಲ್ಲಂಘನೆ ಮಾಡುತ್ತಾರೆ ಮತ್ತು ಆ ವಾಕ್ಯವು ಅದರ ವಿರುದ್ದವಾಗಿ ಉಳಿದು ಬಿಡುತ್ತದೆ ಮತ್ತು ನಾವು ಅದನ್ನು (ಪಟ್ಟಣವನ್ನು) ಸಂಪೂರ್ಣವಾಗಿ ನಾಶಪಡಿಸುತ್ತೇವೆ.

ಹಿಲಲಿ ಮತ್ತು ಖಾನ್

ಮತ್ತು ನಾವು ಒಂದು ಪಟ್ಟಣವನ್ನು ನಾಶಮಾಡಲು ನಿರ್ಧರಿಸಿದಾಗ (ಜನಸಂಖ್ಯೆಯನ್ನು), ನಾವು (ಮೊದಲಿಗೆ) ಅವರಲ್ಲಿ ಕೆಲವರಿಗೆ ನಿರ್ದಿಷ್ಟವಾದ ಆದೇಶವನ್ನು ಕಳುಹಿಸುತ್ತೇವೆ (ಅಲ್ಲಾಹನನ್ನು ಪಾಲಿಸಿ ಪ್ರಾಮಾಣಿಕರಾಗಿರಿ ಎಂದು) (ಅಥವಾ ನಾವು ಮೊದಲಿಗೆ ಅದರ ಜನಸಂಖ್ಯೆಯ ಸಂಖ್ಯೆಯನ್ನು ಹೆಚ್ಚಿಸಬಹುದು) ಈ ಜೀವನದ ಒಳ್ಳೆಯದು ಕೊಡಲ್ಪಡಬಹುದು. ನಂತರ ಅವರು ಅದರಲ್ಲಿಯೇ ಉಲ್ಲಂಘಿಸುತ್ತಾರೆ, ಮತ್ತು ಈ ರೀತಿಯಾಗಿ ವಾಕ್ಯವು (ಹಿಂಸೆಯು) ಅದರ ವಿರುದ್ಧ ಸಮರ್ಥನೆಯಾಗಿದೆ. ನಂತರ ನಾವು ಅದನ್ನು ಸಂಪೂರ್ಣವಾಗಿ ನಾಶಪಡಿಸುತ್ತೇವೆ.

ಮುಸ್ಲಿಮೇತರರಿಗೆ ಅರಿವಿರಲಿ ಇಂದಿಗೂ ಈ ಖುರಾನ್ ಮಸೀದಿಗಳಲ್ಲಿ ಮದರಸಾಗಳಲ್ಲಿ ಬೋಧನೆಯಾಗುತ್ತಿದೆ.

ಖುರಾನ್ ಮೂಲ ಉದ್ದೇಶ ಅವರ ಮತವನ್ನು ಎಲ್ಲೆಡೆ ಸ್ಥಾಪಿಸುವುದು

ಅಧ್ಯಾಯ 9: ಅತ್ತೌಬಃ (ಪಶ್ಚಾತ್ತಾಪ), ಸೂಕ್ತ 33 ಅವನೇ, ತನ್ನ ದೂತನನ್ನು ಮಾರ್ಗದರ್ಶನದೊಂದಿಗೆ ಹಾಗೂ ಎಲ್ಲ ಧರ್ಮಗಳಿಗೆದುರಾಗಿ ಬೆಳಗಲು ಸತ್ಯ ಧರ್ಮದೊಂದಿಗೆ ಕಳುಹಿಸಿದವನು. ಬಹುದೇವಾರಾಧಕರಿಗೆ ಅದು ಎಷ್ಟೇ ಅಪ್ರಿಯವಾಗಿದ್ದರೂ ಸರಿಯೇ.

ಹಿಲಾಲಿ ಮತ್ತು ಖಾನ್ ರವರ ಪ್ರಕಾರ ಈ ಸುರಾ ಈ ರೀತಿ ಅನುವಾದಿಸಿದ್ದಾರೆ: (ಇಸ್ಲಾಮ್) ಪಂಥದ ಸತ್ಯ ಮತ್ತು ಮಾರ್ಗದರ್ಶನದೊಂದಿಗೆ ಅವರ ಸಂದೇಶವಾಹಕರನ್ನು (ಮೊಹಮ್ಮದ್) ಅದನ್ನು ಎಲ್ಲಾ ಪಂಥಗಳಿಗಿನ್ನಾ ಮೇಲುಮಟ್ಟವಾಗಿಸುವಂತೆ ಅವರೇ ಕಳಿಸಿದ್ದಾರೆ, ಮುಶ್ರೀಕರು (ಬಹುದೇವಾರಾಧಕರು, ಪಗಾನರು, ವಿಗ್ರಹಾರಾಧಕರು, ಅಲ್ಲಾಹರ ಏಕತೆಯಲ್ಲಿ ನಂಬಿಕೆ ಇಲ್ಲದವರು) ದ್ವೇಶಿಸಿದರೂ.

ಮೌದುದಿ ರವರ ತಫ್ಸೀರ್ ನಲ್ಲಿ ವ್ಯಾಖ್ಯಾನಿಸಿರುವಂತೆ, ಈಗ ಈ ಪದ್ಯದ ಪ್ರಾಮುಖ್ಯತೆಯನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸೋಣ. ಪ್ರವಾದಿಯ ಗುರಿಯ

ಉದ್ದೇಶವೆಂದರೆ ಅವರು ಎಲ್ಲಾ ಇತರ ವಿಧಾನಗಳು ಮತ್ತು ಜೀವನದ ವ್ಯವಸ್ಥೆಗಳ ಮೇಲೆ ಪ್ರಬಲವಾದ ಅಲ್ಲಾದಿಂದ ತಂದ ಮಾರ್ಗದರ್ಶನ ಮತ್ತು ಸರಿಯಾದ ಮಾರ್ಗವನ್ನು ಮಾಡುವುದು. ಬೇರೆ ರೀತಿಯಲ್ಲಿ ಹೇಳುವುದಾದರೆ, ಅವರಿಂದ ರಿಯಾಯಿತಿಗಳನ್ನು ಪಡೆದುಕೊಳ್ಳಲು ಅಲ್ಲಾದ ಮಾರ್ಗವನ್ನು ಇತರ ಮಾರ್ಗಗಳಿಗೆ ಅಧೀನವಾಗಿರುವಂತೆ ಅನುಮತಿಸಲು ಸಂದೇಶವಾಹಕವನ್ನು ಕಳುಹಿಸಿರುವುದಿಲ್ಲ. ಅವನ ಸಾರ್ವಭೌಮತ್ವವನ್ನು ಇತರ ಮಾರ್ಗಗಳಲ್ಲಿ ಪ್ರಬಲಗೊಳಿಸುವುದಕ್ಕಾಗಿ ಆತ ಭೂಮಿಯ ಸಾರ್ವಭೌಮತ್ವದಿಂದ ಮತ್ತು ಸ್ವರ್ಗಕ್ಕೆ ಕಳುಹಿಸಲ್ಪಟ್ಟನು.

ಅಲ್ಲಿಗೆ ಮುಸ್ಲಿಮ್ ಧರ್ಮ ಇತರೆ ಧರ್ಮದೊಂದಿಗೆ ಪ್ರಜಾಪ್ರಭುತ್ವದ ಹಾದಿಯಲ್ಲಿ ಜೀವಿಸಲು ಒಪ್ಪುವುದಿಲ್ಲ ಎಂಬುದೇ ಇವರ ಬೋದನೆ. ಪ್ರಜಾಪ್ರಭುತ್ವದ ವಿರುದ್ಧವೇ ಇವರ ಬೋದನೆ ಇರುವಾಗ ಇಂತಹ ಬೋದನೆಯಿಂದ ನಮ್ಮ ರಾಷ್ಟ್ರೀಯ ಬಾವೈಕ್ಯತೆಗೆ ದಕ್ಕೆ ಆಗುವುದಿಲ್ಲವೆ.?

ಪವಿತ್ರ , ದಿವ್ಯ ಮತ್ತು ಶಾಂತಿ ಬೋದಕ ಎಂದು ಹೇಳಿಕೊಳ್ಳುವ ಖುರಾನ್ ನಲ್ಲಿ ಪ್ರತೀಕಾರ/ ಸೇಡು ತೀರಿಸಿಕೊಳ್ಳುವುದು ಕಡ್ಡಾಯಗೊಳಿಸಿದೆ – ಪ್ರತೀಕಾರ ಬೇಡವೆಂದವನಿಗೆ ಪರಿಹಾರ ದನವಂತೆ.

ಅಧ್ಯಾಯ 2: ಅಲ್ ಬಕರಃ (ದನ) , ಸೂಕ್ತ 178 ವಿಶ್ವಾಸಿಗಳೇ, ಕೊಲೆಯ ಪ್ರಕರಣಗಳಲ್ಲಿ ನಿಮಗೆ 'ಕಿಸಾಸ್' (ಪ್ರತೀಕಾರದ) ನಿಯಮವನ್ನು ಕಡ್ಡಾಯಗೊಳಿಸಲಾಗಿದೆ. ಸ್ವತಂತ್ರನ ಬದಲಿಗೆ ಸ್ವತಂತ್ರ, ಗುಲಾಮನ ಬದಲಿಗೆ ಗುಲಾಮ ಮತ್ತು ಸ್ತ್ರೀಯ ಬದಲಿಗೆ ಸ್ತ್ರೀ. ಇನ್ನು ಆತನಿಗೆ (ಕೊಲೆಗಾರನಿಗೆ) ಅವನ (ಕೊಲೆಯಾದವನ) ಸಹೋದರನು ಏನಾದರೂ ರಿಯಾಯ್ತಿ ತೋರಲು ಬಯಸಿದರೆ, ಉತ್ತಮ ರೀತಿಯಲ್ಲಿ (ನಿಯಮ ಪ್ರಕಾರ) ಪ್ರಕರಣವು ಇತ್ಯರ್ಥಗೊಳ್ಳಬೇಕು ಮತ್ತು ಕೊಲೆಗಾರನು ಅವನಿಗೆ (ಕೊಲೆಯಾದವನ ಬಂಧುವಿಗೆ) ಉದಾರ ರೀತಿಯಲ್ಲಿ ಪರಿಹಾರ ಧನವನ್ನು ಪಾವತಿಸಬೇಕು. ಇದು ನಿಮ್ಮ ಒಡೆಯನ ಕಡೆಯಿಂದ ನೀಡಲಾಗುತ್ತಿರುವ ರಿಯಾಯ್ತಿ ಮತ್ತು ಅನುಗ್ರಹವಾಗಿದೆ. ಇಷ್ಟಾದ ಬಳಿಕವೂ ಅತಿರೇಕವೆಸಗುವವನಿಗೆ ಯಾತನಾಮಯ ಶಿಕ್ಷೆಯಿದೆ.

ಅಧ್ಯಾಯ 2: ಅಲ್ ಬಕರಃ (ದನ) , ಸೂಕ್ತ 191 ಮತ್ತು ಅಂಥವರನ್ನು (ನಂಬಿಕೆಇಲ್ಲದವರನ್ನು) ನೀವು ಕಂಡಲ್ಲಿ ವಧಿಸಿರಿ ಮತ್ತು ಅವರು ಎಲ್ಲಿಂದ ನಿಮ್ಮನ್ನು ಹೊರದಬ್ಬಿರುವರೋ ಅಲ್ಲಿಂದ ನೀವು ಅವರನ್ನು ಹೊರದಬ್ಬಿರಿ. ಅಶಾಂತಿಯು ಕೊಲೆಗಿಂತ ಕೆಟ್ಟದಾಗಿದೆ. ಇನ್ನು, ಮಸ್ಜಿದುಲ್ ಹರಾಮ್‌ನ ಬಳಿ – ಅವರು ನಿಮ್ಮ

ವಿರುದ್ಧ ಯುದ್ಧ ಮಾಡುವ ತನಕ ನೀವು ಅವರ ವಿರುದ್ಧ ಯುದ್ಧ ಮಾಡಬೇಡಿ. ಅಲ್ಲಿ ಅವರು ನಿಮ್ಮ ವಿರುದ್ಧ ಯುದ್ಧ ಮಾಡಿದರೆ, ನೀವು ಅವರನ್ನು ವಧಿಸಿರಿ. ಇದುವೇ ನಂಬಿಕೆಯಿಲ್ಲದವರಿಗೆ ಪ್ರತಿಫಲ.

ಇಬ್ನ್ ಅಬ್ಬಾಸ್ ರವರ ತಫ್ಸೀರ್ ನಲ್ಲಿ ಬರೆದಿರುವಂತೆ 2:178 ಅರಬ್ಬಿನ ಎರಡು ಕುಲಗಳಿಗೆ ಹೇಳಿರುವುದಾಗಿದ್ದು ಇದನ್ನು ಖುರಾನ್ 5:45 ರಲ್ಲಿ ರದ್ದು ಗೊಳಿಸಲಾಗಿದೆಯಂತೆ.

5:45. ಅದರಲ್ಲಿ (ತೌರಾತ್‌ನಲ್ಲಿ) ನಾವು ಅವರಿಗೆ – ಜೀವಕ್ಕೆ ಜೀವ, ಕಣ್ಣಿಗೆ ಕಣ್ಣು, ಮೂಗಿಗೆ ಮೂಗು, ಕಿವಿಗೆ ಕಿವಿ ಮತ್ತು ಹಲ್ಲಿಗೆ ಹಲ್ಲು ಪರಿಹಾರವೆಂದು ಮತ್ತು ಗಾಯಗಳಿಗೂ ಪರಿಹಾರವಿದೆ ಎಂದು, ಹಾಗೆಯೇ ಪ್ರತೀಕಾರದ ಹಕ್ಕನ್ನು ಕ್ಷಮಿಸಿ ಬಿಟ್ಟವನಿಗೆ ಅದಕ್ಕಾಗಿ ಪರಿಹಾರ ಧನ ಉಂಟೆಂದು ವಿಧಿಸಿದ್ದೆವು. ಇನ್ನು ಅಲ್ಲಾಹನು ಇಳಿಸಿ ಕೊಟ್ಟಿರುವುದರ (ಅವನ ನಿಯಮದ) ಪ್ರಕಾರ ತೀರ್ಪು ನೀಡದವರು ಅಕ್ರಮಿಗಳಾಗಿರುತ್ತಾರೆ.

ಶಾಹಿ ಇಂಟರ್ ನ್ಯಾಷನಲ್ ರವರು 2:191 ರಲ್ಲಿನ ನಂಬಿಕೆ ಇಲ್ಲದವರನ್ನು "ಅಲ್ ಕಾಫಿರೀನ್" ಎಂದು ಉಚ್ಚರಿಸುತ್ತಾರೆ. ಖುರಾನ್ 109 ನೇ ಅಧ್ಯಾಯವೇ ಈ ಬಗ್ಗೆ ಇದೆ – ಇದನ್ನು ನಂಬಿಕೆ ಇಲ್ಲದವರು ಎನ್ನುತ್ತಲೇ ಅನುವಾದಿಸುತ್ತಾರೆ. ಕೆಲವರು ಸತ್ಯ ಧಿಕ್ಕರಿಸುವವರು ಅಂತಾರೆ, ಕೆಲವರು ಅತಿರೇಕ ಎಸಗುವವರು ಅಂತಾರೆ. ನಂಬಿಕೆ ಇಲ್ಲದವರು ಎನ್ನುವುದು ಅರೆಬ್ಬಿಕ್ ಪದ ಅನುವಾದದಂತೆ ಸರಿ ಇದೆ.
ಅಲ್ಲಾಹನ ಮಾರ್ಗದಿಂದ ತಡೆಯುವುದು, ಅಲ್ಲಾಹರನ್ನು ದಿಕ್ಕರಿಸುವುದು, ನಿವಾಸಿಗಳನ್ನು ಹೊರದಬ್ಬುವುದು ದೊಡ್ಡಪಾಪಗಳು ಮತ್ತು ಅಶಾಂತಿಯೂ ಆಗಿದ್ದು ಇದು ಕೊಲೆಗಿಂತ ಕೆಟ್ಟದ್ದು ಎನ್ನುತ್ತದೆ ಖುರಾನ್ – ಹಾಗಾದರೆ ಇಂತಹ ಪಾಪಗಳಿಗೆ ಕೊಲೆ ಮದ್ದು ಎಂದು ಬೋಧಿಸಿದಂತಲ್ಲವೆ.

ಅಧ್ಯಾಯ 2: ಅಲ್ ಬಕರಃ (ದನ) , ಸೂಕ್ತ 217 (ದೂತರೇ,) ಅವರು ನಿಮ್ಮೊಡನೆ, ಪವಿತ್ರ ತಿಂಗಳಲ್ಲಿ ಯುದ್ಧ ಮಾಡುವ ಕುರಿತು ವಿಚಾರಿಸುತ್ತಾರೆ. ಹೇಳಿರಿ; ಆ ತಿಂಗಳಲ್ಲಿ ಯುದ್ಧ ಮಾಡುವುದು ದೊಡ್ಡ ಅಪರಾಧವಾಗಿದೆ. ಆದರೆ ಅಲ್ಲಾಹನ ಮಾರ್ಗದಿಂದ (ಜನರನ್ನು) ತಡೆಯುವುದು, ಅವನನ್ನು (ಅಲ್ಲಾಹನನ್ನು) ಧಿಕ್ಕರಿಸುವುದು, ಮಸ್ಜಿದುಲ್ ಹರಾಮ್‌ನಿಂದ ಜನರನ್ನು ತಡೆಯುವುದು ಮತ್ತು ಅದರ ನಿವಾಸಿಗಳನ್ನು ಅಲ್ಲಿಂದ ಹೊರದಬ್ಬುವುದು – ಇವೆಲ್ಲಾ ಅಲ್ಲಾಹನ ದೃಷ್ಟಿಯಲ್ಲಿ ಇನ್ನೂ ದೊಡ್ಡ ಪಾಪಗಳಾಗಿವೆ. ಅಶಾಂತಿಯಂತು ಕೊಲೆಗಿಂತಲೂ ಕೆಟ್ಟದು. ಅವರು

(ಧಿಕ್ಕಾರಿಗಳು) ತಮಗೆ ಸಾಧ್ಯವಾದರೆ, ನಿಮ್ಮನ್ನು ನಿಮ್ಮ ಧರ್ಮದಿಂದ ವಿಮುಖರಾಗಿಸಿ ಬಿಡುವ ತನಕವೂ ನಿಮ್ಮ ವಿರುದ್ಧ ಯುದ್ಧ ಹೂಡುತ್ತಲೇ ಇರುವರು. ಇನ್ನು ನಿಮ್ಮ ಪೈಕಿ, ಧರ್ಮದಿಂದ ವಿಮುಖನಾದವನ ಮತ್ತು (ಅದೇ ಸ್ಥಿತಿಯಲ್ಲಿ) ಮೃತನಾದವನ ಕರ್ಮಗಳೆಲ್ಲಾ ಈ ಲೋಕದಲ್ಲೂ ಪರಲೋಕದಲ್ಲೂ ವ್ಯರ್ಥವಾಗಿ ಬಿಟ್ಟವು. ಅಂಥವರು ನರಕದವರು ಮತ್ತು ಅವರು ಅಲ್ಲೇ ಸದಾಕಾಲ ಇರುವರು.

ಬಹುದೇವಾರಾಧಕರಿಗೆ ವಿನಾಶ ಕಾದಿದೆ ಎನ್ನುತ್ತದೆ ಖುರಾನ್ – ಅಲ್ಲಾಹರೇ ವಿನಾಶವನ್ನು ಬಹುದೇವಾರಾದಕರಿಗೆ ತೋರಿಸಿರುವಾಗ್ಗೆ ನಾವು ಬಹುದೇವಾರಾದಕರ ವಿನಾಶ ಮಾಡಿ ಯಾಕೆ ಅಲ್ಲಾಹರ ಪ್ರೀತಿಗೆ ಪಾತ್ರರಾಗಬಾರದು ಎಂಬ ಬೋದನೆ ಒಳ ಅಡಗಿದೆ ಅಲ್ಲವೆ.

ಅಧ್ಯಾಯ 41: ಫುಸ್ಸಿಲತ್ (ಸವಿಸ್ತಾರ), ಸೂಕ್ತ 6 ಹೇಳಿರಿ; ನಾನು ಕೇವಲ ನಿಮ್ಮಂತಹ ಮಾನವ. ಏಕ ಮಾತ್ರ ದೇವರೇ ನಿಮ್ಮ ದೇವರೆಂದು ನನಗೆ ದಿವ್ಯವಾಣಿಯನ್ನು ಕಳಿಸಲಾಗಿದೆ. ನೀವು ಸ್ಥಿರವಾಗಿ ಅವನಿಗೆ ನಿಷ್ಠರಾಗಿರಿ ಮತ್ತು ಅವನಲ್ಲಿ ಕ್ಷಮೆಯಾಚಿಸಿರಿ. ಬಹುದೇವಾರಾಧಕರಿಗೆ ವಿನಾಶ ಕಾದಿದೆ.

ಅಧ್ಯಾಯ 33: ಅಲ್ ಅಹ್‌ಝಾಬ್ (ಪಡೆಗಳು), ಸೂಕ್ತ 73 ಅಲ್ಲಾಹನು ಕಪಟ ಪುರುಷರು ಹಾಗೂ ಸ್ತ್ರೀಯರನ್ನು ಮತ್ತು ಬಹುದೇವಾರಾಧಕ ಪುರುಷರು ಹಾಗೂ ಸ್ತ್ರೀಯರನ್ನು ಶಿಕ್ಷಿಸುವನು ಮತ್ತು ವಿಶ್ವಾಸಿ ಪುರುಷರು ಹಾಗೂ ವಿಶ್ವಾಸಿ ಸ್ತ್ರೀಯರ ಪಶ್ಚಾತ್ತಾಪವನ್ನು ಸ್ವೀಕರಿಸುವನು. ಅಲ್ಲಾಹನಂತು ಅತ್ಯಂತ ಕ್ಷಮಾಶೀಲನೂ ಕರುಣಾಮಯಿಯೂ ಆಗಿದ್ದಾನೆ. (ಮುಸ್ಲಿಮೇತರರಿಗೆ ಶಿಕ್ಷೆ ಮುಸ್ಲಿಮರು ತಪ್ಪು ಮಾಡಿ ಪಶ್ಚಾತಾಪ ಪಟ್ಟರೆ ಕ್ಷಮೆ – ಅರ್ಥಾತ್ ತಪ್ಪೇ ಮಾಡದೆ ನಮ್ಮ ನಂಬಿಕೆಯಲ್ಲಿ ತಲ್ಲೀನನಾದರೆ ನಮಗೆ ಶಿಕ್ಷೆ)

ಅಧ್ಯಾಯ 48: ಅಲ್ ಫತಹ್ (ವಿಜಯ), ಸೂಕ್ತ 6 ಮತ್ತು ಅಲ್ಲಾಹನು ತನ್ನ ಕುರಿತು ಅಪನಂಬಿಕೆ ಇಟ್ಟುಕೊಂಡಿದ್ದ ಕಪಟ ಪುರುಷರು ಹಾಗೂ ಕಪಟ ಸ್ತ್ರೀಯರನ್ನು ಮತ್ತು ಬಹುದೇವಾರಾಧಕ ಪುರುಷರನ್ನು ಹಾಗೂ ಬಹುದೇವಾರಾಧಕ ಸ್ತ್ರೀಯರನ್ನು ಶಿಕ್ಷಿಸಲಿದ್ದಾನೆ. ದೌರ್ಭಾಗ್ಯವು ಅವರನ್ನು ಸುತ್ತುವರಿದುಕೊಂಡಿದೆ. ಅವರ ವಿರುದ್ಧ ಅಲ್ಲಾಹನು ಕೋಪಗೊಂಡಿರುವನು ಹಾಗೂ ಅವರನ್ನು ಶಪಿಸಿರುವನು ಮತ್ತು ಅವರಿಗಾಗಿ ನರಕವನ್ನು ಸಿದ್ಧಗೊಳಿಸಿರುವನು. ಅದು ಬಹಳ ಕೆಟ್ಟ ನೆಲೆಯಾಗಿದೆ.

ಮತ ಬೋದನೆ ಕೇಂದ್ರಗಳಲ್ಲಿ ಏನು ಹೇಳಿಕೊಡಲಾಗುತ್ತಿದೆ ?

ಖುರಾನ್ ಇಚ್ಚೆಯಂತೆ ಮುಸ್ಲಿಮೇತರರ ಮೇಲೆ ಹೋರಾಡಲು ಜ್ಞಾನ ಸಂಪಾದನೆಗೆಂದೇ ಜಮಾತಿಗೆ ಮತ್ತು ಮದರಸಾ ಮತ್ತು ಮಸೀದಿಗಳಿಗೆ ಪ್ರವಚನಕಾರರು ಬಂದು ಸಾರುತ್ತಿರುವುದು ಏನು ? ಇಲ್ಲಿ ಅವರ ಜೀವನ ಪದ್ಧತಿ ಸುದಾರಣೆಗೆ ಬೋದನೆ ನಡೆಯುತ್ತಿದ್ದರೆ ಒಪ್ಪೋಣ ಆದರೆ ಅವರ ಬೋದನೆಯ ಅಂತರ್ಸತ್ವ ಖುರಾನ್ ಸಾಲುಗಳಲ್ಲೆ ಇದೆ ಒಮ್ಮೆ ಓದಿ.

ಅಲ್ಲಾಹರ ಮೇಲೆ ಮತ್ತು ಪ್ರವಾದಿ ಮೊಹಮದ್ ರ ಮೇಲೆ ಮತ್ತು ಖುರಾನ್ ಗ್ರಂಥದ ಮೇಲೆ ವಿಶ್ವಾಸ ಇಲ್ಲದವರ ಮೇಲೆ ಅಸಹಿಷ್ಣತೆಯನ್ನು ಮತ್ತು ಕಠೋರ ನಿಲುವನ್ನು ತಾಳುತ್ತದೆ ಖುರಾನ್. ಅವರ ಮೇಲೆ ಹೋರಾಡಿರಿ ಎನ್ನುತ್ತದೆ. ಹೋರಾಟಕ್ಕೆ ಎಲ್ಲರೂ ಹೋಗಬೇಡಿ, ಹೋರಾಟಕ್ಕೆ ಮುಂಚೆ ಧರ್ಮ ಜ್ಞಾನವನ್ನು ಕೆಲವರು ಪಡೆಯಿರಿ, ಅಲ್ಲಿಂದ ಬಂದು ತಮ್ಮ ಜನಾಂಗವನ್ನು ಜಾಗೃತ ಗೊಳಿಸಿರಿ ಎನ್ನುತ್ತದೆ ಖುರಾನ್.

ಖುರಾನ್ ಅಧ್ಯಾಯ 9: ಅತ್ತೌಬಃ (ಪಶ್ಚಾತ್ತಾಪ), ಸೂಕ್ತ 123 – ವಿಶ್ವಾಸಿಗಳೇ, ಧಿಕ್ಕಾರಿಗಳ ಪೈಕಿ ನಿಮ್ಮ ಪಕ್ಕದಲ್ಲಿರುವವರ ವಿರುದ್ಧ (ಮೊದಲು) ಹೋರಾಡಿರಿ ? ಅವರು ನಿಮ್ಮಲ್ಲಿ ಕಾಠಿಣ್ಯವನ್ನು ಕಾಣಲಿ. ನಿಮಗೆ ತಿಳಿದಿರಲಿ, ಖಂಡಿತವಾಗಿಯೂ ಅಲ್ಲಾಹನು ಸತ್ಯನಿಷ್ಠರ ಜೊತೆಗಿದ್ದಾನೆ.

ಖುರಾನ್ ಅಧ್ಯಾಯ 9: ಅತ್ತೌಬಃ (ಪಶ್ಚಾತ್ತಾಪ), ಸೂಕ್ತ 122 – ವಿಶ್ವಾಸಿಗಳೆಲ್ಲರೂ ಒಟ್ಟಾಗಿ (ಹೋರಾಟಕ್ಕೆ) ಹೊರಟು ಬಿಡುವುದು ಸರಿಯಲ್ಲ. (ಇದರ ಬದಲು) ಅವರ ಪ್ರತಿಯೊಂದು ವಿಭಾಗದಲ್ಲಿನ ಒಂದು ಪಂಗಡವು, ಧರ್ಮ ಜ್ಞಾನಗಳಿಸಲಿಕ್ಕಾಗಿ ಹೊರಟು, ಮರಳಿ ಬಂದು ತಮ್ಮ ಜನಾಂಗದವರನ್ನು ಎಚ್ಚರಿಸಬಹುದಾಗಿತ್ತು. ಈ ರೀತಿ ಅವರು ಜಾಗೃತರಾಗಬಹುದು.

ಈ ವಿಷಯ ಅರ್ಥೈಸಲು ಈ ಕೆಳಗಿನ ಪದ್ಯಗಳ ಗಮನ ಸೆಳೆಯುತ್ತಾರೆ ಕಶಾನಿ ರವರ ತಫ್ಸೀರ್ ನಲ್ಲಿ

59:13. (ವಿಶ್ವಾಸಿಗಳೇ,) ಇದೀಗ ಅವರ ಮನಗಳಲ್ಲಿ ಅಲ್ಲಾಹನಿಗಿಂತ ಹೆಚ್ಚಾಗಿ ನಿಮ್ಮ ಭಯವು ನೆಲೆಸಿದೆ. ಇದೇಕೆಂದರೆ ಅವರು ವಿವೇಚನೆ ಇಲ್ಲದವರಾಗಿದ್ದಾರೆ.

35:28. ಜನರಲ್ಲಿ, ವಿವಿಧ ಜಂತುಗಳಲ್ಲಿ ಮತ್ತು ಜಾನುವಾರುಗಳಲ್ಲಿ ಅನೇಕರ ಬಣ್ಣಗಳು ಭಿನ್ನವಾಗಿರುತ್ತವೆ. ದಾಸರ ಪೈಕಿ ಜ್ಞಾನವುಳ್ಳವರು ಮಾತ್ರ ಅಲ್ಲಾಹನಿಗೆ ಅಂಜುತ್ತಾರೆ. ಅಲ್ಲಾಹನು ಖಂಡಿತ, ಪ್ರಚಂಡನೂ ಕ್ಷಮಿಸುವವನೂ ಆಗಿದ್ದಾನೆ.

39:9. (ಅವನು ಶ್ರೇಷ್ಠನೋ, ಅಥವಾ) ರಾತ್ರಿಯ ವೇಳೆ ಸಾಷ್ಟಾಂಗವೆರಗಿಕೊಂಡೂ, ನಿಂತುಕೊಂಡೂ ಆರಾಧಿಸುತ್ತಾ, ಪರಲೋಕದ ಕುರಿತು ಸದಾ ಜಾಗೃತನಾಗಿದ್ದು, ತನ್ನ

ಒಡೆಯನ ಅನುಗ್ರಹವನ್ನು ನಿರೀಕ್ಷಿಸುತ್ತಿರುವವನು ಶ್ರೇಷ್ಠನೋ? ಹೇಳಿರಿ; ಅರಿತಿಲ್ಲದವರು ಮತ್ತು ಅರಿತಿರುವವರು ಸಮಾನರಾಗಬಲ್ಲರೇ? ಬುದ್ಧಿಯುಳ್ಳವರು ಮಾತ್ರ ಉಪದೇಶವನ್ನು ಸ್ವೀಕರಿಸುತ್ತಾರೆ.

ಹೇಡಿಗಳು ಬುದ್ಧಿ ಇಲ್ಲದವರು

ಈ ಕೆಳಗಿನ ಪದ್ಯ ಯಹೂದಿಗಳನ್ನು ಕುರಿತು ಹೇಳುವುದಾದರೂ ಇವರನ್ನು ಪುಸ್ತಕದವರು ಎಂದು ಮಾತ್ರ ಗುರುತಿಸಲಾಗಿದೆ. ನಂಬಿಕೆ ಇಲ್ಲದವರು ಎಂತಲೂ ಹೇಳಲಾಗಿದೆ. ಇದರಲ್ಲಿ ಮುಸ್ಲಿಮೇತರರನ್ನು ಹೇಡಿಗಳು ಮತ್ತು ಬುದ್ಧಿಯಿಲ್ಲದವರು ಎಂದು ಚಿತ್ರಿಸಲಾಗಿದೆ. ಅಂದಿಗೇ ಗ್ರಂಥಗಳಲ್ಲಿ ವಿಶ್ವಾಸವಿಟ್ಟ ಸಾಕಷ್ಟು ಧರ್ಮಗಳಿದ್ದವು. ಅದು ಅವರೊಬ್ಬರಿಗೇ ಹೇಳಿದ್ದಾಗಿದೆ ಎಂದು ಇಂದಿನ ಕಾಲ ಘಟ್ಟದಲ್ಲಿ ಅನುವಾದಿಸಲು ಬರುವುದಿಲ್ಲ.

59:14. ಅವರೆಲ್ಲರೂ ಒಂದಾದರೂ ನಿಮ್ಮ ವಿರುದ್ಧ ನೇರ ಯುದ್ಧಕ್ಕೆ ಇಳಿಯಲಾರರು. ಹೆಚ್ಚೆಂದರೆ ಅವರು ಭದ್ರ ಕೋಟೆಗಳಲ್ಲಿ ಅವಿತು ಕೊಂಡು ಅಥವಾ ಗೋಡೆಗಳ ಮರೆಯಿಂದ ಮಾತ್ರ ಹೋರಾಡ ಬಲ್ಲರು. ಅವರ ಪರಸ್ಪರ ವೈಷಮ್ಯವು ತೀವ್ರವಾಗಿದೆ. ಅವರು ಒಗ್ಗಟ್ಟಾಗಿರುವರೆಂದು ನೀವು ಭಾವಿಸುತ್ತೀರಿ. ಆದರೆ ಅವರ ಮನಸ್ಸುಗಳು ಛಿದ್ರವಾಗಿವೆ. ಇದೇಕೆಂದರೆ, ಅವರು ಬುದ್ಧಿ ಉಳ್ಳವರಲ್ಲ.

ಮಸೀದಿಯಲ್ಲಿ ಪ್ರಾರ್ಥನೆಗೂ ಶಬ್ದಕ್ಕೂ ಪ್ರಾರ್ಥನೆ ನಿಲ್ಲಿಸುವುದಕ್ಕೂ ಸಂಬಂದವಿದೆಯೇ ? ಯಾವಶಬ್ದ ? ಮುಸ್ಲಿಮ್ ಗ್ರಂಥಗಳು ಹೇಳಿದ್ದೇನೆ ? ಇಂದಿನ ಮುಸ್ಲಿಮರು ಮಾಡುತ್ತಿರುವುದೇನು.

ಜಾಮಿ ಅತ್-ತಿರ್ಮಿದಿ ? ಸಂಪುಟ-1, ಪುಸ್ತಕ-1, ಹದಿತ್ 75 ರಲ್ಲಿ ಈ ರೀತಿ ಹೇಳಿದೆ:- "ನಿಮ್ಮಲ್ಲಿ ಒಬ್ಬರು ಮಸೀದಿ ಯಲ್ಲಿರುವಾಗ, ಮತ್ತು ಅವನ ಕುಂಡಿಯ ನಡುವೆ ಗಾಳಿ ಹೊರಬಂದಾಗ, ಅವನು ಶಬ್ದವನ್ನು ಕೇಳುವವರೆಗೆ ಅಥವಾ ವಾಸನೆಯು ಬರುವವರೆಗೆ ಅವನು ನಿರ್ಗಮಿಸಬಾರದು."

ಶಾಹಿ ಬುಕಾರಿ ? ಸಂಪುಟ-1, ಪುಸ್ತಕ-4, ಹದಿತ್-139 ರಲ್ಲಿ ಈ ರೀತಿ ಹೇಳಿದೆ:- ಅಬ್ಬಾದ್ ಬಿನ್ ತಾಮಿಮ್ ವಿವರಣೆಯಂತೆ: ನನ್ನ ಚಿಕ್ಕಪ್ಪ ಅಲ್ಲಾಹನ ಸಂದೇಶವಾಹಕರನ್ನು ಕೇಳಿದರು "ಒಬ್ಬ ವ್ಯಕ್ತಿಯು ತನ್ನ ಪ್ರಾರ್ಥನಾ ಸಮಯದಲ್ಲಿ ಗಾಳಿ ಬಿಟ್ಟ ಬಗ್ಗೆ ಊಹಿಸದ ಬಗ್ಗೆ ಅಲ್ಲಾ ಧರ್ಮ ಪ್ರಚಾರಕರು ಹೇಳಿದರು "ಆತನು ಶಬ್ದವನ್ನು ಕೇಳುವ ತನಕ ವಾಸನೆ ಬರುವ ತನಕ ಪ್ರಾರ್ಥನೆಯನ್ನು ಬಿಟ್ಟು ಹೋಗಬಾರದು"

ಬುಲ್ಗ್ ಅಲ್ ಮಾರಾಮ್ ? ಪುಸ್ತಕ-1, ಹದೀತ್ 77 ರಲ್ಲಿ ಹೀಗೆಂದು ಹೇಳಿದೆ:- ಅಬು ಹುರೈರಾ (ರಾಡ್) ನಿರೂಪಿಸಿದಂತೆ: ಅಲ್ಲಾಸ್ ಸಂದೇಶವಾಹಕ ಹೀಗೆ ಹೇಳಿದರು : "ನಿಮ್ಮಲ್ಲಿ ಒಬ್ಬನು ತನ್ನ ಹೊಟ್ಟೆಯಲ್ಲಿ ಅಡಚಣೆ ಉಂಟಾಗಿದ್ದರೆ ಮತ್ತು ಅವನು ಸ್ವಲ್ಪ ಗಾಳಿಯನ್ನು ಬಿಡುಗಡೆ ಮಾಡಿದ್ದಾನೆ ಅಥವಾ ಇಲ್ಲವೇ ಎಂಬ ಬಗ್ಗೆ ಅನುಮಾನ ವ್ಯಕ್ತಪಡಿಸಿದರೆ, ಅವನು ತನ್ನ ಶಬ್ದವನ್ನು ಕೇಳುವವರೆಗೆ ಅಥವಾ ವಾಸನೆ ಬರುವವರೆಗೆ ಅವನು ಮಸೀದಿಯನ್ನು ಬಿಡಬಾರದು". [ಮುಸ್ಲಿಂ ವರದಿ ಮಾಡಿದೆ].

ಆದರೆ ಖುರಾನಿನ ಅಧ್ಯಾಯ 31 ರಲ್ಲಿನ ಅಯಾತ್ ಗಳನ್ನು ಉಪಯೋಗಿಸಿಕೊಂಡು ಮಂಗಳ ವಾದ್ಯದಂತಾ ಶಬ್ದವನ್ನು ಮಸೀದಿ ಮುಂದೆ ನುಡಿಸುವವರಿಗೆ ಹಿಂಸಾತ್ಮಕ ಶಿಕ್ಷೆಯನ್ನು ಕೊಡಿ ಎಂದು ಇಸ್ಲಾಮಿನ ಖುರಾನ್ ನಲ್ಲಿ ಬೋದನೆ ಇದೆ ಎನ್ನುತ್ತಾರೆ ಅದರ ವ್ಯಾಖ್ಯಾನಕಾರರು.

ಖುರಾನ್ ಅಧ್ಯಾಯ 31 ಅಯಾತ್ 4 ರಿಂದ 7 ಹೀಗೆನ್ನುತ್ತದೆ:-

4. ಅವರು ನಮಾಝುನ್ನು ಪಾಲಿಸುವವರು, ಝುಕಾತನ್ನು ಪಾವತಿಸುವವರು ಮತ್ತು ಪರಲೋಕದ ಕುರಿತು ಖಚಿತ ನಂಬಿಕೆ ಉಳ್ಳವರಾಗಿರುತ್ತಾರೆ. (ಮುಸ್ಲಿಮರು)

5. ಅವರೇ ತಮ್ಮ ಒಡೆಯನು ತೋರಿದ ಸರಿದಾರಿಯಲ್ಲಿರುವವರು ಮತ್ತು ಅವರೇ ವಿಜಯಿಗಳು. (ಮುಸ್ಲಿಮರು)

6. ಜನರಲ್ಲಿ ಕೆಲವರು ಜ್ಞಾನವಿಲ್ಲದೆ, ಇತರರನ್ನು ಅಲ್ಲಾಹನ ಮಾರ್ಗದಿಂದ ದೂರಗೊಳಿಸಲಿಕ್ಕಾಗಿ ವ್ಯರ್ಥ ವಸ್ತುಗಳನ್ನು ಖರೀದಿಸುತ್ತಾರೆ. ಅವರು ಅದನ್ನು ಕೇವಲ ತಮಾಷೆ ಎಂದು ಭಾವಿಸುತ್ತಾರೆ. ಅವರಿಗೆ ಅಪಮಾನಕಾರಿ ಶಿಕ್ಷೆ ಕಾದಿದೆ.

7. ಅಂತಹವನಿಗೆ ನೀವು ನಮ್ಮ ವಚನಗಳನ್ನು ಓದಿ ಕೇಳಿಸಿದಾಗ ಅವನು, ತಾನು ಏನನ್ನೂ ಕೇಳಲೇ ಇಲ್ಲವೆಂಬಂತೆ ಅಥವಾ ತನ್ನ ಕಿವಿಗಳು ಕಿವುಡಾಗಿವೆ ಎಂಬಂತೆ ಅಹಂಕಾರದೊಂದಿಗೆ ಮುಖ ತಿರುಗಿಸಿಕೊಳ್ಳುತ್ತಾನೆ. ಅವನಿಗೆ ಬಹಳ ಹಿಂಸಾತ್ಮಕ ಶಿಕ್ಷೆಯ ಸುವಾರ್ತೆ ಕೊಟ್ಟು ಬಿಡಿರಿ.

ಖತೀರ್ -ಇಬ್ನ್ ಅಲ್ ಖತೀರ್ ರವರು ತಫ್ಸೀರ್ (ಖುರಾನ್ ಅನುವಾದದ ಕಾಮೆಂಟರಿ) ಬರೆಯುತ್ತಾರೆ "ಬದಲಾಗಿ, ಅವರು ಸಂಗೀತ ವಾದ್ಯಗಳ ಜೊತೆಯಲ್ಲಿ ಕೊಳಲುಗಳು ಮತ್ತು ಹಾಡುವುದನ್ನು ಕೇಳುತ್ತಾರೆ"

ಅಂದರೆ ಖುರಾನ್ ಪ್ರವಚನವನ್ನು ಕೇಳದೆ ಯಾರು ಸಂಗೀತ ವ್ಯಾದ್ಯ ಕೊಳಲುಗಳು ಮತ್ತು ಹಾಡುವುದನ್ನು ಕೇಳುತ್ತಾರೋ ಅವರಿಗೆ ಹಿಂಸಾತ್ಮಕವಾದ ಶಿಕ್ಷೆ ಕೊಡಿ ಎಂಬ ಬೋದನೆ ಇದೆ. ಈ ಕಾರಣಕ್ಕಾಗಿಯೇ ಮಸೀದಿ ಮುಂದೆ ಯಾವುದೇ

ಸಂಗೀತ ವಾದ್ಯ ಹೋದಾಗಲು ಕೋಮು ಗಲಭೆಗೆ ಮುಖ್ಯ ಕಾರಣ. ಈ ರೀತಿ ವ್ಯಾಖ್ಯಾನವನ್ನು ನೀಡಿ ಕೋಮು ಸೌಹಾರ್ದತೆಗೆ ಬಂಗ ತರುವಂತಾ ಬೋದನೆಗಳು ನಮ್ಮ ಇಂದಿನ ಜಾತ್ಯಾತೀತ ಸಂವಿಧಾನಕ್ಕೆ ಪುರಕವಾಗಿದೆಯೇ ?

ಮುಸ್ಲಿಮರಾಗಿ ಪರಿವರ್ತನೆ ಆಗದೆ ಹೊರತು ಬಹುದೇವಾರಾದಕರನ್ನು ಮದುವೆ ಆಗಬೇಡಿ ಎನ್ನುತ್ತದೆ ಖುರಾನ್ – ಇಲ್ಲಿ ಬಹುದೇವಾರಾದಕ ಸ್ತ್ರೀಯನ್ನು ಮುಸ್ಲಿಮ್ ದಾಸಿಗಿಂತ ಕೀಳು ಎಂಬಂತೆ ಕಾಣಲಾಗಿದೆ.

ಅಧ್ಯಾಯ 2: ಅಲ್ ಬಕರಃ (ದನ) , ಸೂಕ್ತ 221. (ವಿಶ್ವಾಸಿಗಳೇ,) ಬಹುದೇವಾರಾಧಕಿಯರು ವಿಶ್ವಾಸಿನಿಯರಾಗುವ ತನಕ ಅವರನ್ನು ನೀವು ವಿವಾಹವಾಗಬೇಡಿ. ನಿಜವಾಗಿ ವಿಶ್ವಾಸಿ ದಾಸಿಯು, (ಸ್ವತಂತ್ರ) ಬಹು ದೇವರಾಧಕಿಗಿಂತ ಉತ್ತಮಳು ? ಆಕೆ ನಿಮಗೆಷ್ಟು ಇಷ್ಟವಿದ್ದರೂ ಸರಿಯೇ. ಹಾಗೆಯೇ, ಬಹುದೇವಾರಾಧಕ ಪುರುಷರು ವಿಶ್ವಾಸಿಗಳಾಗುವ ತನಕ ಅವರನ್ನು ವಿವಾಹವಾಗಬಾರದು. ವಿಶ್ವಾಸಿ ದಾಸನು, (ಸ್ವತಂತ್ರ) ಬಹು ದೇವಾರಾಧಕನಿಗಿಂತ ಉತ್ತಮನು ? ಅವನು ನಿಮಗೆಷ್ಟು ಇಷ್ಟವಿದ್ದರೂ ಸರಿಯೇ. ಅವರು (ಬಹುದೇವಾರಾಧಕರು) ನರಕದೆಡೆಗೆ ಕರೆಯುತ್ತಾರೆ. ಆದರೆ ಅಲ್ಲಾಹನು ತನ್ನಿಚ್ಛೆಯಿಂದ ಸ್ವರ್ಗದೆಡೆಗೆ ಮತ್ತು ಕ್ಷಮೆಯೆಡೆಗೆ ಕರೆಯುತ್ತಾನೆ ಮತ್ತು ಅವನು ಜನರಿಗಾಗಿ ತನ್ನ ಆದೇಶಗಳನ್ನು ಸ್ಪಷ್ಟಪಡಿಸುತ್ತಾನೆ ? ಅವರು ಉಪದೇಶ ಸ್ವೀಕರಿಸಲೆಂದು.

ಇಂದಿನ ಲವ್ ಜಿಹಾದ್ ಪ್ರಕರಣಗಳಲ್ಲಿ ಮದುವೆ ಆಗುತ್ತಿರುವ ಜೋಡಿಗಳಲ್ಲಿ ಮುಸ್ಲಿಮ್ ಮತಕ್ಕೆ ಪರಿವರ್ತನೆ ಆಗುತ್ತಿರುವುದೇ ಹೆಚ್ಚಾಗಿ ಕಾಣುವುದು ಈ ಸಾಲಿನ ಬೋದನೆಗಳ ಪ್ರಬಾವವೇ ಆಗಿದೆ. ಪರಿವರ್ತನೆ ಆಗದೆ ಹೋದರೆ ಬದುಕುವುದೂ ದುಸ್ತರ ಎಂಬಂತೆ ವಾತಾವರಣ ನಿರ್ಮಾಣ ವಾಗುತ್ತಿರುವುದು ಕಾಣುತ್ತೇವೆ. ಮದುವೆಯಾದ ಮುಸ್ಲಿಮೇತರ ಹೆಣ್ಣುಮಕ್ಕಳನ್ನು ಕೀಳಾಗಿ ಕಾಣುವುದಕ್ಕೆ ಖುರಾನ್ ಬೋದನೆಯಲ್ಲಿ ಅಡಗಿದೆ. ಮುಸ್ಲಿಮರು ಎಸ್ಟು ದಾಸಿ ಜನರನ್ನು ಬೇಕಾದರೂ ಮದುವೆ ಆಗಬಹುದು ಅಂತ ಅವರ ಖುರಾನ್ ಹೇಳುತ್ತದೆ. ಅಂದರೆ ಮುಸ್ಲಿಮ್ ಮದುವೆಯಾದ ಮುಸ್ಲಿಮೇತರ ಹೆಣ್ಣುಮಗಳು ಆತ ಆಕೆಯನ್ನು ಬಿಟ್ಟು ಬೇರೆಯವರನ್ನು ಮದುವೆಯಾದಾಗ ಆ ಮುಸ್ಲಿಮ್ ವ್ಯಕ್ತಿ ಈ ಖುರಾನ್ ಸಾಲು ತೋರಿಸಿ ನಮಗೆ ಖುರಾನ್ ಹೇಳಿದೆ ದಾಸಿಯರಿಗಿಂತ ಮುಸ್ಲಿಮೇತರ ಮಹಿಳೆ ಕೀಳು

ಅಂತ ಆದುದರಿಂದ ಅವರಿಗೆ ಕೇಳಲು ಹಕ್ಕಿಲ್ಲ ಎಂದು ವಾದಿಸಿದರೆ, ಅವರಿಗೇ ದೇವರೇ ಗತಿ. ಇಲ್ಲಿನ ವಾಸ್ತವಿಕತೆ ಮಹಿಳೆಯರು ಅರಿಯುವುದು ಲೇಸು.

**ವಾಸ್ತವ ಅನುಮತಿಸಿದ ನಾಲ್ಕು ಮದುವೆ – ಇಂದಿನ ಬದಲಾಯಿತ ಅನುಕರಣೆ –**

ಮುಸ್ಲಿಮ್ ಖುರಾನ್ ಅಧ್ಯಾಯ 4 ಅಯಾತ್ 3 ರಲ್ಲಿ ಹೀಗೆಂದಿದೆ

3. ಅನಾಥರ (ಅನಾಥ ಹೆಣ್ಣು ಮಕ್ಕಳ) ವಿಷಯದಲ್ಲಿ ನ್ಯಾಯ ಪಾಲಿಸಲು ನಿಮಗೆ ಸಾಧ್ಯವಾಗದು ಎಂಬ ಭಯ ನಿಮಗಿದ್ದರೆ (ಇತರ) ಮಹಿಳೆಯರ ಪೈಕಿ ನಿಮಗಿಷ್ಟವಿರುವ ಇಬ್ಬರು, ಮೂವರು ಅಥವಾ ನಾಲ್ವರನ್ನು ವಿವಾಹವಾಗಿರಿ. ಇನ್ನು (ಪತ್ನಿಯರ ವಿಷಯದಲ್ಲಿ) ನ್ಯಾಯ ಪಾಲಿಸಲು ಸಾಧ್ಯವಾಗದು ಎಂಬ ಭಯ ನಿಮಗಿದ್ದರೆ ಒಬ್ಬಳೇ ಪತ್ನಿಯಲ್ಲಿ ಅಥವಾ ನಿಮ್ಮ ಮಾಲಕತ್ವದಲ್ಲಿರುವ ದಾಸಿಯಲ್ಲಿ (ತೃಪ್ತಿ ಪಡಿರಿ). (ನಿಮ್ಮಿಂದ) ಯಾವುದೇ ಅತಿರೇಕ ಸಂಭವಿಸದೆ ಇರುವುದಕ್ಕೆ ಇದು ಹೆಚ್ಚು ಸಹಾಯಕವಾಗಿದೆ.

ಅಂದರೆ ಮುಸ್ಲಿಮರಿಗೆ ನಾಲ್ಕು ಮದುವೆ ಮಾಡಿಕೊಳ್ಳಲು ಅವಕಾಶ ನೀಡುತ್ತೆ. ದಾಸಿಯರ ಜೊತೆ ಮದುವೆಗೆ ಅವಕಾಶ ಕೊಡದಿದ್ದರೂ ಅವರೊಂದಿಗೆ ತೃಪ್ತಿ ಪಡಿ ಎನ್ನುತ್ತೆ.  ಮೇಲ್ಕಂಡ ಖುರಾನ್ 2:221 ರಲ್ಲಿ ದಾಸಿಯರಿಗಿಂತ ಮುಸ್ಲಿಮೇತರ ಹೆಣ್ಣು ಕೀಳು ಅನ್ನುತ್ತೆ. ಅಲ್ಲಿಗೆ ಮುಸ್ಲಿಮೇತರ ಹೆಣ್ಣುಮಕ್ಕಳು ಮುಸ್ಲಿಮರನ್ನು ಮದುವೆ ಆದರೆ ಮುಗಿಯಿತು ಕತೆ. ದಾಸಿಗಿಂತ ಕೀಳಾದವಳನ್ನ ವೈಶ್ಯಾವಾಟಿಕೆಗೆ ಮಾರುತ್ತಿರುವ ಸುದ್ದಿಗಳು ಈ ಬೋದನಾ ಕಾರಣದಿಂದಲೇ ಇರಬೇಕು. ಪತ್ನಿಯರ ವಿಷಯದಲ್ಲಿ ನ್ಯಾಯ ಪಾಲಿಸಲಾಗದು ಎಂದಿದ್ದರೆ ಏಕಪತ್ನಿತ್ವ, ಇಲ್ಲವಾದರೆ ಬಹುಪತ್ನಿತ್ವ ಅನುಮತಿ. ದಾಸಿಯರ ಲೆಕ್ಕವಿಲ್ಲ.

ಮೌದುದಿ ರವರ ತಫೀಮ್ ಅಲ್ ಖುರಾನ್ ನಂತೆ "ಈ ಪದ್ದತಿ ಅಂದಿನ ಅಂದಕಾರವನ್ನು ಸರಿಪಡಿಸಲು ಬರೆಯಲಾಗಿತ್ತು" .... "ಇಸ್ಲಾಮಿಕ್ ಪೂರ್ವದಲ್ಲಿ ಜನರು 12 ಜನರವರೆಗೆ ಮದುವೆಯಾಗುತ್ತಿದ್ದರಂತೆ.... ಆಗ ವೆಚ್ಚಗಳನ್ನು ಭರಿಸಲಾಗದೆ ತಮ್ಮ ಅನಾಥ ಸಹೋದರರ ಮತ್ತು ಇತರೆ ಅಸಹಾಯಕ ಸಂಬಂದಿಗಳ ಆಸ್ತಿಗಳನ್ನು ದೋಚುತ್ತಿದ್ದರು, .... ಖುರಾನ್ ಬಹುಪತ್ನಿತ್ವದ ವಿರುದ್ದವಿದೆ ... ಆದರೆ ಅಂದು ಇದ್ದ ಪದ್ದತಿಯನ್ನು ನೇರವಾಗಿ ನಿಲ್ಲಿಸಲಾಗದೆ ಈ ರೀತಿ ಮೊಟಕು ಗೊಳಿಸಲಾಗಿತ್ತು ..... ಕೆಲವು ಜನರು ಜನಿಸಿದ್ದಾರೆ, ಅವರು ಬಯಸಿದರೂ, ಒಬ್ಬ ಹೆಂಡತಿಯೊಂದಿಗೆ ತೃಪ್ತಿಯಾಗಿ ಉಳಿಯಲು ಸಾಧ್ಯವಿಲ್ಲ. ಬಹುಪತ್ನಿತ್ವವು ಅವರ ರಕ್ಷಣೆಗೆ ಬರುತ್ತಿರುತ್ತದೆ ಮತ್ತು ಅವುಗಳನ್ನು ಮತ್ತು ಸಮಾಜವನ್ನು ಸಾಮಾನ್ಯವಾಗಿ

ಪರವಾನಗಿಯುಳ್ಳ ಲೈಂಗಿಕ ವಿರೋಧಿಗಳ ಹಾನಿಗಳಿಂದ ಉಳಿಸುತ್ತದೆ. ಅದಕ್ಕಾಗಿಯೇ ಖುರಾನ್ ಎಲ್ಲಾ ಹೆಂಡತಿಯರಿಗೆ ನ್ಯಾಯ ಮಾಡುವ ಸ್ಪಷ್ಟ ಪರಿಸ್ಥಿತಿಯೊಂದಿಗೆ ಅಂತಹ ಜನರಿಗೆ ಬಹುಪತ್ನಿತ್ವವನ್ನು ಅನುಮತಿಸುತ್ತದೆ. ...... ಖುರಾನ್ ಬಹುಪತ್ನಿತ್ವವನ್ನು ರದ್ದು ಗೊಳಿಸಲು ಅನುಮತಿಸುತ್ತದೆ. "

ಶಾಹಿ ಬುಕಾರಿ ಸಂಪುಟ-3, ಪುಸ್ತಕ-44, ಹದಿತ್-674 ರಲ್ಲಿ ತಿಳಿಸಿರುವಂತೆ ಮೊಹಮ್ಮದ್ ರವರ ಹೆಂಡತಿ ಆಯಿಷ ಈ ಬಗ್ಗೆ ಅರ್ಥೈಸುವುದೇನೆಂದರೆ "ಅನಾಥ ಹೆಣ್ಣು ಯಾರಿಗೆ ಆಸ್ತಿ ಮತ್ತು ಸುಂದರತೆ ಇರುತ್ತದೋ ಅವರನ್ನು ಆಕೆಯ ಗಾರ್ಡಿಯನ್ (ರಕ್ಷಕ) ಮದುವೆ ಆಗುವುದರಲ್ಲಿ ಮೆಹರ್ ನೀಡುವ ನ್ಯಾಯ ಪಾಲಿಸಬೇಕೆಂದು ತಿಳಿಸಿರುತ್ತದೆ" ಎನ್ನುತ್ತಾರೆ. ಅಂದರೆ ದತ್ತು ಮಗಳನ್ನೂ ಮದುವೆಗೆ ಅನುಮತಿ ಕೊಟ್ಟಂತೆ ಆಯಿತಲ್ಲಾ.

ಹಾಗಾದರೆ ಯಾಕೆ ಇಲ್ಲಿವರೆಗೆ ಅಂತಹ ಅಮಾನುಷ ಎಂದು ಪರಿಗಣಿಸಲಾದ ಕಾನೂನನ್ನು ಇಂದಿಗೂ ಧರ್ಮದ ಹೆಸರಿನಲ್ಲಿ ಜೀವಂತ ಇಡಲಾಗಿದೆ. ಇಂತಹ ದ್ವಂದ್ವ ನಿಲುವುಗಳಿಂದಲೇ ಖುರಾನ್ ಬೋದನೆಗಳಲ್ಲಿ ಬಹುತೇಕ ಅಡ್ಡದಾರಿ ಹಿಡಿಯುವ ಬೋದನೆಗಳೇ ಜಾಸ್ತಿಯಾಗಿ ಇಂದು ಮುಸ್ಲಿಮ ಸಮುದಾಯ ಬಯೋತ್ಪಾದಕರು ಎಂಬ ಹಣೆ ಪಟ್ಟಿಯನ್ನು ಅಂಟಿಸಿಕೊಂಡು ವ್ಯಥೆ ಪಡುತ್ತಿರುವ ಜನ ಹೆಚ್ಚಾಗಿರುವುದು.

**ದತ್ತು ಪುತ್ರನ ವಿಚ್ಛೇದಿತ ಹೆಂಡತಿಯನ್ನು ಮದುವೆ ಆಗಲು ಖುರಾನಿನಲ್ಲಿ ಅನುಮತಿಸಲಾಗಿದೆ:-**

ಅಧ್ಯಾಯ 33 ಅಯಾತ್ 37 ರಿಂದ 40 ರಲ್ಲಿ ನೀಡಿರುವಂತೆ ಪ್ರವಾದಿ ಮೊಹಮ್ಮದರ ಒಬ್ಬ ದತ್ತು ಪುತ್ರ ಝೈದ್ ಎಂಬುವವನು ತನ್ನ ಪತ್ನಿಗೆ ವಿಚ್ಛೇದನ ಕೊಡುತ್ತಾನೆ. ಆಕೆಯನ್ನು ಮೊಹಮ್ಮದ್ ಮದುವೆಯಾಗುತ್ತಾರೆ. ಈ ಸಂಪ್ರದಾಯವನ್ನು ಅನುಮೋದಿಸಲು ಅಲ್ಲಾಹನು ಈ ಖುರಾನ್ ನಲ್ಲಿ ತನ್ನ ದಿವ್ಯ ವಾಣಿಯೊಂದಿಗೆ ಅನುಮೋದಿಸಿ ಅಂದಿನಿಂದ ಹೊಸ ಸಂಪ್ರದಾಯಕ್ಕೆ ನಾಂದಿ ಹಾಡಲಾಗುತ್ತದೆ.

37. ............................ ಕೊನೆಗೆ ಝೈದ್ ಆಕೆಯ ಜೊತೆ ತನ್ನ ಅಗತ್ಯವನ್ನು ಪೂರೈಸಿ ಕೊಂಡಾಗ (ಆಕೆಯನ್ನು ವಿಚ್ಛೇಧಿಸಿದಾಗ), ನಾವು ನಿಮ್ಮ ಜೊತೆ (ಮೊಹಮ್ಮದ್) ಆಕೆಯ ವಿವಾಹ ಮಾಡಿಸಿದೆವು. ತಮ್ಮ ದತ್ತು ಪುತ್ರರು ತಮ್ಮ ಅಗತ್ಯವನ್ನು ಪೂರೈಸಿಕೊಂಡ (ವಿಚ್ಛೇದಿಸಿದ) ಪತ್ನಿಯರ ವಿಷಯದಲ್ಲಿ ವಿಶ್ವಾಸಿಗಳಿಗೆ

ಯಾವುದೇ ಅಡೆ ತಡೆ ಇರಬಾರದು ಎಂಬುದೇ ಇದರ ಉದ್ದೇಶವಾಗಿತ್ತು. ಅಲ್ಲಾಹನಂತು ತನ್ನ ಆದೇಶವನ್ನು ಅನುಷ್ಠಾನಿಸಿಯೇ ಬಿಡುತ್ತಾನೆ.

40. ಮುಹಮ್ಮದ್ ನಿಮ್ಮ ಪೈಕಿ ಯಾವುದೇ ಪುರುಷನ ತಂದೆಯಲ್ಲ. ಅವರು ಅಲ್ಲಾಹನ ದೂತ ಮತ್ತು ಕೊನೆಯ ಪ್ರವಾದಿಯಾಗಿರುವರು. ಅಲ್ಲಾಹನು ಎಲ್ಲ ವಿಷಯಗಳ ಜ್ಞಾನ ಉಳ್ಳವನಾಗಿದ್ದಾನೆ.

ಈ ಹಿಂದೆ ಸೊಸೆಯಾಗಿದ್ದವರನ್ನೂ ಮದುವೆಯಾಗುವ ಪರಿಪಾಟ ಮುಸ್ಲಿಮರಲ್ಲಿ ಅನುಮೋದಿತವಾಗಿದೆ ಎಂದಾಯಿತು.

ಪತ್ನಿಯರನ್ನು ತೋಟಕ್ಕೆ ಹೋಲಿಸಿ ಅವರ ಮೇಲೆ ಮನಸೋ ಇಚ್ಚೆ ಪ್ರವೇಶಿಸಲು ಖುರಾನ್ ಅನುಮತಿಸುತ್ತದೆ. ಮುಸ್ಲಿಮ್ ಯುವಕನೊಂದಿಗೆ ಮದುವೆ ಬಯಸುವ ಪ್ರೀತಿಯಲ್ಲಿ ಸೆರೆ ಸಿಕ್ಕವರು ಇದನ್ನು ಓದಲೇ ಬೇಕು.

ಅಧ್ಯಾಯ 2 ಅಯಾತ್ 223. ನಿಮ್ಮ ಪತ್ನಿಯರು ನಿಮ್ಮ ಪಾಲಿಗೆ, ತೋಟಗಳಾಗಿದ್ದಾರೆ. ನೀವು ನಿಮಗೆ ಬೇಕಾದಂತೆ ನಿಮ್ಮ ತೋಟವನ್ನು ಪ್ರವೇಶಿಸಿರಿ. ........................ (ಇದನ್ನು ವ್ಯಾಖ್ಯಾನಿಸುವುದಕ್ಕೆ 5 ಹದಿತ್ಗಳು ಇವೆ. ಒಂದು ಕಡೆ ಉಳುಮೆ ಮಾಡಿ ಸಂತಾನವನ್ನು ಪಡೆಯುವುದಕ್ಕೆ ಹೀಗೆ ಹೇಳಿದ್ದಾರೆ ಎಂಬ ವಿವರವಿದ್ದರೆ, ಹಿಂದಿನಿಂದ ಹೋಗಬೇಡಿ ವಂಡರ್ಗಣ್ಣಿನ ಮಗು ಹುಟ್ಟುತ್ತೆ ಅನ್ನುತ್ತಾರೆ, ಇನ್ನೊಂದು ಕಡೆ ಹಿಂದಿನಿಂದ ಮತ್ತು ಮುಟ್ಟಾದ ಸಮಯದಲ್ಲಿ ಹೋಗಬೇಡಿ ಎನ್ನುವ ಹದಿತ್ಗಳು ಇವೆ. ಅಂದರೆ ಖುರಾನಿನ ಸ್ಪಷ್ಟ ಮಾತುಗಳಲ್ಲಿ ಇಲ್ಲದ್ದನ್ನು ಕಾಲಕ್ಕೆ ತಕ್ಕಂತೆ ಕೆಟ್ಟದ್ದು ಒಳ್ಳೆಯದು ವಿಮರ್ಶಿಸಿ ಬರೆದಿರುತ್ತಾರೆ. ಇಂತಹ ವಿಮರ್ಶಾತ್ಮಕ ನಿಲವು ಅನ್ಯ ಮುಸ್ಲಿಮೇತರ ಜಿವಗಳ ಬಗ್ಗೆ ಯಾಕೆ ಇಲ್ಲ ?

ವ್ಯಭಿಚಾರಕ್ಕೂ ಬಹುದೇವಾರಾದನೆಗೂ ಮದುವೆಗೂ ನಂಟು ಕಲ್ಪಿಸುತ್ತ ಮುಸ್ಲಿಮರು ವ್ಯಭಿಚಾರಿಗಳನ್ನು ಮದುವೆ ಆಗಬೇಡಿ ಎಂದು ಸಾರಲಾಗುತ್ತೆ – ಅಂದರೆ ಬಹುದೇವಾರಾದಕ ಪುರುಷ ಮತ್ತು ಸ್ತ್ರೀಯರನ್ನ ವ್ಯಭಿಚಾರಿಗಳು ಎಂದು ಪರಿಗಣಿಸಿದಂತೆ ಆಗಲಿಲ್ಲವೆ – ಅಂತಹ ಪರಿಗಣನೆಯ ಬೋದನೆ ಇರುವ ಖುರಾನ್ ಬೋದನೆಯಿಂದ ಮುಸ್ಲಿಮೇತರರ ಮೇಲೆ ಮುಸ್ಲಿಮರಿಗೆ ಎಲ್ಲಿ ಬಂದಿತು ಸಹಿಷ್ಣುತೆ.

ಅಧ್ಯಾಯ 24: ಅನ್ನೂರ್ (ಪ್ರಕಾಶ), ಸೂಕ್ತ 3 ವ್ಯಭಿಚಾರಿ ಪುರುಷನು ವ್ಯಭಿಚಾರಿ ಸ್ತ್ರೀಯನ್ನು ಅಥವಾ ಬಹುದೇವಾರಾಧಕಿಯನ್ನು ಮಾತ್ರ ವಿವಾಹವಾಗಲಿ. ಹಾಗೆಯೇ, ವ್ಯಭಿಚಾರಿ ಸ್ತ್ರೀಯನ್ನು ಒಬ್ಬ ವ್ಯಭಿಚಾರಿ ಪುರುಷನು ಅಥವಾ ಒಬ್ಬ

ಬಹುದೇವಾರಾಧಕನು ಮಾತ್ರ ವಿವಾಹವಾಗಲಿ. ವಿಶ್ವಾಸಿಗಳ ಪಾಲಿಗೆ ಅದು (ವ್ಯಭಿಚಾರಿಗಳೊಂದಿಗೆ ವಿವಾಹ) ನಿಷಿದ್ಧವಾಗಿದೆ.

ದಾಸಿಯರು ದಾಸರಿಗಿಂತ ಕೀಳಾಗಿ ನೋಡಲಾಗುತ್ತೆ ಬಹುದೇವಾರಾಧಕರನ್ನ

24:32. ನೀವು ನಿಮ್ಮಲ್ಲಿನ ವಿಧವೆಯರು ಹಾಗು ವಿಧುರರಿಗೆ, ನಿಮ್ಮ ಸಜ್ಜನ ದಾಸರಿಗೆ ಮತ್ತು ನಿಮ್ಮ ದಾಸಿಯರಿಗೆ ವಿವಾಹ ಮಾಡಿಸಿರಿ. ಅವರು ಬಡವರಾಗಿದ್ದರೆ ಅಲ್ಲಾಹನು ತನ್ನ ಅನುಗ್ರಹದಿಂದ ಅವರನ್ನು ಸಂಪನ್ನರಾಗಿಸುವನು. ಅಲ್ಲಾಹನು ವಿಶಾಲನೂ ಜ್ಞಾನಿಯೂ ಆಗಿದ್ದಾನೆ.

ಯಹೂದಿಗಳ ಮತ್ತು ಬಹುದೇವಾರಾದಕರು ಮುಸ್ಲೀಮರ ವಿರೋದಿಗಳಂತೆ, ಕ್ರೈಸ್ತರು ಮುಸ್ಲಿಮರ ಸ್ನೇಹಿತರಂತೆ ಪವಿತ್ರ ಖುರಾನ್ ಹೇಳುತ್ತದೆ – ದಿವ್ಯ ಖುರಾನ್ ನಲ್ಲೇ ಈ ರೀತಿ ಸ್ನೇಹತ್ವ ಮತ್ತು ವೈರತ್ವ ಸಾರುವ ಬೋದನೆ ಇರುವಾಗ ಸಹಬಾಳ್ವೆ ಸಾಧ್ಯವೆ ?

ಅಧ್ಯಾಯ 5: ಅಲ್ ಮಾಇದಃ (ಮೇಜು), ಸೂಕ್ತ 82 ಜನರ ಪೈಕಿ ಯಹೂದಿಗಳು ಮತ್ತು ಬಹುದೇವಾರಾಧಕರು ವಿಶ್ವಾಸಿಗಳ ವಿರುದ್ಧ ಹೆಚ್ಚು ಶತ್ರುತ್ವ ಉಳ್ಳವರಾಗಿರುವುದನ್ನು ನೀವು ಕಾಣುವಿರಿ. ಹಾಗೆಯೇ "ನಾವು ಕ್ರೈಸ್ತರು" ಎಂದು ಹೇಳುವವರನ್ನು ನೀವು ವಿಶ್ವಾಸಿಗಳ ಜೊತೆ ಹೆಚ್ಚಿನ ಸ್ನೇಹ ಉಳ್ಳವರಾಗಿ ಕಾಣುವಿರಿ. ಇದೇಕೆಂದರೆ ಅವರ ನಡುವೆ ನಿಸ್ವಾರ್ಥ ಧರ್ಮ ಸೇವಕರು ಹಾಗೂ ಸಾಧುಗಳಿದ್ದಾರೆ ಮತ್ತು ಅವರು ಅಹಂಕಾರ ಪಡುವವರಲ್ಲ.

ಇಬ್ನ್ ಅಲ್ ಕತೀರ್ ಬರೆದಿರುವ ತಫ್ಸೀರ್ ಪ್ರಕಾರ ಕ್ವತಾದ ಹೇಳಿದರಂತೆ "ಕೆಲವರು ಮರಿಯಮ್ಮರ ಪುತ್ರ ಇಸಾ ರವರ ಮತವನ್ನು ಆರಾಧಿಸುತ್ತಿದ್ದವರು, ಮುಸ್ಲಿಮರನ್ನು ಕಂಡಾಗ ಮತ್ತು ಖುರಾನನ್ನು ಕೇಳಿಸಿಕೊಂಡಾಗ ಅವರು ಯಾವುದೇ ಅಡೆತಡೆ ಇಲ್ಲದೆ ಮುಸ್ಲಿಮರಾದರು" ಇಲ್ಲಿ ಮುಸ್ಲಿಮ್ ಮತಕ್ಕೆ ಪರಿವರ್ತನೆ ಆಗುವುದೇ ಒಳ್ಳೆಯವರು ಎಂಬುದಕ್ಕೆ ಬುನಾದಿ ಹಾಕಿದ್ದಾರೆ.

ಅಲ್ಲಾ ಯಾರಿಗೂ ದೇವ ಆರಾಧನೆಯಲ್ಲಿ ಪಾಲು ಕೊಡುವುದಿಲ್ಲ, ಬಹುದೇವಾರಾದಕರಿಗೆ ನರಕವನ್ನು ಕೊಟ್ಟಿದ್ದಾರೆ ಎನ್ನುತ್ತದೆ ಖುರಾನ್ – ಇದು ನೇರವಾಗಿ ಇತರೆ ದೇವರ ಆರದನೆಯನ್ನು ತಡೆಯಿರಿ ಎಂದು ಹೇಳಿದಂತೆ ಅಲ್ಲವೆ, ಇದಕ್ಕಾಗಿಯೇ ನಮ್ಮ ಚರಿತ್ರೆಯಲ್ಲಿ ಬವ್ಯ ಮಂದಿರಗಳ ನಾಶ ಮುಸ್ಲಿಮ್ ದೊರೆಗಳಿಂದ ಆದದ್ದು ಅಲ್ಲವೆ.

4:161. ಹಾಗೆಯೇ, ಅವರು ತಮ್ಮ ಪಾಲಿಗೆ ನಿಷೇಧಿಸಲಾಗಿದ್ದ ಬಡ್ಡಿಯನ್ನು ತಿನ್ನುತ್ತಿದ್ದುದು ಮತ್ತು ಜನರ ಸಂಪತ್ತನ್ನು ಅಕ್ರಮವಾಗಿ ಕಬಳಿಸುತ್ತಿದ್ದುದು ಕೂಡಾ (ಈ ಶಿಕ್ಷೆಗೆ ಕಾರಣವಾಗಿತ್ತು). ಅವರ ಪೈಕಿ ಧಿಕ್ಕಾರಿಗಳಿಗಾಗಿ ನಾವು ಕಠಿಣ ಶಿಕ್ಷೆಯನ್ನು ತಯಾರಿಸಿಟ್ಟಿದ್ದೇವೆ.

4:162. ಅವರ ಪೈಕಿ ಪಕ್ವ ಜ್ಞಾನವುಳ್ಳವರು ಹಾಗೂ ವಿಶ್ವಾಸಿಗಳು ಮಾತ್ರ, ನಿಮಗೆ ಇಳಿಸಿಕೊಡಲಾಗಿರುವುದರಲ್ಲಿ (ಕುರ್‌ಆನ್‌ನಲ್ಲಿ) ಮತ್ತು ನಿಮಗಿಂತ ಹಿಂದೆ ಇಳಿಸಿಕೊಡಲಾಗಿದ್ದರಲ್ಲಿ (ದಿವ್ಯ ಸಂದೇಶದಲ್ಲಿ) ನಂಬಿಕೆ ಇಡುತ್ತಾರೆ. ನಮಾಝ್ ಅನ್ನು ಪಾಲಿಸುತ್ತಾರೆ, ಝಕಾತ್ ಅನ್ನು ಪಾವತಿಸುತ್ತಾರೆ ಮತ್ತು ಅಲ್ಲಾಹನಲ್ಲಿ ಹಾಗೂ ಪರಲೋಕದಲ್ಲಿ ನಂಬಿಕೆ ಇಟ್ಟಿರುತ್ತಾರೆ. ಅವರಿಗೆ ನಾವು ಭವ್ಯ ಪ್ರತಿಫಲ ನೀಡಲಿದ್ದೇವೆ.

4:163. (ದೂತರೇ,) ನೂಹ್‌ರಿಗೆ ಮತ್ತು ಅವರ ಅನಂತರದ ದೇವದೂತರಿಗೆ ಇಳಿಸಿ ಕೊಟ್ಟಂತೆ (ಈ ಸಂದೇಶವನ್ನು) ನಾವೇ ನಿಮಗೆ ಇಳಿಸಿಕೊಟ್ಟಿರುವೆವು. (ಈ ಹಿಂದೆ) ನಾವು ಇಬ್ರಾಹೀಮ್, ಇಸ್ಮಾಈಲ್, ಇಸ್‌ಹಾಕ್, ಯಅ್ಕೂಬ್, ಯಅ್ಕೂಬರ ಸಂತತಿ, ಈಸಾ, ಅಯ್ಯೂಬ್, ಯೂನುಸ್, ಹಾರೂನ್ ಮತ್ತು ಸುಲೈಮಾನ್‌ರಿಗೆ (ದಿವ್ಯ ಸಂದೇಶವನ್ನು) ಇಳಿಸಿಕೊಟ್ಟಿದ್ದೆವು. ಹಾಗೆಯೇ, ದಾವೂದ್‌ರಿಗೆ ನಾವು 'ಝಬೂರ್' ಅನ್ನು ನೀಡಿದ್ದೆವು.

4:164. ಹಾಗೆಯೇ, ನಾವು ಈ ಹಿಂದೆ ನಿಮ್ಮ ಮುಂದೆ ಪ್ರಸ್ತಾಪಿಸಿರುವ ಹಾಗೂ ನಿಮ್ಮ ಮುಂದೆ ಪ್ರಸ್ತಾಪಿಸಿಲ್ಲದ ದೇವದೂತರಿಗೆಲ್ಲಾ (ಸಂದೇಶವನ್ನು ಕಳಿಸಲಾಗಿತ್ತು). ಮತ್ತು ಮೂಸಾರೊಡನೆ ಅಲ್ಲಾಹನು ನೇರವಾಗಿ ಮಾತನಾಡಿದ್ದನು.

4:165. ದೇವದೂತರು ಬಂದ ಬಳಿಕ ಅಲ್ಲಾಹನೆದುರು ಜನರ ಬಳಿ ಯಾವುದೇ ನೆಪ ಉಳಿಯಬಾರದೆಂದು, ಆ ದೇವದೂತರನ್ನು ಶುಭವಾರ್ತೆ ನೀಡುವವರು ಮತ್ತು ಎಚ್ಚರಿಸುವವರಾಗಿ ಕಳಿಸಲಾಗಿತ್ತು. ಅಲ್ಲಾಹನಂತೂ ಪ್ರಚಂಡನೂ, ಯುಕ್ತಿವಂತನೂ ಆಗಿದ್ದಾನೆ.

4:166. ಅಲ್ಲಾಹನು ನಿಮಗೆ ಏನನ್ನು ಇಳಿಸಿಕೊಟ್ಟಿರುವನೋ ಅದನ್ನು ಅವನು ತನ್ನ ಜ್ಞಾನದ ಆಧಾರದಲ್ಲಿ ಇಳಿಸಿ ಕೊಟ್ಟಿರುವನೆಂದು ಅವನೇ ಸಾಕ್ಷಿ ಹೇಳುತ್ತಾನೆ ಮತ್ತು ದೇವಾರುಗಳೂ ಸಾಕ್ಷಿ ಹೇಳುತ್ತಾರೆ. ನಿಜವಾಗಿ ಸಾಕ್ಷಿಯಾಗಿ ಅಲ್ಲಾಹನೇ ಸಾಕು.

4:167. (ಸತ್ಯವನ್ನು) ಧಿಕ್ಕರಿಸಿದವರು ಮತ್ತು (ಜನರನ್ನು) ಅಲ್ಲಾಹನ ಮಾರ್ಗದಿಂದ ತಡೆಯುವವರು ದಾರಿಗೆಡಿತನದಲ್ಲಿ ನಿಜಕ್ಕೂ ತುಂಬಾ ದೂರ ಸಾಗಿಬಿಟ್ಟಿದ್ದಾರೆ.

4:168. ಧಿಕ್ಕಾರಿಗಳಾದವರನ್ನು ಹಾಗೂ ಅಕ್ರಮವೆಸಗಿದವರನ್ನು ಅಲ್ಲಾಹನು ಕ್ಷಮಿಸಲಾರನು ಮತ್ತು ಅವರಿಗೆ ಯಾವುದೇ ದಾರಿಯನ್ನು ತೋರಲಾರನು –

4:169. – ನರಕದ ದಾರಿಯ ಹೊರತು. ಅದರಲ್ಲಿ ಅವರು ಸದಾಕಾಲ ಇರುವರು. ಇದೆಲ್ಲಾ ಅಲ್ಲಾಹನ ಪಾಲಿಗೆ ತೀರಾ ಸುಲಭವಾಗಿದೆ.

4:170. ಮಾನವರೇ, ನಿಮ್ಮೆಡೆಗೆ ನಿಮ್ಮೊಡೆಯನ ಕಡೆಯಿಂದ ಸತ್ಯದೊಂದಿಗೆ ಒಬ್ಬ ದೂತರು ಬಂದಿರುವರು. ಅವರಲ್ಲಿ ನಂಬಿಕೆ ಇಡಿರಿ. ಅದು ನಿಮ್ಮ ಪಾಲಿಗೆ ಒಳ್ಳೆಯದು. ಇನ್ನು ನೀವು ಧಿಕ್ಕರಿಸಿದರೆ, (ನಿಮಗೆ ತಿಳಿದಿರಲಿ), ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಎಲ್ಲವೂ ಅಲ್ಲಾಹನಿಗೇ ಸೇರಿವೆ ಮತ್ತು ಅಲ್ಲಾಹನು ಎಲ್ಲವನ್ನೂ ಬಲ್ಲವನು ಹಾಗೂ ಯುಕ್ತಿವಂತನಾಗಿದ್ದಾನೆ.

4:171. ಗ್ರಂಥದವರೇ, ನಿಮ್ಮ ಧರ್ಮದಲ್ಲಿ ಅತಿಶಯವೆಸಗಬೇಡಿ ಮತ್ತು ಅಲ್ಲಾಹನ ಕುರಿತು, ಸತ್ಯವಲ್ಲದ ಏನನ್ನೂ ಹೇಳಬೇಡಿ. ಮರ್ಯಮರ ಪುತ್ರ ಈಸಾ ಮಸೀಹ್, ಅಲ್ಲಾಹನ ದೂತರಾಗಿದ್ದರು ಹಾಗೂ ಅವನು ಮರ್ಯಮರಿಗೆ ಕರುಣಿಸಿದ, ಅವನ ವಚನವಾಗಿದ್ದರು ಮತ್ತು ಅವನ ಕಡೆಯಿಂದ ಕಳಿಸಲಾಗಿದ್ದ ಒಂದು ಆತ್ಮವಾಗಿದ್ದರು. ನೀವು "(ದೇವರು) ಮೂವರಿದ್ದಾರೆ" ಎನ್ನಬೇಡಿ. ಹಾಗೆ ಹೇಳದಿರುವುದೇ ನಿಮ್ಮ ಪಾಲಿಗೆ ಉತ್ತಮ. ಅಲ್ಲಾಹನೊಬ್ಬನು ಮಾತ್ರ ಪೂಜಾರ್ಹನು. ಅವನಿಗೊಬ್ಬ ಪುತ್ರನಿರಲು, ಅವನಂತೂ ತುಂಬಾ ಪಾವನನಾಗಿದ್ದಾನೆ. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿ ಇರುವುದೆಲ್ಲವೂ ಅವನಿಗೇ ಸೇರಿವೆ. ಕಾರ್ಯ ಸಾಧನಕನಾಗಿ (ಎಲ್ಲರಿಗೂ) ಅಲ್ಲಾಹನೇ ಸಾಕು. (ಶಾಹಿ ಇಂಟರ್ ನ್ಯಾಷನಲ್ ಅನುವಾದದಲ್ಲಿ "ಅವನು (ಅಲ್ಲಾಹನು) ಮಗನನ್ನು ಹೊಂದುವ ಮೇಲೊಂದು ಎತ್ತರದವನು" ಎನ್ನುತ್ತಾರೆ)

ಇಲ್ಲಿ ಅಲ್ಲಾಹನಿಗೆ ಈಸಾ ಪುತ್ರನೆಂದು ಮಗನನ್ನು ದಯಪಾಲಿಸುವ ಎತ್ತರದವನೆಂದು, ಅವನು ಪಾವನನೆಂದು ಬಿಂಬಿಸುತ್ತಾರೆ ಆದರೆ ಇನ್ನೊಂದು ಕಡೆ ಅಲ್ಲಾಹನಿಗೆ ಪುತ್ರನಿರಲು ಸಾದ್ಯವೇ ಇಲ್ಲ ಎನ್ನುತ್ತಾರೆ.

9:30 ರಲ್ಲಿ ಯಹೂದಿಗಳು, ಉಝೈರ್ ಅಲ್ಲಾಹನ ಪುತ್ರರೆಂದು ಹೇಳುತ್ತಾರೆ ಮತ್ತು ಕ್ರೈಸ್ತರು ಮಸೀಹರು ಅಲ್ಲಾಹನ ಪುತ್ರರೆಂದು ಹೇಳುತ್ತಾರೆ. ಇದು ಕೇವಲ ಅವರ ಬಾಯಿ ಮಾತು. ಅವರು ಗತಕಾಲದ ಧಿಕ್ಕಾರಿಗಳ ಮಾತನ್ನೇ ಅನುಕರಿಸುತ್ತಿದ್ದಾರೆ. ಅವರ ಮೇಲೆ ಅಲ್ಲಾಹನ ಪ್ರಹಾರವಿದೆ. ಅವರು ದಾರಿಗೆಟ್ಟು ಅದೆಲ್ಲಿ ಅಲೆಯುತ್ತಿದ್ದಾರೆ?

19:7 ರಲ್ಲಿ (ಅಲ್ಲಾಹನು ಹೇಳಿದನು;) ಓ ಝುಕರಿಯ್ಯ! ಇದೋ ನಾವು ನಿಮಗೆ ಒಬ್ಬ ಪುತ್ರನ ಶುಭವಾರ್ತೆ ನೀಡುತ್ತೇವೆ. ಆತನ ಹೆಸರು ಯಹ್ಯಾ ಎಂದಾಗಿರುವುದು. ನಾವು ಈ ಹಿಂದೆ ಯಾರಿಗೂ ಅಂತಹ ಹೆಸರಿಟ್ಟಿಲ್ಲ.

19: 91. ರಹ್ಮಾನನಿಗೆ (ಅಲ್ಲಾಹನಿಗೆ) ಪುತ್ರನಿರುವನೆಂದು ಅವರು ಆರೋಪಿಸಿದ್ದರಿಂದ.

19:92. ಯಾರನ್ನಾದರೂ ತನ್ನ ಪುತ್ರನಾಗಿಸಿಕೊಳ್ಳುವುದು ಆ ಪರಮ ದಯಾಮಯನಿಗೆ ಭೂಷಣವಲ್ಲ.

21: 26. ಆ ಪರಮ ದಯಾಮಯನಿಗೊಬ್ಬ (ರಹ್ಮಾನನಿಗೆ) ಪುತ್ರನಿದ್ದಾನೆ ಎಂದು ಅವರು ಹೇಳುತ್ತಾರೆ. ಅವನು ಪರಮ ಪಾವನನು. ಅವರು ಅವನ ಗೌರವಾನ್ವಿತ ದಾಸರು. ಮೌದುದಿ ಹೇಳಿದಂತೆ:- ಅವರು ಹೇಳುತ್ತಾರೆ: "ಅತ್ಯಂತ ಸಹಾನುಭೂತಿಯುಳ್ಳ ಕರ್ತನು ಒಬ್ಬನೇ ಒಬ್ಬ ಮಗನನ್ನು ತೆಗೆದುಕೊಂಡಿದ್ದಾನೆ." ಅವನಿಗೆ ಮಹಿಮೆ! ಅವರು ನೇಮಕ ಮಾಡಿದವರು ಅವರ ಗೌರವಾನ್ವಿತ ಸೇವಕರು ಮಾತ್ರ.

39: 4. ಅಲ್ಲಾಹನು ಯಾರನ್ನಾದರೂ ತನ್ನ ಪುತ್ರನಾಗಿಸಿಕೊಳ್ಳಲು ಬಯಸಿದ್ದರೆ, ಅವನು ತನ್ನ ಸೃಷ್ಟಿಗಳ ಪೈಕಿ ತಾನಿಚ್ಛಿಸಿದವರನ್ನು ಆರಿಸಿಕೊಳ್ಳುತ್ತಿದ್ದನು. ಅವನು ಪಾವನನು. ಆ ಅಲ್ಲಾಹನು, ಅನುಪಮನಾಗಿದ್ದಾನೆ ಹಾಗೂ ಭಾರೀ ಶಕ್ತಿಶಾಲಿಯಾಗಿದ್ದಾನೆ.

17: 111. ಹೇಳಿರಿ; ಎಲ್ಲ ಹೊಗಳಿಕೆಗಳು ಅಲ್ಲಾಹನಿಗೆ ಮೀಸಲು. ಅವನು ಯಾರನ್ನೂ ತನ್ನ ಪುತ್ರನಾಗಿಸಿಕೊಂಡಿಲ್ಲ. ವಿಶ್ವಾಧಿಪತ್ಯದಲ್ಲಿ ಅವನಿಗೆ ಯಾರೂ ಪಾಲುದಾರರಿಲ್ಲ. ತನ್ನನ್ನು ದೌರ್ಬಲ್ಯದಿಂದ ರಕ್ಷಿಸುವ ಸಹಾಯಕರ ಅಗತ್ಯವೂ ಅವನಿಗಿಲ್ಲ. ನೀವು ಅವನ ಮಹಿಮೆಯನ್ನು ಕೊಂಡಾಡಬೇಕಾದ ರೀತಿಯಲ್ಲಿ ಕೊಂಡಾಡಿರಿ. (ಇಂತಹ ದ್ವಂದ್ವ ನಿಲುವು ಏಕೆ ತಳೆಯಲಾಗಿದೆ.)

4:172. ಈಸಾ ತಾನು ಅಲ್ಲಾಹನ ದಾಸನಾಗಿರುವುದಕ್ಕೆ ಸಂಕೋಚ ಪಡುವುದಿಲ್ಲ. (ಅಲ್ಲಾಹನ) ಆಪ್ತ ದೇವರುಗಳೂ ಅಷ್ಟೇ. ಅವನನ್ನು (ಅಲ್ಲಾಹನನ್ನು) ಪೂಜಿಸುವುದಕ್ಕೆ ಹಿಂಜರಿಯುವ ಹಾಗೂ ಅಹಂಕಾರ ತೋರುವ ಎಲ್ಲರನ್ನೂ ಅವನು (ವಿಚಾರಣೆಗಾಗಿ) ತನ್ನ ಬಳಿ ಸೇರಿಸಲಿದ್ದಾನೆ.

5:43. ಅವರ ಬಳಿ, ಅಲ್ಲಾಹನ ಆದೇಶವಿರುವ ತೌರಾತ್ ಗ್ರಂಥವಿರುವಾಗ ಅವರು ನಿಮ್ಮನ್ನು ತೀರ್ಪುಗಾರರಾಗಿ ಮಾಡುವುದಾದರೂ ಹೇಗೆ? ಆದರೆ ಆ ಬಳಿಕ ಅವರು ತಿರುಗಿ ನಿಲ್ಲುತ್ತಾರೆ – ಇನ್ನು ಅವರು ನಂಬುವವರಂತೂ ಅಲ್ಲ.

5:44. ಖಂಡಿತವಾಗಿಯೂ ತೌರಾತ್‌ಅನ್ನು ನಾವೇ ಇಳಿಸಿದೆವು. ಅದರಲ್ಲಿ ಮಾರ್ಗದರ್ಶನ ಮತ್ತು ಪ್ರಕಾಶವಿದೆ. ನಮ್ಮ ಆಜ್ಞಾಪಾಲಕರಾಗಿದ್ದ ದೇವದೂತರುಗಳು ಅದರ (ತೌರಾತ್‌ನ) ಮೂಲಕವೇ ಯಹೂದಿಗಳಿಗೆ ಆದೇಶಗಳನ್ನು ನೀಡುತ್ತಿದ್ದರು. (ಅವರಲ್ಲಿನ) ದೇವಭಕ್ತರು ಮತ್ತು ವಿದ್ವಾಂಸರು ಕೂಡ ಹಾಗೆಯೇ ಮಾಡುತ್ತಿದ್ದರು. ಏಕೆಂದರೆ ಅವರನ್ನು ಅಲ್ಲಾಹನ ಗ್ರಂಥದ ರಕ್ಷಕರಾಗಿ ಮಾಡಲಾಗಿತ್ತು ಮತ್ತು ಅವರು ಅದರ ಪರ ಸಾಕ್ಷಿಗಳಾಗಿದ್ದರು. ನೀವು ಜನರಿಗೆ ಅಂಜಬೇಡಿ. ನನಗೆ ಮಾತ್ರ ಅಂಜಿರಿ. ಹಾಗೆಯೇ ನೀವು ನನ್ನ ವಚನಗಳನ್ನು ಸಣ್ಣ ಬೆಲೆಗೆ ಮಾರಬೇಡಿ. ಅಲ್ಲಾಹನು ಇಳಿಸಿ ಕೊಟ್ಟಿರುವುದರ (ಅವನ ನಿಯಮದ) ಪ್ರಕಾರ ತೀರ್ಪು ನೀಡದವರು ಧಿಕ್ಕಾರಿಗಳಾಗಿರುತ್ತಾರೆ.

**5:45. ಅದರಲ್ಲಿ (ತೌರಾತ್‌ನಲ್ಲಿ) ನಾವು ಅವರಿಗೆ – ಜೀವಕ್ಕೆ ಜೀವ, ಕಣ್ಣಿಗೆ ಕಣ್ಣು, ಮೂಗಿಗೆ ಮೂಗು, ಕಿವಿಗೆ ಕಿವಿ ಮತ್ತು ಹಲ್ಲಿಗೆ ಹಲ್ಲು ಪರಿಹಾರವೆಂದು ಮತ್ತು ಗಾಯಗಳಿಗೂ ಪರಿಹಾರವಿದೆ ಎಂದು, ಹಾಗೆಯೇ ಪ್ರತೀಕಾರದ ಹಕ್ಕನ್ನು ಕ್ಷಮಿಸಿ ಬಿಟ್ಟವನಿಗೆ ಅದಕ್ಕಾಗಿ ಪರಿಹಾರ ಧನ ಉಂಟೆಂದು ವಿಧಿಸಿದ್ದೆವು. ಇನ್ನು ಅಲ್ಲಾಹನು ಇಳಿಸಿ ಕೊಟ್ಟಿರುವುದರ (ಅವನ ನಿಯಮದ) ಪ್ರಕಾರ ತೀರ್ಪು ನೀಡದವರು ಅಕ್ರಮಿಗಳಾಗಿರುತ್ತಾರೆ.**

5:46. ಅವರ (ಗತಕಾಲದ ದೂತರುಗಳ) ಹೆಜ್ಜೆ ಗುರುತುಗಳ ಮೇಲೆ ನಾವು ಮರ್ಯಮರ ಪುತ್ರ ಈಸಾರನ್ನು ಕಳಿಸಿದೆವು – ತೌರಾತ್‌ನ ಪೈಕಿ ಅವರ (ಯಹೂದಿಗಳ) ಬಳಿ ಉಳಿದಿದ್ದ ಭಾಗವನ್ನು ದೃಢೀಕರಿಸುವವರಾಗಿ. ಹಾಗೆಯೇ ನಾವು ಅವರಿಗೆ (ಈಸಾರಿಗೆ) ಇಂಜೀಲ್ ಅನ್ನು ನೀಡಿದೆವು. ಅದರಲ್ಲಿ ಮಾರ್ಗದರ್ಶನ ಮತ್ತು ಪ್ರಕಾಶವಿದೆ. ಅದು ತೌರಾತ್‌ನ ಪೈಕಿ ಅವರ ಬಳಿ ಉಳಿದಿರುವ ಭಾಗವನ್ನು ಸಮರ್ಥಿಸುತ್ತದೆ ಮತ್ತು ಅದು ದೇವಭಕ್ತರ ಪಾಲಿಗೆ ಮಾರ್ಗದರ್ಶಿ ಹಾಗೂ ಉಪದೇಶವಾಗಿದೆ.

5:66. ಒಂದು ವೇಳೆ ಅವರು ತೌರಾತ್ ಮತ್ತು ಇಂಜೀಲ್‌ಗಳನ್ನು ಹಾಗೂ (ಇದೀಗ) ಅವರಿಗೆ ಅವರೊಡೆಯನ ಕಡೆಯಿಂದ ಏನನ್ನು ಇಳಿಸಿಕೊಡಲಾಗಿದೆಯೋ ಅದನ್ನು (ಕುರ್‌ಆನನ್ನು) ಸ್ಥಾಪಿಸಿರುತ್ತಿದ್ದರೆ ಅವರ ಮೇಲಿಂದಲೂ ಅವರ ಕಾಲಡಿಯಿಂದಲೂ ಅವರಿಗೆ ಆಹಾರವು ಹರಿದು ಬರುತ್ತಿತ್ತು. ಅವರಲ್ಲಿ ಮಧ್ಯಮ ನಿಲುವಿನ ಒಂದು ಪಂಗಡವಿದೆ. ಆದರೆ ಅವರಲ್ಲಿ ಹೆಚ್ಚಿನವರು ಕೆಟ್ಟದ್ದನ್ನೇ ಮಾಡುವವರಾಗಿದ್ದಾರೆ.

5:68. ಹೇಳಿರಿ; "ಗ್ರಂಥದವರೇ, ನೀವು ತೌರಾತ್ ಅನ್ನು, ಇಂಜೀಲ್ ಅನ್ನು ಮತ್ತು ನಿಮ್ಮ ಒಡೆಯನು ನಿಮ್ಮೆಡೆಗೆ ಇಳಿಸಿಕೊಟ್ಟಿರುವುದನ್ನು ಸಂಸ್ಥಾಪಿಸುವ ತನಕ ನಿಮಗೆ ಯಾವ ನೆಲೆಯೂ ಇಲ್ಲ." ನಿಜವಾಗಿ, ನಿಮ್ಮ ಒಡೆಯನ ಕಡೆಯಿಂದ ನಿಮ್ಮೆಡೆಗೆ ಇಳಿಸಿ ಕೊಡಲಾಗಿರುವ ಸಂದೇಶವು ಅವರಲ್ಲಿ (ಗ್ರಂಥದವರಲ್ಲಿ) ಹೆಚ್ಚಿನವರ ವಿದ್ರೋಹ ಮತ್ತು ಧಿಕ್ಕಾರವನ್ನು ಮತ್ತಷ್ಟು ಹೆಚ್ಚಿಸಿದೆ. ನೀವು ಧಿಕ್ಕಾರಿಗಳ ವಿಷಯದಲ್ಲಿ ಬೇಸರಿಸಬೇಡಿ.

5:110. ಅಲ್ಲಾಹನು ಹೇಳಿದನು; "ಓ ಮರ್ಯಮರ ಪುತ್ರ ಈಸಾ! ನಿಮ್ಮ ಮೇಲೆ ಹಾಗೂ ನಿಮ್ಮ ತಾಯಿಯ ಮೇಲೆ ನಾನು ತೋರಿದ ಅನುಗ್ರಹವನ್ನು ಸ್ಮರಿಸಿರಿ. ನಾನು ಪವಿತ್ರ ಆತ್ಮ (ಜಿಬ್ರೀಲ್)ನ ಮೂಲಕ ನಿಮಗೆ ನೆರವಾದಾಗ, ನೀವು ತೊಟ್ಟಿಲಿಂದಲೂ, (ಆ ಬಳಿಕ) ಬೆಳೆದ ಬಳಿಕವೂ ಜನರೊಡನೆ ಮಾತನಾಡಿದಿರಿ. ಹಾಗೆಯೇ, ನಾನು ನಿಮಗೆ ಗ್ರಂಥ ಹಾಗೂ ಜಾಣ್ಮೆಯನ್ನು ಮತ್ತು ತೌರಾತ್ ಹಾಗೂ ಇಂಜೀಲ್‌ಗಳನ್ನು ಕಲಿಸಿಕೊಟ್ಟೆನು ಮತ್ತು ನೀವು ನನ್ನ ಆದೇಶದಂತೆ ಮಣ್ಣಿನಿಂದ ಪಕ್ಷಿಯ ರೂಪವನ್ನು ರಚಿಸಿದಿರಿ ಹಾಗೂ ನೀವು ಅದರೊಳಗೆ ಊದಿದಾಗ ಅದು ನನ್ನ ಆದೇಶದಂತೆ ಹಾರುವ ಪಕ್ಷಿಯಾಗಿ ಬಿಡುತ್ತಿತ್ತು. ಹಾಗೆಯೇ, ಹುಟ್ಟು ಕುರುಡರನ್ನು ಮತ್ತು ಕುಷ್ಠರೋಗಿಗಳನ್ನು ನೀವು ನನ್ನ ಆದೇಶದಂತೆ ಗುಣಪಡಿಸಿ ಬಿಡುತ್ತಿದ್ದಿರಿ. ಮತ್ತು ನನ್ನ ಆದೇಶದಂತೆ ನೀವು ಮೃತರನ್ನು (ಗೋರಿಯಿಂದ) ಜೀವಂತ ಹೊರತೆಗೆಯುತ್ತಿದ್ದಿರಿ. ನೀವು ಸ್ಪಷ್ಟ ಪುರಾವೆಗಳೊಂದಿಗೆ ಇಸ್ರಾಈಲರ ಸಂತತಿಗಳ ಬಳಿಗೆ ಬಂದಿದ್ದಾಗ (ನಿಮ್ಮ ಮೇಲೆ ಕೈ ಎತ್ತದಂತೆ) ಅವರನ್ನು ನಾನು ತಡೆದಿದ್ದೆನು. ಅವರಲ್ಲಿನ ಧಿಕ್ಕಾರಿಗಳು, "ಇದು ಸ್ಪಷ್ಟ ಮಾಟಗಾರಿಕೆಯಲ್ಲದೆ ಬೇರೇನೂ ಅಲ್ಲ" ಎಂದರು.

6:114. (ದೂತರೇ,) "ಅವನು (ಅಲ್ಲಾಹನು) ಸವಿಸ್ತಾರವಾದ ಗ್ರಂಥವನ್ನು ನಿಮ್ಮೆಡೆಗೆ ಇಳಿಸಿಕೊಟ್ಟಿರುವಾಗ, ನಾನೇನು ಅಲ್ಲಾಹನನ್ನು ಬಿಟ್ಟು ತೀರ್ಪುಗಾರನಾಗಿ ಬೇರೊಬ್ಬನನ್ನು ಹುಡುಕಬೇಕೇ?" ಎಂದು ಕೇಳಿರಿ. ನಾವು ಯಾರಿಗೆ ಗ್ರಂಥವನ್ನು ನೀಡಿರುವೆವೋ ಅವರಿಗೆ, ಅದು (ಕುರ್‌ಆನ್) ನಿಮ್ಮೊಡೆಯನ ಕಡೆಯಿಂದ, ಸತ್ಯದೊಂದಿಗೆ ಇಳಿಸಲಾಗಿರುವ ಗ್ರಂಥವೆಂದು ಖಚಿತವಾಗಿ ತಿಳಿದಿದೆ. ನೀವೀಗ ಸಂಶಯಿಸುವವರ ಸಾಲಿಗೆ ಸೇರಬೇಡಿ.

6:154. ನಾವು ಮೂಸಾರಿಗೆ ಗ್ರಂಥವನ್ನು ನೀಡಿದೆವು – ಸತ್ಕರ್ಮಿಯ ಪಾಲಿಗೆ ನಮ್ಮ ಅನುಗ್ರಹವನ್ನು ಪರಿಪೂರ್ಣಗೊಳಿಸಲಿಕ್ಕಾಗಿ, ಎಲ್ಲ ವಿಷಯಗಳ

ವಿವರವನ್ನು ಒದಗಿಸಲಿಕ್ಕಾಗಿ ಮತ್ತು ಮಾರ್ಗದರ್ಶನ ಹಾಗೂ ಅನುಗ್ರಹವಾಗಿ – ಅವರು ತಮ್ಮ ಒಡೆಯನನ್ನು ಭೇಟಿಯಾಗಲಿಕ್ಕಿರುವುದನ್ನು ನಂಬಲೆಂದು.

7:157. ಅವರು ನಿರಕ್ಷರಿ ಪ್ರವಾದಿಯನ್ನು ಅನುಸರಿಸುತ್ತಾರೆ. ಅವರ (ಆ ಪ್ರವಾದಿಯ) ಕುರಿತು ತಮ್ಮ ಬಳಿ ಇರುವ ತೌರಾತ್ ಮತ್ತು ಇಂಜೀಲ್‌ಗಳಲ್ಲಿ (ಈ ರೀತಿ) ಬರೆದಿರುವುದನ್ನು ಅವರು ಕಾಣುತ್ತಾರೆ; "ಅವರು (ಆ ಪ್ರವಾದಿ) ಅವರಿಗೆ, ಒಳಿತನ್ನು ಆದೇಶಿಸುವರು, ಅವರನ್ನು ಕೆಡುಕಿನಿಂದ ತಡೆಯುವರು, ನಿರ್ಮಲವಾದವುಗಳನ್ನು ಅವರ ಪಾಲಿಗೆ ಸಮ್ಮತಗೊಳಿಸುವರು, ಮಲಿನ ವಸ್ತುಗಳನ್ನು ಅವರ ಪಾಲಿಗೆ ನಿಷೇಧಿಸುವರು, ಅವರಿಂದ ಅವರ ಭಾರಗಳನ್ನು ಇಳಿಸುವರು ಮತ್ತು ಅವರ ಮೇಲಿದ್ದ ನೊಗಗಳನ್ನು ಕಳಚುವರು – ಅವರಲ್ಲಿ ನಂಬಿಕೆ ಇಟ್ಟು ಅವರನ್ನು ಸಮರ್ಥಿಸುವವರು, ಅವರಿಗೆ ನೆರವಾಗುವವರು ಮತ್ತು ಅವರ ಜೊತೆಗೆ ಇಳಿಸಲಾಗಿರುವ ಪ್ರಕಾಶವನ್ನು ಅನುಸರಿಸುವವರೇ ವಿಜಯಿಗಳು."

7:158. (ದೂತರೇ) ಹೇಳಿರಿ; ಮಾನವರೇ, ನಾನು ನಿಮ್ಮೆಲ್ಲರ ಪಾಲಿಗೆ ಅಲ್ಲಾಹನ ದೂತನಾಗಿರುವೆನು. ಆಕಾಶಗಳ ಮತ್ತು ಭೂಮಿಯ ಆಧಿಪತ್ಯವು ಅವನಿಗೆ (ಅಲ್ಲಾಹನಿಗೆ) ಸೇರಿದೆ. ಅವನ ಹೊರತು ಬೇರೆ ದೇವರಿಲ್ಲ. ಅವನೇ ಜೀವಂತಗೊಳಿಸುವವನು ಮತ್ತು ಮರಣ ನೀಡುವವನು. ನೀವೀಗ ಅಲ್ಲಾಹನಲ್ಲೂ ಆತನ ದೂತನಲ್ಲೂ ನಂಬಿಕೆ ಇಡಿರಿ – ಅವರು ನಿರಕ್ಷರಿ ಪ್ರವಾದಿಯಾಗಿದ್ದು, ಅಲ್ಲಾಹನಲ್ಲಿ ಹಾಗೂ ಅವನ ವಚನಗಳಲ್ಲಿ ನಂಬಿಕೆ ಉಳ್ಳವರಾಗಿದ್ದಾರೆ. ಮಾರ್ಗದರ್ಶನ ಪಡೆಯಲಿಕ್ಕಾಗಿ ನೀವು ಅವರನ್ನು ಅನುಸರಿಸಿ.

9:30. ಯಹೂದಿಗಳು, ಉಝೈರ್ ಅಲ್ಲಾಹನ ಪುತ್ರರೆಂದು ಹೇಳುತ್ತಾರೆ ಮತ್ತು ಕ್ರೈಸ್ತರು ಮಸೀಹರು ಅಲ್ಲಾಹನ ಪುತ್ರರೆಂದು ಹೇಳುತ್ತಾರೆ. ಇದು ಕೇವಲ ಅವರ ಬಾಯಿ ಮಾತು. ಅವರು ಗತಕಾಲದ ಧಿಕ್ಕಾರಿಗಳ ಮಾತನ್ನೇ ಅನುಕರಿಸುತ್ತಿದ್ದಾರೆ. ಅವರ ಮೇಲೆ ಅಲ್ಲಾಹನ ಪ್ರಹಾರವಿದೆ. ಅವರು ದಾರಿಗೆಟ್ಟು ಅದೆಲ್ಲಿ ಅಲೆಯುತ್ತಿದ್ದಾರೆ?

9:31. ಅವರು ಅಲ್ಲಾಹನ ಹೊರತಾಗಿ, ತಮ್ಮ ವಿದ್ವಾಂಸರನ್ನು, ಸನ್ಯಾಸಿಗಳನ್ನು ಮತ್ತು ಮರ್ಯಮರ ಪುತ್ರ ಮಸೀಹರನ್ನು ದೇವರಾಗಿಸಿಕೊಂಡಿದ್ದಾರೆ. ನಿಜವಾಗಿ ಅವರಿಗೆ, ಒಬ್ಬ ದೇವರ ಹೊರತು ಬೇರೆ ಯಾರನ್ನೂ ಪೂಜಿಸಬಾರದೆಂದು ಆದೇಶಿಸಲಾಗಿದೆ. ಅವನ ಹೊರತು ಬೇರೆ ಯಾರೂ ಪೂಜಾರ್ಹರಲ್ಲ. ಅವರು ಪಾಲುಗೊಳಿಸುವ ಎಲ್ಲದರಿಂದ ಅವನು ಸಂಪೂರ್ಣ ಮುಕ್ತನು.

9:111. ಖಂಡಿತವಾಗಿಯೂ ಅಲ್ಲಾಹನು ವಿಶ್ವಾಸಿಗಳಿಂದ ಅವರ ಜೀವಗಳನ್ನು ಮತ್ತು ಅವರ ಸೊತ್ತುಗಳನ್ನು ಖರೀದಿಸಿರುವನು – ಅವರಿಗೆ ಸ್ವರ್ಗವನ್ನು ನೀಡಲಿಕ್ಕಾಗಿ. ಅವರು ಅಲ್ಲಾಹನ ಮಾರ್ಗದಲ್ಲೇ ಹೋರಾಡುತ್ತಾರೆ, ವಧಿಸುತ್ತಾರೆ ಮತ್ತು ವಧಿಸಲ್ಪಡುತ್ತಾರೆ. ತೌರಾತ್, ಇಂಜೀಲ್ ಮತ್ತು ಕುರ್‌ಆನ್‌ನಲ್ಲಿ ಅವರಿಗೆ ನೀಡಲಾಗಿರುವ ವಾಗ್ದಾನವು ಸತ್ಯವಾಗಿದೆ. ಅಲ್ಲಾಹನಿಗಿಂತ ಉತ್ತಮವಾಗಿ ತನ್ನ ಕರಾರನ್ನು ಪಾಲಿಸುವವನು ಯಾರಿದ್ದಾನೆ? ಆದ್ದರಿಂದ ಅವನ ಜೊತೆ ನೀವು ಮಾಡಿಕೊಂಡಿರುವ ವ್ಯವಹಾರಕ್ಕಾಗಿ ಸಂಭ್ರಮಿಸಿರಿ. ಇದು ನಿಜಕ್ಕೂ ಮಹಾ ವಿಜಯವಾಗಿದೆ.

10:37. ಈ ಕುರ್‌ಆನ್, ಅಲ್ಲಾಹನ ಹೊರತು ಬೇರೆ ಯಾರಾದರೂ ರಚಿಸಬಹುದಾದ ಕೃತಿಯಲ್ಲ . ನಿಜವಾಗಿ ಇದು, ಈಗಾಗಲೇ ತನ್ನ ಮುಂದಿರುವವುಗಳನ್ನು (ಗತಕಾಲದ ದಿವ್ಯ ಗ್ರಂಥಗಳನ್ನು) ಸಮರ್ಥಿಸುತ್ತದೆ ಮತ್ತು ದಿವ್ಯ ಆದೇಶಗಳನ್ನು ವಿವರಿಸುತ್ತದೆ. ಇದು ಸರ್ವಲೋಕಗಳ ಒಡೆಯನ ಕಡೆಯಿಂದ ಬಂದಿದೆ ಎಂಬ ಬಗ್ಗೆ ಸಂದೇಹವೇ ಇಲ್ಲ.

10:94. (ದೂತರೇ,) ಒಂದು ವೇಳೆ ನಾವು ನಿಮ್ಮೆಡೆಗೆ ಇಳಿಸಿ ಕೊಟ್ಟಿರುವ ಸಂದೇಶದ ಕುರಿತು ನಿಮಗೆ ಸಂಶಯವಿದ್ದರೆ, ನಿಮಗಿಂತ ಹಿಂದೆ ಬಂದ ಗ್ರಂಥಗಳನ್ನು ಓದುತ್ತಿರುವವರೊಡನೆ ವಿಚಾರಿಸಿರಿ. ನಿಮ್ಮ ಒಡೆಯನ ಕಡೆಯಿಂದ ನಿಮ್ಮ ಬಳಿಗೆ ಸತ್ಯವು ಬಂದು ಬಿಟ್ಟಿದೆ. ನೀವಿನ್ನು ಸಂಶಯಿಸುವವರಾಗಬೇಡಿ.

12:111. ಬುದ್ಧಿ ಉಳ್ಳವರಿಗೆ ಅವರ ಕಥೆಗಳಲ್ಲಿ ಖಂಡಿತ ಪಾಠವಿದೆ. ಇದು ಸ್ವರಚಿತ ಹೇಳಿಕೆಯೇನಲ್ಲ. ನಿಜವಾಗಿ ಇದು ಈಗಾಗಲೇ ಇರುವುದರ (ಗತಕಾಲದ ಗ್ರಂಥಗಳಲ್ಲಿರುವ ಸತ್ಯದ) ಸಮರ್ಥನೆಯಾಗಿದೆ, ಎಲ್ಲ ವಿಷಯಗಳ ವಿವರವಾಗಿದೆ ಮತ್ತು ನಂಬುವವರ ಪಾಲಿಗೆ ಮಾರ್ಗದರ್ಶಿ ಹಾಗೂ ಅನುಗ್ರಹವಾಗಿದೆ.

15:2. ತಾವು ಮುಸ್ಲಿಮರಾಗಿದ್ದರೆ ಎಷ್ಟು ಚೆನ್ನಾಗಿತ್ತು ಎಂದು ಧಿಕ್ಕಾರಿಗಳು ಅಪಾರ ಆಶೆ ಪಡುವರು. 3. ಸದ್ಯ ಅವರನ್ನು ಬಿಟ್ಟು ಬಿಡಿರಿ. ಅವರು ತಿನ್ನುತ್ತಲೂ, ಸುಖ ಭೋಗಗಳಲ್ಲೂ ತಲ್ಲೀನರಾಗಿರಲಿ. ಅವರ ಹುಸಿ ನಿರೀಕ್ಷೆಯು ಅವರನ್ನು ಭ್ರಮೆಯಲ್ಲಿರಿಸಲಿ. (ವಾಸ್ತವವನ್ನು) ಅವರು ಬಹುಬೇಗನೇ ಅರಿಯುವರು. 4. ಒಂದು ಉಚಿತ ಕಾಲವನ್ನು ನಿಗದಿಪಡಿಸದೆ ನಾವು ಯಾವ ಜನಾಂಗವನ್ನೂ ನಾಶ ಮಾಡಿದ್ದಿಲ್ಲ. 5. ತನ್ನ ನಿಗದಿತ ಅವಧಿಯನ್ನು ಮೀರಿ ಮುನ್ನಡೆಯಲು ಅಥವಾ ಅದರಿಂದ ಹಿಂದೆ ಉಳಿಯಲು ಯಾವ ಸಮುದಾಯಕ್ಕೂ ಸಾಧ್ಯವಾಗದು. 6. ಅವರು (ಧಿಕ್ಕಾರಿಗಳು)

ಹೇಳಿದರು; "ದಿವ್ಯ ಉಪದೇಶ ಇಳಿಸಿ ಕೊಡಲಾಗಿರು ವವನೇ, ನೀನೊಬ್ಬ ಹುಚ್ಚನೇ ಸರಿ. 7. ನೀನು ಸತ್ಯವಂತನಾಗಿದ್ದರೆ, ನೀನೇಕೆ ನಮ್ಮ ಬಳಿಗೆ ದೇವರುಗಳನ್ನು ಕರೆತರುವುದಿಲ್ಲ?" 8. ನಿಜವಾಗಿ ನಾವು ದೇವರುಗಳನ್ನು ಸತ್ಯದೊಂದಿಗೆ ಮಾತ್ರ ಕಳುಹಿಸುತ್ತೇವೆ. ಆದರೆ ಆಗ ಅವರಿಗೆ (ಧಿಕ್ಕಾರಿಗಳಿಗೆ) ಹೆಚ್ಚಿನ ಕಾಲಾವಧಿ ನೀಡಲಾಗುವುದಿಲ್ಲ. 9. ಖಂಡಿತವಾಗಿಯೂ ನಾವೇ ಈ ದಿವ್ಯ ಬೋಧನೆಯನ್ನು ಇಳಿಸಿ ಕೊಟ್ಟವರು ಮತ್ತು ಖಂಡಿತವಾಗಿಯೂ ನಾವೇ ಇದರ ಸಂರಕ್ಷಕರಾಗಿದ್ದೇವೆ. 10. ನಿಮಗಿಂತ ಹಿಂದಿನ ಜನವರ್ಗಗಳಲ್ಲೂ ನಾವು (ದೂತರನ್ನು) ರವಾನಿಸಿದ್ದೆವು. 11. ಅವರ ಬಳಿಗೆ ಬಂದ ದೂತರಲ್ಲಿ ಯಾರೂ ಅಪಹಾಸ್ಯಕ್ಕೆ ತುತ್ತಾಗದೆ ಇರಲಿಲ್ಲ. 12. ಈ ರೀತಿ ನಾವು ಅದನ್ನು (ಅಪಹಾಸ್ಯವನ್ನು) ಅಪರಾಧಿಗಳ ಮನಸ್ಸುಗಳೊಳಗೆ ಚಿತ್ತಿರುತ್ತೇವೆ. 13. ಅವರು ಇದನ್ನು (ಈ ಉಪದೇಶವನ್ನು) ನಂಬಲಾರರು. ಅದುವೇ, ಹಿಂದಿನವರ ಸಂಪ್ರದಾಯವಾಗಿದೆ.

15:90. (ಈ ಹಿಂದೆ) ವಿಭಜನವಾದಿಗಳ ಮೇಲೆ ನಾವು (ಶಿಕ್ಷೆಯನ್ನು) ಎರಗಿಸಿದ್ದೆವು.

15:91. ಅವರು ಕುರ್‌ಆನನ್ನು ಛಿದ್ರಗೊಳಿಸಿದ್ದರು (ತಾವಿಚ್ಛಿಸಿದ್ದನ್ನು ಪಾಲಿಸಿ, ಉಳಿದುದನ್ನು ತಿರಸ್ಕರಿಸಿದ್ದರು).

16:43. (ದೂತರೇ,) ನಿಮಗಿಂತ ಹಿಂದೆಯೂ ನಾವು ಪುರುಷರನ್ನೇ ದೂತರಾಗಿ ರವಾನಿಸಿ, ಅವರೆಡೆಗೆ ದಿವ್ಯ ಸಂದೇಶವನ್ನು ಕಳುಹಿಸಿದ್ದೆವು. ನಿಮಗೆ ತಿಳಿದಿಲ್ಲವಾದರೆ (ಈ ಹಿಂದಿನ ದಿವ್ಯ ಗ್ರಂಥಗಳನ್ನು) ಬಲ್ಲವರೊಡನೆ ಕೇಳಿ ನೋಡಿರಿ.

17:2. ನಾವು ಮೂಸಾರಿಗೆ ಗ್ರಂಥವನ್ನು ನೀಡಿದೆವು ಮತ್ತು ಅದನ್ನು ಇಸ್ರಾಈಲರ ಸಂತತಿಗಳಿಗೆ ಮಾರ್ಗದರ್ಶಿಯಾಗಿ ಮಾಡಿದೆವು – ನೀವು ನನ್ನ ಹೊರತು ಬೇರೆ ಯಾರನ್ನೂ ಕಾರ್ಯ ಸಾಧಕನಾಗಿ ಅಂಗೀಕರಿಸಬಾರದು (ಎಂದು ಅದರಲ್ಲಿ ಬೋಧಿಸಲಾಗಿತ್ತು).

17:4. ನಾವು ಇಸ್ರಾಈಲರ ಸಂತತಿಗಳಿಗೆ ಗ್ರಂಥದಲ್ಲೇ (ಹೀಗೆಂದು) ತಿಳಿಸಿಬಿಟ್ಟಿದ್ದೆವು: ನೀವು ಭೂಮಿಯಲ್ಲಿ ಎರಡು ಬಾರಿ ಅಶಾಂತಿಯನ್ನು ಹಬ್ಬುವಿರಿ ಮತ್ತು ಭಾರೀ ಪ್ರಕ್ಷೋಭೆಯನ್ನುಂಟು ಮಾಡುವಿರಿ.

ಏಸು ಕ್ರಿಸ್ತನ ಜನನದ ಉಲ್ಲೇಕ:– (ಕ್ರೈಸ್ತರನ್ನು ಪರಿವರ್ತಿಸಲು ಅಂದೇ ತಂತ್ರ ಹೆಣೆಯಲಾಗಿತ್ತೆ ? ಕ್ರೈಸ್ತರ ದೇವರ ಮೂಲಕ್ಕೇ ಗುನ್ನಾ ಹಾಕಿದೆಯಾ ಖುರಾನ್ ?

19:7. (ಅಲ್ಲಾಹನು ಹೇಳಿದನು;) ಓ ಝಕರಿಯ್ಯ! ಇದೋ ನಾವು ನಿಮಗೆ ಒಬ್ಬ ಪುತ್ರನ ಶುಭವಾರ್ತೆ ನೀಡುತ್ತೇವೆ. ಆತನ ಹೆಸರು ಯಹ್ಯಾ ಎಂದಾಗಿರುವುದು. ನಾವು ಈ ಹಿಂದೆ ಯಾರಿಗೂ ಅಂತಹ ಹೆಸರಿಟ್ಟಿಲ್ಲ.

19:8. ಅವರು ಹೇಳಿದರು; ನನಗೆ ಪುತ್ರನಾಗುವುದಾದರೂ ಹೇಗೆ? ನನ್ನ ಪತ್ನಿ ಬಂಜೆಯಾಗಿದ್ದಾಳೆ ಮತ್ತು ನಾನು ವೃದ್ಧಾಪ್ಯದ ಕೊನೆಯ ಹಂತದಲ್ಲಿದ್ದೇನೆ.

19:12. ಓ ಯಹ್ಯಾ! ಗ್ರಂಥವನ್ನು ಬಲವಾಗಿ ಹಿಡಿಯಿರಿ (ಎಂದು ಯಹ್ಯಾರಿಗೆ ಆದೇಶಿಸಲಾಯಿತು.) ಮತ್ತು ನಾವು ಬಾಲ್ಯದಲ್ಲೇ ಅವರಿಗೆ ತೀರ್ಮಾನದ ಸಾಮರ್ಥ್ಯವನ್ನು ನೀಡಿದ್ದೆವು.

19:30. ಆಗ ಅದು(ಮಗು) ಹೇಳಿತು; ನಾನು ಖಂಡಿತ, ಅಲ್ಲಾಹನ ದಾಸನು. ಅವನು ನನಗೆ ಗ್ರಂಥವನ್ನು ನೀಡಿರುವನು ಹಾಗೂ ನನ್ನನ್ನು ಪ್ರವಾದಿಯಾಗಿ ನೇಮಿಸಿರುವನು.

19:34. ಇದು, ಮರ್ಯಮ್‌ರ ಪುತ್ರ ಈಸಾ ಅವರ ಕುರಿತಂತೆ ಜನರು ಜಗಳಾಡುತ್ತಿರುವ ವಿಷಯಗಳ ಸತ್ಯಾಂಶ.

19:35. ಯಾರನ್ನಾದರೂ ತನ್ನ ಪುತ್ರನಾಗಿಸಿಕೊಳ್ಳುವುದು ಅಲ್ಲಾಹನಿಗೆ ಭೂಷಣವಲ್ಲ. ಅವನು ಪಾವನನು. ಅವನು ಏನನ್ನಾದರೂ ನಿರ್ಧರಿಸಿದರೆ, ಅದರೊಡನೆ 'ಆಗು' ಎಂದಷ್ಟೇ ಹೇಳುತ್ತಾನೆ ಮತ್ತು ಅದು ಆಗಿ ಬಿಡುತ್ತದೆ.

19:36. ಖಂಡಿತವಾಗಿಯೂ ಅಲ್ಲಾಹನೇ ನನ್ನ ಒಡೆಯನೂ ನಿಮ್ಮ ಒಡೆಯನೂ ಆಗಿದ್ದಾನೆ. ಆದ್ದರಿಂದ ನೀವು ಅವನನ್ನೇ ಪೂಜಿಸಿರಿ. ಇದುವೇ ನೇರ ಮಾರ್ಗ.

19:98. ಅವರಿಗಿಂತ ಮುಂಚೆ ನಾವು ಅದೆಷ್ಟೋ ಪೀಳಿಗೆಗಳನ್ನು ನಾಶ ಮಾಡಿರುವೆವು – ಇಂದು ಅವರಲ್ಲೊಬ್ಬರಾದರೂ ನಿಮಗೆ ಕಾಣಸಿಗುತ್ತಾರೆಯೇ? ಅಥವಾ ಅವರ ಸಪ್ಪಳವೇನಾದರೂ ನಿಮಗೆ ಕೇಳಿಸುತ್ತದೆಯೇ?

20:133. "ಆತನು ತನ್ನ ಒಡೆಯನ ಕಡೆಯಿಂದ ನಮ್ಮ ಬಳಿಗೆ ಯಾವುದೇ ಪುರಾವೆಯನ್ನೇಕೆ ತಂದಿಲ್ಲ?" ಎಂದು ಅವರು ಕೇಳುತ್ತಾರೆ. ಗತಕಾಲದ ಗ್ರಂಥಗಳಲ್ಲಿರುವ ಸ್ಪಷ್ಟ ಪುರಾವೆಗಳು ಅವರ ಬಳಿಗೆ ಬಂದಿಲ್ಲವೇ?

21:7. (ದೂತರೇ,) ನಿಮಗಿಂತ ಮುಂಚೆಯೂ ನಾವು (ದೂತರಾಗಿ) ಮಾನವರನ್ನು ಮಾತ್ರ ಕಳುಹಿಸಿದ್ದೆವು. ನಾವು ಅವರಿಗೆ ದಿವ್ಯವಾಣಿಯನ್ನು ತಲುಪಿಸಿದ್ದೆವು. (ಜನರೇ) ನಿಮಗೆ ತಿಳಿದಿಲ್ಲವಾದರೆ ಬಲ್ಲವರೊಡನೆ ಕೇಳಿರಿ.

21:48. ನಾವು ಮೂಸಾ ಮತ್ತು ಹಾರೂನರಿಗೆ ಅಲ್‌ಫುರ್‌ಕಾನ್ ಅನ್ನು (ಸತ್ಯ – ಮಿಥ್ಯಗಳನ್ನು ಪ್ರತ್ಯೇಕಿಸಿ ತಿಳಿಸುವ ಗ್ರಂಥವನ್ನು) ಮತ್ತು ಸತ್ಯನಿಷ್ಠರ ಪಾಲಿಗೆ ಜ್ಯೋತಿ ಹಾಗೂ ಉಪದೇಶವನ್ನು ನೀಡಿದೆವು.

21:105. ನಾವು ಝುಬೂರ್‌ನಲ್ಲಿ ಉಪದೇಶದ ಬಳಿಕ, "ನನ್ನ ಸಜ್ಜನ ದಾಸರೇ ಭೂಮಿಯ ಉತ್ತರಾಧಿಕಾರಿಗಳಾಗುವರು" ಎಂದು ಬರೆದಿರುವೆವು.

25:35. ನಾವು ಮೂಸಾರಿಗೆ ಗ್ರಂಥವನ್ನು ನೀಡಿದ್ದೆವು ಮತ್ತು ಅವರ ಸಹೋದರ ಹಾರೂನರನ್ನು ಅವರ ಸಹಾಯಕರಾಗಿ ಅವರ ಜೊತೆ ಕಳಿಸಿದ್ದೆವು.

26:2 ಹಿಲಲಿ ಮತ್ತು ಖಾನ್ ಅನುವಾದದಂತೆ – ಇವುಗಳು ಸ್ಪಷ್ಟವಾದ ಪುಸ್ತಕದ ಶ್ಲೋಕಗಳಾಗಿವೆ (ಈ ಖುರಾನ್, ತೌರಾತ್ (ತೋರಾ) ಮತ್ತು ಇಂಜೀಲ್ನಲ್ಲಿ (ಗಾಸ್ಪೆಲ್) ಸ್ಪಷ್ಟಪಡಿಸಿದವುಗಳಲ್ಲಿ ಅಲ್ಲಾ ಭರವಸೆ ನೀಡಲ್ಪಟ್ಟಿತು).

26:196 ಹಿಲಲಿ ಮತ್ತು ಖಾನ್ ಅನುವಾದದಂತೆ – ಮತ್ತು ಖಂಡಿತವಾಗಿ, ಇದು (ಖುರಾನ್ ಮತ್ತು ಪ್ರವಾದಿ ಮುಹಮ್ಮದ್ ಅವರಿಗೆ ನೀಡಿದ ಸಾಕ್ಷಾತ್ಕಾರವು) ಗ್ರಂಥಗಳಲ್ಲಿದೆ (ಘೋಷಿಸಿ ಆಗಿದೆ) (ಅಂದರೆ ಹಿಂದಿನ ಜನರ ತೌರಾತ್ (ಟೋರಾ) ಮತ್ತು ಇಂಜೀಲ್ (ಸುವಾರ್ತೆ).

28:43. ನಾವು ಗತಕಾಲದ ಕೆಲವು ಜನಾಂಗಗಳನ್ನು ನಾಶಪಡಿಸಿದ ಬಳಿಕ, ಮೂಸಾರಿಗೆ ಗ್ರಂಥವನ್ನು ನೀಡಿದೆವು. ಜನರ ಕಣ್ಣು ತೆರೆಸುವ, ದಾರಿ ತೋರುವ ಮತ್ತು ಅನುಗ್ರಹವಾಗಿರುವ ಗ್ರಂಥ – ಅವರು (ಜನರು) ಉಪದೇಶ ಸ್ವೀಕರಿಸಲೆಂದು.

28:48. ನಮ್ಮ ಕಡೆಯಿಂದ ಸತ್ಯವು ತಮ್ಮ ಬಳಿಗೆ ಬಂದಾಗ, ಅವರು, "ಮೂಸಾರಿಗೆ ನೀಡಲಾದುದನ್ನು ನಮಗೇಕೆ ನೀಡಲಾಗಿಲ್ಲ?" ಎಂದರು. ಈ ಹಿಂದೆ ಅವರು, ಮೂಸಾರಿಗೆ ನೀಡಲಾದುದನ್ನು ಧಿಕ್ಕರಿಸಿರಲಿಲ್ಲವೇ? ಆಗ ಅವರು, ಇವೆರಡೂ ಪರಸ್ಪರ ಪೂರಕವಾಗಿರುವ ಮಾಟಗಾರಿಕೆಗಳು ಎಂದಿದ್ದರು ಮತ್ತು ನಾವು ಎಲ್ಲವನ್ನೂ ಧಿಕ್ಕರಿಸುತ್ತೇವೆ ಎಂದಿದ್ದರು.

28:49. ಹೇಳಿರಿ; ನೀವು ಸತ್ಯವಂತರಾಗಿದ್ದರೆ, ಇವೆರಡಕ್ಕಿಂತ (ಕುರ್‌ಆನ್ ಮತ್ತು ತೌರಾತ್‌ಗಿಂತ) ಹೆಚ್ಚು ಮಾರ್ಗದರ್ಶಿಯಾದ ಒಂದು ಗ್ರಂಥವನ್ನು ಅಲ್ಲಾಹನ ಕಡೆಯಿಂದ ತಂದು ಕೊಡಿರಿ. ನಾನೂ ಅದನ್ನೇ ಅನುಸರಿಸುವೆನು.

28:52. ನಾವು ಇದಕ್ಕಿಂತ (ಕುರ್‌ಆನ್‌ಗಿಂತ) ಮುಂಚೆ ಯಾರಿಗೆ ಗ್ರಂಥ ನೀಡಿದ್ದೆವೋ ಅವರು ಇದರಲ್ಲಿ ನಂಬಿಕೆ ಇಡುತ್ತಾರೆ.

29:46. ಗ್ರಂಥದವರೊಡನೆ ನೀವು ಸದಾ ಅತ್ಯುತ್ತಮ ರೀತಿಯಲ್ಲೇ ಸಂವಾದ ನಡೆಸಿರಿ – ಅವರಲ್ಲಿನ ಅಕ್ರಮಿಗಳನ್ನು ಬಿಟ್ಟು. ನೀವು ಹೇಳಿರಿ; "ನಾವಂತು, ನಮಗೆ ಇಳಿಸಿಕೊಡಲಾಗಿರುವುದನ್ನೂ (ಕುರ್‌ಆನ್‌ಅನ್ನೂ) ನಿವುಗೆ ಇಳಿಸಿ ಕೊಡಲಾಗಿರುವುದನ್ನೂ (ತೌರಾತ್, ಇನ್‌ಜೀಲ್ ಇತ್ಯಾದಿಗಳನ್ನೂ) ನಂಬಿರುವೆವು. ನಮ್ಮ ದೇವರೂ ನಿಮ್ಮ ದೇವರೂ ಒಬ್ಬನೇ ಮತ್ತು ನಾವು ಅವನಿಗೆ ಶರಣಾಗಿರುವೆವು".

29:47. (ದೂತರೇ,) ಈ ರೀತಿ ನಾವು ನಿಮಗೆ ಈ ಗ್ರಂಥವನ್ನು ಇಳಿಸಿಕೊಟ್ಟಿರುವೆವು. ನಾವು ಯಾರಿಗೆ ಗ್ರಂಥವನ್ನು ನೀಡಿರುವೆವೋ ಅವರು ಇದನ್ನು ನಂಬುತ್ತಾರೆ. ಮತ್ತು ಇವರಲ್ಲೂ (ಮಕ್ಕಃದವರಲ್ಲೂ) ಇದನ್ನು ನಂಬುವ ಕೆಲವರಿದ್ದಾರೆ. ಧಿಕ್ಕಾರಿಗಳು ಮಾತ್ರವೇ ನಮ್ಮ ವಚನಗಳ ವಿರುದ್ಧ ಜಗಳಾಡುತ್ತಾರೆ.

45:16. ಇಸ್ರೇಲರ ಸಂತತಿಗಳಿಗೆ ನಾವು ಗ್ರಂಥವನ್ನು, ಅಧಿಕಾರವನ್ನು ಹಾಗೂ ಪ್ರವಾದಿತ್ವವನ್ನು ನೀಡಿದೆವು ಮತ್ತು ನಾವು ಅವರಿಗೆ ಶುದ್ಧ ಆಹಾರವನ್ನು ದಯಪಾಲಿಸಿದೆವು ಹಾಗೂ ಅವರಿಗೆ ಸರ್ವಲೋಕಗಳ ಇತರೆಲ್ಲರಿಗಿಂತ ಶ್ರೇಷ್ಠ ಸ್ಥಾನವನ್ನು ಕರುಣಿಸಿದೆವು.

29:48. (ದೂತರೇ,) ಈ ಹಿಂದೆ ನೀವು ಯಾವುದೇ ಗ್ರಂಥವನ್ನು ಓದಿರಲಿಲ್ಲ ಮತ್ತು ನೀವು ನಿಮ್ಮ ಕೈಯಿಂದ ಏನನ್ನೂ ಬರೆದಿರಲಿಲ್ಲ. ಅನ್ಯಥಾ ಮಿಥ್ಯವಾದಿಗಳು ಸಂಶಯ ಪಡುತ್ತಿದ್ದರು. (ಪ್ರವಾದಿಗಳು ಹಿಂದೆ ಗ್ರಂಥಗಳನ್ನು ಓದಿರಲಿಲ್ಲ ಈಗ ಹಿಂದಿನ ಗ್ರಂಥಗಳ ಬಗ್ಗೆ ಹೇಳುವಾಗ ಜನರು ಪ್ರವಾದಿಗಳನ್ನು ಸಂಶಯ ಪಡುತ್ತಾರೆ ಎಂಬುದಕ್ಕೇ ಅಲ್ಲಾಹರೆ ಪ್ರವಾದಿಯ ಮುಖಾಂತರ ಹೀಗೆ ಹೇಳಿಸಿದ್ದಾರಂತೆ)

29:49. ಬಹಳ ಸ್ಪಷ್ಟವಾಗಿರುವ ಈ ವಚನಗಳು ಜ್ಞಾನಿಗಳ ಮನಸ್ಸುಗಳಲ್ಲಿ ಸುರಕ್ಷಿತವಾಗಿವೆ. ಅಕ್ರಮಿಗಳ ಹೊರತು ಬೇರೆ ಯಾರೂ ನಮ್ಮ ವಚನಗಳ ವಿಷಯಗಳಲ್ಲಿ ಜಗಳಾಡುವುದಿಲ್ಲ.

32:23. ನಾವು ಈ ಹಿಂದೆ ಮೂಸಾರಿಗೆ, ಗ್ರಂಥವನ್ನು ನೀಡಿದ್ದೆವು. ಅವನನ್ನು (ಅಲ್ಲಾಹನನ್ನು) ಭೇಟಿಯಾಗಲಿರುವ ಕುರಿತು ನೀವು ಸಂಶಯ ತಾಳಬೇಡಿ (ಎಂದು ಅದರಲ್ಲಿ ಉಪದೇಶಿಸಲಾಗಿತ್ತು). ನಾವು ಅದನ್ನು (ಆ ಗ್ರಂಥವನ್ನು) ಬನೀ ಇಸ್ರೇಲರ ಸಂತತಿಗಳಿಗೆ ಮಾರ್ಗದರ್ಶಿಯಾಗಿಸಿದ್ದೆವು.

40:53. ನಾವು ಮೂಸಾರಿಗೆ ಮಾರ್ಗದರ್ಶನ ನೀಡಿದ್ದೆವು ಮತ್ತು ಇಸ್ರೇಲರ ಸಂತತಿಗಳನ್ನು ಗ್ರಂಥದ (ತೌರಾತ್‌ನ) ಉತ್ತರಾಧಿಕಾರಿಗಳಾಗಿ ಮಾಡಿದೆವು.

42:15. (ದೂತರೇ,) ನೀವು ಇದರೆಡೆಗೆ (ಜನರನ್ನು) ಕರೆಯಿರಿ. ಮತ್ತು ನಿಮಗೆ ಆದೇಶಿಸಲಾಗಿರುವಂತೆ (ಸತ್ಯದಲ್ಲಿ) ಸ್ಥಿರರಾಗಿರಿ. ಮತ್ತು ನೀವು ಹೇಳಿರಿ; ಅಲ್ಲಾಹನು ಇಳಿಸಿರುವ ಎಲ್ಲ ಗ್ರಂಥಗಳಲ್ಲಿ ನಾನು ನಂಬಿಕೆ ಇಟ್ಟಿದ್ದೇನೆ. ನಿಮ್ಮ ನಡುವೆ ನ್ಯಾಯ ಪಾಲಿಸಬೇಕೆಂದು ನನಗೆ ಆದೇಶಿಸಲಾಗಿದೆ. ಅಲ್ಲಾಹನು ನಮ್ಮೊಡೆಯನೂ ಹೌದು ನಿಮ್ಮೊಡೆಯನೂ ಹೌದು. ನಮ್ಮ ಕರ್ಮಗಳು ನಮಗೆ ಮತ್ತು ನಿಮ್ಮ ಕರ್ಮಗಳು ನಿಮಗೆ. ನಮ್ಮ ಹಾಗೂ ನಿಮ್ಮ ನಡುವೆ ಜಗಳವೇನಿಲ್ಲ. (ಎಲ್ಲರೂ) ಅವನೆಡೆಗೇ ಮರಳಬೇಕಾಗಿದೆ.

45:17. ನಾವು ಅವರಿಗೆ ಬಹಳ ಸ್ಪಷ್ಟವಾದ ಆದೇಶಗಳನ್ನು ನೀಡಿದ್ದೆವು. ಆದರೆ ತಮ್ಮ ಬಳಿಗೆ ಜ್ಞಾನವು ಬಂದ ಬಳಿಕ ಅವರು ಕೇವಲ ಪರಸ್ಪರ ಹಗೆತನದಿಂದಾಗಿ ಭಿನ್ನಾಭಿಪ್ರಾಯ ತಾಳಿದರು.

48:29. ಮುಹಮ್ಮದರು ಅಲ್ಲಾಹನ ದೂತರು. ಅವರ ಜೊತೆಗಿರುವವರು ಧಿಕ್ಕಾರಿಗಳ ಪಾಲಿಗೆ ಕಠೋರರೂ ಪರಸ್ಪರ ಕರುಣಾಳುಗಳೂ ಆಗಿರುತ್ತಾರೆ. ಅವರು (ಅಲ್ಲಾಹನ ಮುಂದೆ) ಬಾಗುತ್ತಲೂ ಸಾಷ್ಟಾಂಗ ವೆರಗುತ್ತಲೂ ಇರುವುದನ್ನು ಮತ್ತು ಅಲ್ಲಾಹನ ಅನುಗ್ರಹ ಹಾಗೂ ಅವನ ಮೆಚ್ಚುಗೆಯನ್ನು ಅರಸುತ್ತಲಿರುವುದನ್ನು ನೀವು ಕಾಣುವಿರಿ. ಅವರ ಲಕ್ಷಣವೇನೆಂದರೆ, ಸಾಷ್ಟಾಂಗವಂದನೆಯ ಪ್ರಭಾವವು ಅವರ ಮುಖಗಳಲ್ಲಿರುವುದು. ತೌರಾತ್‌ನಲ್ಲಿ ಅವರ ಲಕ್ಷಣವು ಹೀಗೆಯೇ ಇದೆ ಮತ್ತು ಇಂಜೀಲ್‌ನಲ್ಲಿ ಅವರ ಲಕ್ಷಣವು ಹೀಗಿದೆ; ತನ್ನ ತೆನೆಯನ್ನು ಮೊಳೆಯಿಸುವ ಒಂದು ಹೊಲದಂತೆ. ಅದು ಅದನ್ನು ಬಲಪಡಿಸುತ್ತಿರುತ್ತದೆ. ಕೊನೆಗೆ ಅದು ಬಲಿಷ್ಠವಾಗಿ ಸ್ವತಃ ತನ್ನ ಕಾಂಡದ ಮೇಲೆ ನಿಲ್ಲುತ್ತದೆ. ಅದನ್ನು ಕಂಡು ಕೃಷಿಕರಿಗೆ ಸಂತಸವಾಗುತ್ತದೆ. ಧಿಕ್ಕಾರಿಗಳು ಉರಿದು ಬೀಳಲೆಂದು (ವಿಶ್ವಾಸಿಗಳನ್ನು ಈ ರೀತಿ ಬೆಳೆಸಲಾಗುತ್ತದೆ). ವಿಶ್ವಾಸಿಗಳಾಗಿದ್ದು ಸತ್ಕರ್ಮಗಳನ್ನು ಮಾಡುವವರಿಗೆ ಅಲ್ಲಾಹನು ಕ್ಷಮೆ ಹಾಗೂ ಮಹಾ ಪ್ರತಿಫಲದ ಭರವಸೆ ನೀಡಿರುವನು.

57:16. ವಿಶ್ವಾಸಿಗಳು ಅಲ್ಲಾಹನನ್ನು ನೆನಪಿಸುವುದಕ್ಕೆ ಮತ್ತು ಅವನು ಇಳಿಸಿ ಕೊಟ್ಟಿರುವ ಸತ್ಯಕ್ಕನುಸಾರವಾಗಿ ತಮ್ಮ ಮನಸ್ಸುಗಳಲ್ಲಿ ಭಕ್ತಿಯನ್ನು ಬೆಳೆಸಿಕೊಳ್ಳುವುದಕ್ಕೆ ಇನ್ನೂ ಸಮಯ ಬಂದಿಲ್ಲವೇ? ಅವರು ತಮಗಿಂತ ಹಿಂದೆ ಗ್ರಂಥ ನೀಡಲಾಗಿದ್ದವರಂತೆ ಆಗದಿರಲಿ. ಅವರಿಗೆ ಸಾಕಷ್ಟು ಧೀರ್ಘ ಕಾಲಾವಧಿ ನೀಡಲಾಗಿತ್ತು. ಆದರೆ ಅವರ ಮನಸ್ಸುಗಳು ಕಠಿಣವಾಗಿ ಬಿಟ್ಟವು. ಮತ್ತು ಅವರಲ್ಲಿ ಹೆಚ್ಚಿನವರು ಅವಿಧೇಯರಾಗಿದ್ದರು.

61:6. "ಇಸ್ರಾಈಲರ ಸಂತತಿಗಳೇ, ನಾನು ನಿಮ್ಮ ಬಳಿಗೆ ಅಲ್ಲಾಹನ ದೂತನಾಗಿ ಬಂದಿರುತ್ತೇನೆ. ನಿಮ್ಮ ಬಳಿ ಈಗಾಗಲೇ ಇರುವ ತೌರಾತನ್ನು ನಾನು ಸಮರ್ಥಿಸುತ್ತೇನೆ. ಮತ್ತು ನಾನು, ನನ್ನ ಬಳಿಕ ಬರಲಿರುವ ಅಹ್ಮದ್ ಎಂಬ ಹೆಸರಿನ ದೂತರ ಕುರಿತು ಶುಭವಾರ್ತೆ ನೀಡುವವನಾಗಿರುತ್ತೇನೆ" ಎಂದು ಮರ್ಯಮರ ಪುತ್ರ ಈಸಾ ಹೇಳಿದ್ದರು. ಕೊನೆಗೆ ಅವರು (ಆ ದೂತರು) ಸ್ಪಷ್ಟ ಪುರಾವೆಗಳೊಂದಿಗೆ ಅವರ ಬಳಿಗೆ ಬಂದಾಗ ಅವರು ಇದೆಲ್ಲಾ ಸ್ಪಷ್ಟ ಮಾಟಗಾರಿಕೆಯಾಗಿದೆ ಎಂದು ಬಿಟ್ಟರು.

62:5. ತೌರಾತಿನ ಹೊಣೆ ವಹಿಸಿ ಕೊಡಲಾದವರು ಮತ್ತು ಆ ಹೊಣೆಯನ್ನು ನಿರ್ವಹಿಸದೆ ಇದ್ದವರ ಉದಾಹರಣೆಯು ಗ್ರಂಥಗಳ ಹೊರೆ ಹೊತ್ತ ಕತ್ತೆಯಂತಿದೆ. ಅಲ್ಲಾಹನ ವಚನಗಳನ್ನು ತಿರಸ್ಕರಿಸಿದವರ ಸ್ಥಿತಿಯು ನಿಜಕ್ಕೂ ಕೆಟ್ಟದಾಗಿದೆ. ಅಲ್ಲಾಹನು ಅಕ್ರಮಿಗಳಿಗೆ ಸರಿದಾರಿಯನ್ನು ತೋರುವುದಿಲ್ಲ.

74:31. ನಾವು ದೇವದೂತರುಗಳನ್ನೇ ನರಕದ ಕಾವಲುಗಾರರಾಗಿಸಿರುವೆವು ಮತ್ತು ಅವರ ಸಂಖ್ಯೆಯನ್ನು ಧಿಕ್ಕಾರಿಗಳ ಪಾಲಿಗೆ ಪರೀಕ್ಷೆಯಾಗಿಸಿರುವೆವು – ಗ್ರಂಥದವರು ನಂಬಲೆಂದು ಹಾಗೂ ವಿಶ್ವಾಸಿಗಳ ವಿಶ್ವಾಸವು ಹೆಚ್ಚಲೆಂದು ಮತ್ತು ಗ್ರಂಥದವರಾಗಲಿ ವಿಶ್ವಾಸಿಗಳಾಗಲಿ ಸಂಶಯಕ್ಕೆ ತುತ್ತಾಗಬಾರದೆಂದು ಮತ್ತು ಮನಸ್ಸಿನಲ್ಲಿ ರೋಗವಿರುವವರು ಹಾಗೂ ಧಿಕ್ಕಾರಿಗಳು "ಈ ಉದಾಹರಣೆಯ ಮೂಲಕ ಅಲ್ಲಾಹನು ಬಯಸುವುದೇನನ್ನು?" ಎಂದು ಕೇಳಲೆಂದು. **ಈ ರೀತಿ ಅಲ್ಲಾಹನು ತಾನಿಚ್ಛಿಸಿದವರನ್ನು ದಾರಿಗೆಡಿಸುತ್ತಾನೆ. ಹಾಗೂ ತಾನಿಚ್ಛಿಸಿದವರಿಗೆ ಸರಿದಾರಿಯನ್ನು ತೋರುತ್ತಾನೆ.** ನಿಮ್ಮ ಒಡೆಯನ ಪಡೆಗಳ ಕುರಿತು ಅವನ ಹೊರತು ಬೇರೆ ಯಾರಿಗೂ ತಿಳಿಯದು. ಇದು ಮಾನವರಿಗಾಗಿರುವ ಉಪದೇಶ ಮಾತ್ರವಾಗಿದೆ.

ಇದನ್ನೆಲ್ಲಾ ಓದಿದರೆ ಇವರೇ(ಅಲ್ಲಾಹನೇ) ಏಸುವನ್ನು ಹುಟ್ಟಿಸಿದ್ದಾರೆ ಎಂದು ಒಂದು ಪಂತದ ಅನುಯಾಯಿಗಳನ್ನ ಹೇಗೆ ಮರಳು ಮಾಡಲಾಗುತ್ತಿದೆ. ಅವರಲ್ಲಿರುವ ಗ್ರಂಥಗಳೆಲ್ಲಾ ಅವರ ಅಲ್ಲಾಹರೇ ಕಳುಹಿಸಿದ್ದಂತೆ, ಏಸು ಕ್ರಿಸ್ತನು ಅಲ್ಲಾಹರ ಪ್ರವಾದಿಯಂತೆ ಆದರೆ ಅವರು ಅಲ್ಲಾಹ ಮತ್ತು ಪ್ರವಾದಿ ಮೊಹಮ್ಮದ್ ಪೈಗಂಬರ್ ಮತ್ತು ಖುರಾನ್ ಮಾತ್ರ ಪಾಲಿಸಬೇಕಂತೆ. ಇದ್ಯಾಕೋ ತರ್ಕ ಬದ್ಧವಾಗಿಲ್ಲ ಅನಿಸುವುದಿಲ್ಲವೆ. ತಾನು ರಚಿಸಿ ಕಳುಹಿಸಿದ್ದ ಹಿಂದಿನ ಪುಸ್ತಕಗಳಲ್ಲಿ ಕೆಲವನ್ನು ನಂಬಿ ಅಂತಾರೆ, ಆದರೆ ಆ ಪುಸ್ತಕಗಳಲ್ಲಿ ಎಲ್ಲಿಯೂ ಮೊಹಮ್ಮದ್ ಮತ್ತು ಅಲ್ಲಾಹರ ಉಲ್ಲೇಕವಿರುವ ಬಗ್ಗೆ ಹೇಳುವುದಿಲ್ಲ. ಇಲ್ಲಿ ಯಹೂದಿಗಳಾದ ಇಸ್ರೇಲಿಗರನ್ನು ಮತ್ತು ಕ್ರೈಸ್ತರನ್ನು ಅವರ ನಂಬಿಕೆಗಳನ್ನು ಅನುಮಾನದ ಕಿಚ್ಚು ಹಚ್ಚಿ ಸುಡುಗಾಡಿಗೆ ಕಳುಹಿಸಿ ಇವರ ದೇವರು ಮತ್ತು ಪ್ರವಾದಿಗಳನ್ನು ಸ್ಥಾಪಿಸುವ ಹಂಬಲ ಪ್ರತಿ ವಾಕ್ಯಗಳಲ್ಲೂ

ಅಡಗಿದೆ. ಹಿಂದಿನ ಗ್ರಂಥಗಳನ್ನು ಇವರೇ ಬರೆದುಕಳುಹಿಸಿದ್ದರಂತೆ ಆದರೆ ಅದರಲ್ಲಿ ಏನೇನಿದೆ ಎಂದು ಹೇಳುವುದಿಲ್ಲ, ಅದನ್ನು ನಂಬಬೇಕೆಂದು ಕರೆ ಇದೆ ಆದರೆ ಖುರಾನ್ ಮಾತ್ರ ನಂಬಿ ಎಂಬ ಆದೇಸ ಇದೆ, ಬೇರೆ ಎಲ್ಲಾ ದೇವರು ಅಲ್ಲಾಹರ ಗುಲಾಮರಂತೆ/ದಾಸರಂತೆ ಅಲ್ಲಾಹ ಮಾತ್ರ ಏಕ ದೇವರಂತೆ. ಆದರೆ ಇಲ್ಲೊಂದು ವಿಚಾರ ಗಮನಿಸಿ ಅಮ್ದು ಇವರಿಗೆ ಹಿಂದು ಗ್ರಂಥಗಳ ಬಗ್ಗೆ ಗೊತ್ತಿರಲಿಲ್ಲವೆ ಬರೀ ಯಹೂದಿ ಮತ್ತು ಕ್ರೈಸ್ತರ ಗ್ರಂಥಗಳ ಬಗ್ಗೆಯೇ ಅಲ್ಲಹರು ಏಕೆ ಉಲ್ಲೇಕಿಸುತ್ತಾರೆ. ಎಲ್ಲವನ್ನು ತಿಳಿದವರು ಅಲ್ಲಾಹರಾಗಿದ್ದರೆ ಹಿಂದು ಗ್ರಂಥಗಳ ಬಗ್ಗೆಯೂ ಹೇಳಬಹುದಿತ್ತಲ್ಲ. ಬರೀ ಈ ಕೆಲವು ಜನಾಂಗದ ಬಗ್ಗೆ ಮಾತ್ರ ಯಾಕೆ ಖುರಾನಿನಲ್ಲಿ ಹೇಳಿದ್ದಾರೆ. ಬಹುಷಃ ಈ ಕಾರಣಕ್ಕೇ ಇರಬೇಕು ನಂತರ ಅಕ್ಬರ್ ವೇಳೆಯಲ್ಲಿ ಅಲ್ಲೋಹಪನಿಷದ್ ಎಂದು ಹಿಂದುಗಳ ಹೆಸರಲ್ಲಿಯೇ ರಚಿಸಿ ತುರುಕಿ ಉಲ್ಟಾ ಪ್ರಯತ್ನ ಪಟ್ಟಿದ್ದು, 1900 ರ ನಂತರ ಕೆಲವು ಬುದ್ದಿವಂತರಾಗಬಯಸಿದವರು ಅಲ್ಪ ಸ್ವಲ್ಪ ಸಂಸ್ಕೃತವನ್ನು ಕಲಿತು ವೇದಗಳನ್ನು ತಿರುಚಿ ಬರೆಯಲು ಹೋಗಿ ಮುಗ್ಗರಿಸಿದ್ದು, ಎಸ್ಟೇ ಆಗಲಿ ಅವರ ಗ್ರಂಥಗಳ ಮೂಲವನ್ನು ಅರಿತವರೇ ಈ ಕೆಲಸ ಮಾಡಲು ಸಾದ್ಯ. ಯತಾ ಗುರು ತಥಾ ಶಿಷ್ಯ – ಹೇಗೆ ಗುರುವೋ ಹಾಗೆ ಶಿಷ್ಯಂದಿರು ಅನ್ನುವ ರೀತಿಯಲ್ಲಿ ಆಗಿರಬೇಕು. – ಇಲ್ಲಿ ಕ್ರೈಸ್ತರ ಮತ್ತು ಯಹೂದರ ಬಗ್ಗೆ ಬರೆಯುವ ಸಾಲುಗಳನ್ನು ನೋಡಿ ಎಲ್ಲಿಯೂ ಯಹೂದರ ಮೂಲಭೂತ ನಂಬಿಕೆ ಮತ್ತು ತತ್ವಗಳೇನು ಅದನ್ನು ನಾನು ಖುರಾನಿನಲ್ಲಿ ಎಲ್ಲಿ ಹೇಗೆ ಹೇಳಿದ್ದೇನೆ. ಈ ಹಿಂದೆಯೇ ಯಹೂದರ ಗ್ರಂಥದಲ್ಲಿ ಎಲ್ಲಿ ಹೇಳಿದ್ದೇನೆ ಎಂದು ಎಲ್ಲಿಯೂ ಉಲ್ಲೇಕವಿಲ್ಲ. ಯಾಕೆ ಇಂದಿನ ಜಾಕೀರ್ ನಾಯಕ್ ಮಾದರಿಯಲ್ಲಿ ಹೇಳಬಹುದಿತಲ್ಲ. ಸರ್ವಶಕ್ತನಾದ ಅಲ್ಲಾಹರಿಗೆ ಇದು ಸಾದ್ಯವಾಗದಾಯಿತೆ? ಏಸು ಕ್ರಿಸ್ತನ ಜನ್ಮದ ವೇಳೆಯಲ್ಲಿ ಆತನ ತಂದೆಗೆ ಮಕ್ಕಳಾಗುವ ಯೋಗವಿಲ್ಲ, ಅಲ್ಲಾಹರೇ ಅನುಗ್ರಹಿಸಿದ್ದು ಎಂದು ಹೇಳುತ್ತಾರೆ ಆದರೂ ಅವನನ್ನು ಮಗ ಅಂತ ಒಪ್ಪೊಲ್ಲ. ಮಗನು ಹುಟ್ಟಲು ದೇಹಗಳ ಮಿಲನ ಮುಖ್ಯ ಅಂತ ಅಲ್ಲಹರ ತರ್ಕವೇ ಅಥವ ಅಲ್ಲಾಹರಿಗೆ ಮಗುವನ್ನು ಮಂತ್ರ ಶಕ್ತಿಯಿಂದ ದಯಪಾಲಿಸುವ ಶಕ್ತಿ ಇತ್ತು ಎಂದು ಹೇಳಲು ನಾಚಿಕೆಯೇ ಅಥವ ಅವರನ್ನೂ ಮಂತ್ರವಾದಿಗಳಾಗಿ ಕಾಣುತ್ತಾರೆ ಜನರು ಎಂಬ ಆತಂಕವೇ? ಅಥವ ಹಿಂದುಗಳಲ್ಲಿ ಇದ್ದ ನಿಯೋಗ ಶಾಸ್ತ್ರವು ಅಲ್ಲಾಹರಿಗೆ ಅನ್ವಯಿಸಿದರೆ ಅಲ್ಲಾಹರು ಸರ್ವ ಶಕ್ತರಾಗುವುದಿಲ್ಲವೆಂಬ ತರ್ಕವೆ? ಇಲ್ಲಿ ಅಲ್ಲಾಹರ ಮಗನೇ ಈ ಹಿಂದೆ ಇದ್ದ ಪ್ರವಾದಿಗಳು ಎಂದು ನಂಬಿಸಿ ಮತಾಂತರ ಮಾಡುವ ಪ್ರಯತ್ನ ಒಂದೆಡೆ ಕಾಣುತ್ತಿದ್ದರೆ, ಅಲ್ಲಾಹರೇ ಸರ್ವವೂ ಸೃಷ್ಠಿಸಿದ್ದೂ ಎಲ್ಲಾ ಪ್ರವಾದಿಗಳು ಅಲ್ಲಾಹನ ಸೇವಕರು ಅದರಂತೆ

ಏಸೂ ಕ್ರಿಸ್ತ, ಮೂಸಾ ಇನ್ನಿತರೆ ಎಲ್ಲರೂ ಅಲ್ಲಾಹನ ಸೇವಕರು ಎಂದು 700 ವರ್ಷಗಳ ಇತಿಹಾಸವುಳ್ಳ ಒಂದು ಜನಾಂಗವನ್ನು ಮುಸ್ಲಿಮರನ್ನ್ ಆಗಿಸುವ ಪ್ರಯತ್ನ ಖುರಾನಿನ್ಂದ ಆಗಿದೆ ಎಂಬುದು ನೇರವಾಗಿ ತಿಳಿಯುವ ಅಂಶ. ಈ ಎಲ್ಲಾ ಅಂಶಗಳು ಅಲ್ಲಲ್ಲಿ ಕೊಡುವ ಬದಲು ಒಂದೇ ಅಧ್ಯಾಯದಲ್ಲಿ ಯಾಕೆ ಸರ್ವ ಶಕ್ತನಾದ ಅಲ್ಲಾಹರು ಇಳಿಸಿಕೊಡಲಿಲ್ಲ. ಅಲ್ಲಾಹರಿಗೆ ಅಂದಿಗೆ ಮಾಹಿತಿ ಕೊರತೆ ಇತ್ತೆ, ಮದ್ಯೆ ಮದ್ಯೆ ಬೇರೆ ಬೇರೆ ಅಂಶಗಳನ್ನು ಬರೆದು ತೂರಿಸುವ ಸಂಧರ್ಬ ಬಂತೆ, 23 ವರ್ಷಗಳಲ್ಲಿ ಈ ಖುರಾನ್ ಇಳಿಸಿಕೊಡಲಾಗಿದೆ ಎಂದರೆ ಪ್ರವಾದಿಗಳಿಗಾದರೂ ಇದನ್ನು ಸರಳೀಕರಣ ಗೊಳಿಸಿ ಒಂದೆಡೆ ಸಮೀಕರಣ ಗೊಳಿಸುವ ವ್ಯವದಾನವಿರಲಿಲ್ಲವೆ. ಇಂದಿಗೂ ಇದರ ಮೂಲ ರೂಪವನ್ನು ಬದಲಿಸಿ ಸರಳೀಕರಣ ಗೊಳಿಸುವ ಮನಸ್ಥಿತಿ ಯಾಕೆ ಯಾರಿಗೂ ಇಲ್ಲ. ಖುರಾನ್ ಹೀಗೆಯೇ ಅರ್ಥವಾಗದ ರೀತಿಯಲ್ಲಿ ವಿಭಿನ್ನ ಸಂದೇಸಗಳನ್ನು ನೀಡುತ್ತ ಜನರ ಮನಸ್ಸುಗಳನ್ನು ವಿವಿದತೆಯಲ್ಲಿ ಕೆದಕುತ್ತ, ಮೂಲ ಮಂತ್ರವಾದ "ಈ ಜಗತ್ತು ಇಸ್ಲಾಮೀಕರಣವಾಗಬೇಕು ಎಂಬುದನ್ನು" ಕೆಳ ಅಜೆಂಡಾ ಮಾಡಿಕೊಂಡು ಓದುವುದಕ್ಕಾಗಿಯೇ ಅದರ ಮೂಲ ಸ್ವರೂಪವನ್ನು ಉಳಿಸಿಕೊಳ್ಳಲಾಗಿದೆಯೇ?

## ಹಿಂದುಗಳಲ್ಲಿ ಒಡಕು ಮೂಡಿಸಲು ಮುಂದಾದ ಮುಸ್ಲಿಮರು

ಬಹುದೇವಾರಾದಕರ ದೇವರು ಮತ್ತು ಭಕ್ತರ ನಡುವೆ ಒಡಕು ಮೂಡಿಸುತ್ತೇನೆ ಅನ್ನುವ ಮಟ್ಟಿಗೆ ಮುಸ್ಲಿಮರ ಖುರಾನ್ ನಲ್ಲಿ ಬೋದನೆ ಇದೆ.

ಅಧ್ಯಾಯ 10: ಯೂನುಸ್, ಸೂಕ್ತ 28 ನಾವು ಅವರೆಲ್ಲರನ್ನೂ ಒಂದೆಡೆ ಸೇರಿಸುವ ದಿನ, ಬಹುದೇವಾರಾಧಕರೊಡನೆ ನಾವು ಹೇಳುವೆವು; "ನೀವು ಮತ್ತು ನಿಮ್ಮ ದೇವರುಗಳು ನಿಮ್ಮ ಸ್ಥಾನದಲ್ಲಿ ನಿಂತುಕೊಂಡಿರಿ." ತರುವಾಯ ನಾವು ಅವರ ನಡುವೆ ಒಡಕು ಮೂಡಿಸುವೆವು. ಆಗ ಅವರ ದೇವರುಗಳು (ತಮ್ಮ ಭಕ್ತರೊಡನೆ) ಹೇಳುವರು; "ನೀವು ಎಂದೂ ನಮ್ಮನ್ನು ಪೂಜಿಸುತ್ತಿರಲಿಲ್ಲ"

ಬಹುತೇಕ ಮುಸ್ಲಿಮರಿಗೆ ಹಿಂದು ಮೂರ್ತಿಗಳ ಮೂಲ ಉದ್ದೇಶವೇ ಅರ್ಥವಾಗಿಲ್ಲ, ನಮ್ಮಲ್ಲಿರುವ ಮೂರ್ತಿಗಳನ್ನು ಬಿಟ್ಟು ಬೇರೆ ನಂಬಿಕೆಯನ್ನು ನಾವು ಅಪಹಾಸ್ಯ ಮಾಡುವುದಿಲ್ಲ ಎಂಬ ಸತ್ಯವನ್ನು ಅರ್ಥ ಮಾಡಿಕೊಳ್ಳಬೇಕು. ದೇವಸ್ಥಾನದಲ್ಲಿ ದೇವತೆಯ ಚಿತ್ರಣವನ್ನು ರೂಪಿಸುವ ಕಾರಣ, ಚಿತ್ತ ಶುದ್ಧಿ ಉತ್ಪಾದನೆಗೆ ಅಗತ್ಯವಾದ ಭಾವನೆಯನ್ನು ಉಂಟುಮಾಡಿ ತತ್ಪರತೆಯನ್ನು (ಪರಮ

ಭಕ್ತಿಯನ್ನು) ಉಂಟುಮಾಡಲಿಕ್ಕೆ, ಇದು ಅದರಲ್ಲಿಯೇ ಲೀನವಾಗಲಿಕ್ಕೆ ಪ್ರಯತ್ನಿಸುವಿಕೆ".

"ಹಿಂದೂ ನಂಬಿಕೆಯ ಪ್ರಕಾರ, ದೇವರ ಆರಾಧನೆಯು ನಾಲ್ಕು ವಿಧಗಳಿವೆ, ಅಂದರೆ, ಗಾಯತ್ರಿ ಮಂತ್ರಗಳ (ಶ್ಲೋಕ) ಜಪ-ಪಠಣೆ ಅಥವಾ ಅಸ್ಥಾಕ್ಷರ; ಹೋಮಾ - ಬೆಂಕಿಗೆ ಅರ್ಪಣೆ ನೀಡುವುದು; ಅರ್ಚನ - ದೇವಾಲಯದ ಮೂರ್ತಿರೂಪ ದೇವರ ಪೂಜೆ; ಮತ್ತು ಧ್ಯಾನ ದೇವರ ಮೇಲೆ ಏಕಾಗ್ರತೆ ಇವು ಮಾತ್ರ. ಈ ನಾಲ್ಕು ವಿದದಲ್ಲಿ ದೇವಸ್ಥಾನದಲ್ಲಿನ ಅರ್ಚನಾರಾಧನೆಯು ಸ್ಥಾಪಿತ ಪ್ರಾರ್ಥನಾ ರೂಪವನ್ನು ಪಡೆಯಿತು."[68]

ನ್ಯಾಯಾಲಯಗಳಿಗೆ ಅರ್ಥವಾಗಿ ಸುಮ್ಮನಿದ್ದರೂ ಇಂದು ಅನೇಕ ವಿವಿದತೆಯ ಕಾರಣ ಒಡ್ಡಿ ದೇವಾಲಯಗಳ ಮೇಲೆ ಗೋಪ್ಯ ಪ್ರಹಾರ ನಡೆಯುತ್ತಿರುವ ಬಗ್ಗೆ ನಾವು ಎಚ್ಚೆತ್ತುಕೊಳ್ಳಬೇಕಿದೆ. ಒಂದು ಕಡೆ ನಾಸ್ತಿಕರು ತಿಳಿದೋ ತಿಳಿಯದೆಯೋ ಮುಸ್ಲಿಮರ ಕೈ ಜೋಡಿಸಿರುವುದು. ಒಂದು ಕಡೆ ಇತರೆ ಮತ ಪ್ರಚಾರಕರು ಕೈ ಜೋಡಿಸಿ ನ್ಯಾಯಾಲಯಗಳನ್ನು ಆಟದ ಮೌಧಾನ ಮಾಡಿಕೊಳ್ಳುತ್ತಿದ್ದಾರೆ. ಇವರೆಲ್ಲರ ಒಂದೇ ಧ್ಯೇಯ ಮೂರ್ತಿ ಪೂಜೆ ನಾಷಮಾಡುವುದು. ಇಂತಹ ಗಹನವಾದ ವಿಚಾರದ ಬಗ್ಗೆ ಗಮನಹರಿಸದೆ ಇತ್ತೀಚೆಗೆ ಶಬರಿಮಲ ವಿಚಾರದ ತೀರ್ಪಿನ ನಂತರ ಮುಸ್ಲಿಮ್ ಮಹಿಳೆ ಹೇಗೆ ದೇವಾಲಯ ಪ್ರವೇಶಿಸಲು ಮುಂದಾದಳು. ತೀರ್ಪಿಗೆ ಸಮ್ಮತಿ ಸೂಚಿಸಿ ಮುಸ್ಲಿಮ್ ಮಹಿಳೆಯರನ್ನು ಹೇಗೆ ಬೀದಿಗಿಳಿಸಲಾಯಿತು ಎಲ್ಲವನ್ನೂ ನೋಡಿದರೆ ನಮಗೆ ಈ ಖುರಾನ್ ಬೋದನೆಯ ಫಲ ಇವೆಲ್ಲಾ ಎಂದು ಅನಿಸುವುದಿಲ್ಲವೆ.




(ಮುಸ್ಲಿಮ್ ಮಹಿಳೆಯರು ಶಬರಿಮಲೆ ವಿಚಾರವಾಗಿ : ಯಾಕೆ ಇವರಿಗೆ ಆಸಕ್ತಿ)

[68] ಮನು/ಎಸ್.ಸಿ/0455/1996-ಉಲ್ಲೇಖಿತ






ದಾರಿ ತಪ್ಪಿಸುವ ಮುಸ್ಲಿಮರು ನಮ್ಮಲ್ಲಿ ಒಡಕು ಮೂಡಿಸುವ ಯತ್ನದಲ್ಲಿ ಇದ್ದಾರೆ: ಇದಕ್ಕೆ ಸಾಕ್ಷಿ: ಒಂದು ವಚನದಲ್ಲಿ ಬಸವಣ್ಣನವರು ಹೀಗೆನ್ನುತ್ತಾರೆ. "----------–ಮಾರಯ್ಯ, ಬೀರಯ್ಯ, ಕೇಚರಗಾವಿಲ, ಅಂತರ ಬೆಂತರ ಕಾಳಯ್ಯ, ಧೂಳಯ್ಯ, ಮಾಳಯ್ಯ, ಕೇತಯ್ಯಗಳೆಂಬ ನೂರು ಮಡಕೆಗೆ ನಮ್ಮ ಕೂಡಲ ಸಂಗಮದೇವ ಶರಣೆಂಬುದೊಂದು ದಡಿ ಸಾಲದೆ?" -- ಇಲ್ಲಿಯೂ ಮುಸ್ಲಿಮರು ಪ್ರವೇಶಿಸುತ್ತಾರೆ, --- ಇದನ್ನು ತಪ್ಪಾಗಿ ವ್ಯಾಖ್ಯಾನಿಸುವ ಮುಸ್ಲಮರಾದ ರಂಜಾನ್ ದರ್ಗಾ[69] ಎಂಬ ಬಸವ ತತ್ವದ ಜ್ಞಾನಿ ಹೀಗೆನ್ನುತ್ತಾರೆ "------.ಇಂಥ ಕಿರಿಕಿರಿಯ ದೇವರುಗಳೆಂಬ ಮಡಕೆಗಳನ್ನು ಕೂಡಲಸಂಗಮದೇವರೆಂಬ ಜ್ಞಾನದ ಬಡಿಗೆಯಿಂದ ಒಡೆದು ಹಾಕಲು ಸೂಚಿಸುತ್ತಾರೆ." ಹೀಗೆ ಮುಸ್ಲಿಮರ ತತ್ವವನ್ನು ಬಸವ ತತ್ವದ ಅನುಯಾಯಿಗಳಿಗೆ ಕೊಡುವುದು ಸೂಕ್ತವೇ. ಬಸವಣ್ಣನವರು ಹಾಗೆ ಹೇಳಿರಲಿಕ್ಕೆ ಸಾಧ್ಯವೇ ಇಲ್ಲ.

ಅದೇ ವೆಬ್ ತಾಣದಲ್ಲಿ[70] ಸದರಿ ಬಸವಣ್ಣನವರ ವಚನಕ್ಕೆ ಈ ರೀತಿ ಅರ್ಥ ಕೊಟ್ಟಿದ್ದಾರೆ. "ಜನ ಸಾಮಾನ್ಯರು ನಂಬಿರುವಂತೆ ದೇವರುಗಳು ಎಲ್ಲೆಲ್ಲಿರುತ್ತವೆ. ಅವು ಏನನ್ನು ಬೇಡುತ್ತವೆಂಬುದನ್ನು ಹೇಳುತ್ತ ಅಲ್ಲದೆ "ಮಡಕೆ ದೈವ, ಮೊರದೈವ, ಕೊಳಗದೈವ (ಅಳತೆ ಮಾಡುವ ಸಾಧನ), ಗಿಣ್ಣಿಲುದೈವ, ದೈವ ದೈವವೆಂದು ಕಾಲಿಡಲಿಂಬಿಲ್ಲ" – ಎಂದು ವಿವರಣೆ ಕೊಡುತ್ತ ಅವುಗಳ ಇರುವಿಕೆಯನ್ನು ಪ್ರಶ್ನಿಸುತ್ತಾರೆ. "ಅರಗು ತಿಂದು ಕರಗುವ ದೈವ, ಉರಿಯ ಕಂಡಡೆ ಮುರುಟುವ ದೈವವ, ಅವಸರ ಬಂದರೆ ಮಾರುವ ದೈವವ, ಅಂಜಿಕೆಯಾದರೆ ಹೂಳುವ ದೈವವ" – ಹೇಗೆ ಸರಿಯನ್ನಬೇಕು ಎಂದು ಕೇಳುತ್ತಾರೆ.

ವಿಮರ್ಶಕರು ಹೇಳುವಂತೆ 'ಸಾಮಾಜಿಕವಾಗಿ ಅಂದಿನ ಕಾಲದ ದೇವಾಲಯಗಳು ಅಸ್ಪೃಶ್ಯರನ್ನು ಬಹಿಷ್ಕರಿಸಿದರೆ ವಚನಕಾರರು ದೇವಾಲಯಗಳನ್ನೇ

---

[69] http://www.lingayatreligion.com/K/BasavaTiraskarisidaDevaru.htm

[70] http://www.lingayatreligion.com/K/Gurubasava/Guru_Basavanna.htm

ಬಹಿಷ್ಕರಿಸಿದರು' ಮತ್ತು ದೇವಾನುದೇವತೆಗಳನ್ನು ಪ್ರಶ್ನಿಸುವ ಮನೋಸ್ಥೈರ್ಯವನ್ನು ಹುಟ್ಟುಹಾಕಿದರು. ಬಸವಣ್ಣ ಕೂಡ ಆ ದಾರಿಯಲ್ಲಿ ನಡೆದವರು. ಇಲ್ಲೇ ಮತ್ತೊಂದು ಮಾತನ್ನು ಬಸವಣ್ಣನವರ ಈ ವಿಚಾರ ಕುರಿತು ಹೇಳಲೇಬೇಕಾಗುತ್ತದೆ. ಈ ಮೇಲೆ ಹೆಸರಿಸಿದ ಎಲ್ಲ ದೇವರುಗಳನ್ನು ಪ್ರಶ್ನಿಸುವ, ಖಂಡಿಸುವ, ಉಚ್ಛಾಟಿಸುವ ಬಸವಣ್ಣ ಅವುಗಳ ಜಾಗದಲ್ಲಿ, ಪರಬ್ರಹ್ಮ ಸ್ವರೂಪನಾದ ಕೂಡಲ ಸಂಗಮವನ್ನು ಇಷ್ಟಲಿಂಗರೂಪದಲ್ಲಿ ಪೂಜಿಸಲು ಹೇಳಿ ಏಕ ದೇವೋಪಾಸನೆಯನ್ನು ಎತ್ತಿ ಹಿಡಿಯುತ್ತಾರೆನ್ನುವುದು.

ಅಲ್ಲಿಗೆ ಮುಸ್ಲಿಮರು ಬಸವಣ್ಣನವರ ವಚನಗಳನ್ನು ಉಪಯೋಗಿಸಿ ಹಿಂದುಗಳಲ್ಲೇ ವಿಷ ಬೀಜ ಬಿತ್ತುತ್ತಿರುವುದಕ್ಕೆ ಇದಕ್ಕಿಂತಾ ಸಾಕ್ಷಿ ಬೇಕೆ. ಇಂತಹ ಅನೇಕ ಷಡ್ಯಂತರಗಳಿಂದ ಮತ್ತು ಹೈದರಾಬಾದಿನ ದೀನದಯಾರ್ ಸಂಸ್ಥೆಯು ಹೇಗೆ ಲಿಂಗಾಯಿತರಲ್ಲಿ ಗೊಂದಲವನ್ನು ಉಂಟು ಮಾಡಿ ಪ್ರವಾದಿ ಮೊಹಮ್ಮದ್ ರವರು ಬಸವಣ್ಣನಾಗಿ ಪುನರ್ಜನ್ಮ ತಾಳಿದ್ದಾರೆ ಎಂದು ಸಾರುತ್ತ. ಮುಸ್ಲಿಮರಾಗಿ ಪರಿವರ್ತನೆ ಮಾಡಲು ಮುಂದಾಗಿದ್ದ ವಿಚಾರವನ್ನು ಮುಂದೆ ಓದುವಿರಂತೆ, ಹೀಗೆ ಮುಸ್ಲಿಮರು ಹಿಂದು ದೇವರು ಮತ್ತು ಭಕ್ತರಲ್ಲಿ ಗೊಂದಲ ಮೂಡಿಸಲು ಕಾರಣ ವೇನು ಗೊತ್ತೆ ಅದು ಅವರ ಖುರಾನಿನಲ್ಲಿ ಇರುವ ಈ ಬಗ್ಗೆಯ ಬೋದನೆ. ಅವರ ಅಲ್ಲಾಹರ ಮಾರ್ಗದಲ್ಲಿ ಹೇಗೆ ಇಸ್ರೇಲರ ಮತ್ತು ಕ್ರೈಸ್ತರ ಗ್ರಂಥಗಳ ಬಗ್ಗೆ ಅಲ್ಲಾಹರು ಕೈ ಹಾಕಿದ್ದಾರೋ ಖುರಾನಿನಲ್ಲಿ ಅದು ಇವರಿಗೆಲ್ಲಾ ಮಾದರಿಯಾಗಿ ಬಿಟ್ಟಿದೆ.

ನಿಜ ಹಿಂದುಗಳಲ್ಲಿ ಬಹುದೇವಾರಾದನೆ ರೂಢಿಗೆ ಬಂದಿರುವುದು ಅವರವರ ನಂಬಿಕೆ ಮತ್ತು ಶ್ರದ್ದೆಗೆ ಅನುಸಾರವಾಗಿ ಎಂದರೆ ತಪ್ಪಾಗಲಾರದು. ಉದಾಹರಣೆಗೆ ತೆಗೆದುಕೊಳ್ಳಿ ಶೈವ ಧರ್ಮ ಆಚಾರಕರು ಹಿಂದೆ ಪೂಜಿಸುತ್ತಿದದ್ದು ಶಿವನನ್ನು ಮಾತ್ರ, ನಂತರ ಶಿವನ ಸ್ವರೂಪವೇ ಆದ ಲಿಂಗವನ್ನು ಪೂಜಿಸಿದರು. ನಂತರ ಬಂದ ಪಂಚಾಚಾರ್ಯರು, ಬಸವಣ್ಣನವರು ಲಿಂಗಪೂಜೆಯಲ್ಲಿ ದೇವರನ್ನು (ಶಿವನನ್ನು) ಕಂಡರು. ವಚನಗಳಲ್ಲೇ ಉಲ್ಲೇಕಿತ ಮೂರು ವಿದ ದೇವರನ್ನು ನಾವು ಕಾಣಬಹುದು ಅದು ಶಿವನಿರಬಹುದು, ಕೂಡಲಸಂಗಮದೇವನಿರಬಹುದು, (ಅದು ವಚನದ ನಾಮಾಂಕಿತ ಅಂತ ಹೇಳಬಹುದಾದರು ದೇವರ ಅರ್ಥದಲ್ಲೇ ಬರುತ್ತೆ) ಇಷ್ಟಲಿಂಗ ವಿರಬಹುದು, ಇವೆಲ್ಲಾ ಏಕದೇವರನ್ನು  ಸೂಚಿಸಬಹುದು ಆದರೆ ಆಚರಣೆಯಲ್ಲಿ ಬಂದಿರುವುದು ಏನು ಎಂಬುದನ್ನು ನಾವು ನೋಡಬೇಕಿರುತ್ತದೆ. ಶಿವನ ಪೂಜಿಸುವಾಗ ಆತನ ಕೊರಳಲ್ಲಿ ಇದ್ದ ಹಾವನ್ನು ಅವನ ವಾಹನವಾಗಿ ಇದ್ದ ನಂದಿಯನ್ನು ಇಂದಿಗೂ ದೈವಿಕ ಸ್ಥಾನವನ್ನು ನೀಡಿರುವುದು ಕಾಣುತ್ತೇವೆ. ಬಸವಣ್ಣನವರ ವಚನವನ್ನು ಓದಿ

ತಮ್ಮ ಜೀವನದಲ್ಲಿ ಆದರ್ಶವಾಗಿ ತೆಗೆದುಕೊಂಡ ಅನೇಕರು ಬಸವಣ್ಣನವರನ್ನೇ ತಮ್ಮ ಆರಾದ್ಯ ದೈವವೆಂದು ನಂಬಿಲ್ಲವೆ.

ವಚನ ಸಾಹಿತ್ಯದ ಶ್ರೀಮಂತಿಕೆಗೆ ನೂರಾರು ಜನ ಶರಣರು ಶ್ರಮಿಸಿದ್ದಾರೆ. ತಮ್ಮ ವಚನಗಳಲ್ಲಿ ತಮ್ಮದೇ ಆದ ಅಂಕಿತನಾಮಗಳನ್ನು ಬಳಸಿದ್ದಾರೆ. ಜೇಡರ ದಾಸಿಮಯ್ಯ 'ರಾಮನಾಥ' ಎಂದು ಬಳಸಿದರೆ, ಅಕ್ಕಮಹಾದೇವಿಯು 'ಚೆನ್ನಮಲ್ಲಿಕಾರ್ಜುನ' ಹಾಗೂ ಬಸವಣ್ಣನವರು 'ಕೂಡಲ ಸಂಗಮದೇವ' ಎಂದು ಬಳಸಿದ್ದಾರೆ. ಮತ್ತಿತರ ಸುಪ್ರಸಿದ್ಧ ವಚನಕಾರರೆಂದರೆ: ಅಲ್ಲಮ ಪ್ರಭು, ಅಂಬಿಗರ ಚೌಡಯ್ಯ, ಮಾದಾರ ಚೆನ್ನಯ್ಯ, ಸೂಳೆ ಸಂಕವ್ವೆ, ಏಕಾಂತ ರಾಮಯ್ಯ, ಹಡಪದ ಅಪ್ಪಣ್ಣ, ಒಕ್ಕಲು ಮಾದಯ್ಯ, ಮಡಿವಾಳ ಮಾಚಯ್ಯ,ಆಯ್ದಕ್ಕಿ ಲಕ್ಕಮ, ಹೆಂಡದ ಮಾರಯ್ಯ, ಅಂಗಸೋಂಕಿನ ಲಿಂಗತಂದೆ, ಅಂಬಿಗರ ಚೌಡಯ್ಯ, ಅಕ್ಕಮಹಾದೇವಿ, ಅಕ್ಕಮ್ಮ, ಅಖಂಡ ಮಂಡಲೇಶ್ವರ, ಅಗ್ಘವಣಿ ಹಂಪಯ್ಯ, ಅಗ್ಘವಣಿ ಹೊನ್ನಯ್ಯ, ಅಜಗಣ್ಣ ತಂದೆ, ಅರಿವಿನ ಮಾರಿತಂದೆ, ಅನುಗಲೇಶ್ವರ, ಅನಾಮಿಕ ನಾಚಯ್ಯ, ಅಪ್ರಮಾಣ ಗುಹೇಶ್ವರ, ಅಪ್ಪಿದೇವಯ್ಯ, ಅವಸರದ ರೇಕಣ್ಣ, ಅಮರಗುಂಡದ ಮಲ್ಲಿಕಾರ್ಜುನ ತಂದೆ, ಅಮುಗೆ ರಾಯಮ್ಮ, ಅಮುಗಿದೇವಯ್ಯ, ಅಲ್ಲಮಪ್ರಭುದೇವರು,ಅಶ್ವಥರಾಮ, ಆಯ್ದಕ್ಕಿ ಮಾರಯ್ಯ, ಆಯ್ದಕ್ಕಿ ಲಕ್ಕಮ್ಮ, ಆದಯ್ಯ, ಆನಂದ ಸಿದ್ಧೇಶ್ವರ, ಆನಂದಯ್ಯ, ಇಮ್ಮಡಿ ಮುರಿಘಾ ಗುರುಸಿದ್ಧ / ಗುರುಸಿದ್ಧಸ್ವಾಮಿ, ಈಶ್ವರೀಯ ವರದ ಚೆನ್ನರಾಮ, ಉಗ್ಘಡಿಸುವ ಗಬ್ಬಿದೇವಯ್ಯ, ಉರಿಲಿಂಗದೇವ, ಉರಿಲಿಂಗಪೆದ್ದಿ, ಉರಿಲಿಂಗಪೆದ್ದಿಗಳ ಪುಣ್ಯಸ್ತ್ರೀ ಕಾಳವ್ವೆ, ಉಪ್ಪರಗುಡಿಯ ಸೋಮಿದೇವಯ್ಯ, ಉಳಿಯುಮೇಶ್ವರ ಚಿಕ್ಕಣ್ಣ, ಎಚ್ಚರಿಕೆ ಕಾಯಕದ ಮುಕ್ತನಾಥಯ್ಯ, ಎಡೆಮಠದ ನಾಗಿದೇವಯ್ಯಗಳ ಪುಣ್ಯಸ್ತ್ರೀ ಮಸಣಮ್ಮ, ಎಲೆಗಾರ ಕಾಮಣ್ಣ, ಏಕಾಂತ ವೀರಸೊಡ್ಡಳ, ಏಕಾಂತರಾಮಿತಂದೆ, ಏಕೋರಾಮೇಶ್ವರ ಲಿಂಗ, ಏಲೇಶ್ವರ ಕೇತಯ್ಯ, ಒಕ್ಕಲಿಗ ಮುದ್ದಣ್ಣ, ಕಂಬದ ಮಾರಿತಂದೆ, ಕರಸ್ಥಲದ ಮಲ್ಲಿಕಾರ್ಜುನೊಡೆಯ, ಕರುಳ ಕೇತಯ್ಯ, ಕದಿರಕಾಯಕದ ಕಾಳವ್ವೆ, ಕದಿರರೆಮ್ಮವ್ವೆ ಕನ್ನಡಿಕಾಯಕದ ಅಮ್ಮಿದೇವಯ್ಯ, ಕನ್ನಡಿಕಾಯಕದ ರೇಮಮ್ಮ, ಕನ್ನಡ ಮಾರಿತಂದೆ, ಕಲಕೇತಯ್ಯ, ಕಲ್ಲಯ್ಯದೇವರು, ಕುರಂಗಲಿಂಗ, ಕುರಂಗಲಿಂಗ, ಕುರಂಗೇಶ್ವರಲಿಂಗ, ಕುಷ್ಟಗಿ ಕರಿಬಸವೇಶ್ವರ, ಕೂಗಿನ ಮಾರಯ್ಯ, ಕೂಡಲಸಂಗಮೇಶ್ವರ, ಕಾಟಕೂಟಯ್ಯಗಳ ಪುಣ್ಯಸ್ತ್ರೀ ರೇಚವ್ವೆ, ಕಾಡಸಿದ್ಧೇಶ್ವರ, ಕಾಮಾಟದ ಭೀಮಣ್ಣ, ಕಾಲಕಣ್ಣಿಯ ಕಾಮಮ್ಮ, ಕೊಂಡೆಮಂಚಣ್ಣಗಳ ಪುಣ್ಯಸ್ತ್ರೀ ಲಕ್ಷ್ಮಮ್ಮ, ಕೊಟ್ಟಣದ ಸೋಮಮ್ಮ, ಕೊಟಾರದ ಸೋಮಣ್ಣ, ಕೋಲ ಶಾಂತಯ್ಯ, ಕಿನ್ನರಿ ಬ್ರಹ್ಮಯ್ಯ, ಕೀಲಾರದ ಭೀಮಣ್ಣ,

ಗಂಗಾಂಬಿಕೆ, ಗಜೇಶ ಮಸಣಯ್ಯ, ಗಜೇಶಮಸಣಯ್ಯದ ಪುಣ್ಯಸ್ತ್ರೀ, ಗಣದಾಸಿ ವೀರಣ್ಣ, ಗುಂಡಯ್ಯಗಳ ಪುಣ್ಯಸ್ತ್ರೀ ಕೇತಲದೇವಿ, ಗುರು ವಿಶ್ವೇಶ್ವರಾ, ಗುರುಪುರದ ಮಲ್ಲಯ್ಯ, ಗುರುಬಸವೇಶ್ವರ, ಮೋಳಿಗೆ ಮಾರಯ್ಯ, ಎಲ್ಲರೂ ಬಳಸಿರುವ ವಿವಿದ ವಚನದಲ್ಲಿನ ಅಂಕಿತನಾಮಗಳನ್ನು ದೇವರೆಂದು ಇಂದಿಗೂ ಬಾವಿಸಿದವರಿಲ್ಲವೆ.

ಬಸವಣ್ಣನವರ ಆದರ್ಶಗಳನ್ನು ಮೈಗೂಡಿಸಿಕೊಂಡು 111 ವರ್ಷ ಬಾಳಿ ನಡೆದಾಡುವ ದೇವರು ಎಂದು ಕರೆಸಿಕೊಂಡ ಡಾ ಶ್ರೀ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ಎಂದಿಗೂ ತನ್ನನ್ನು ದೇವರೆಂದು ಹೇಳಿಕೊಂಡಿಲ್ಲ ಆದರೂ ಇಂದು ಜಾತಿ ಮತ ಪಂಥ ಬೇದಗಳೆನಿಸದೆ ಸರ್ವರೂ ಅವರನ್ನ ದೇವರೆಂದು ನಂಬಿಕೆ ಇಟ್ಟಿಲ್ಲವೆ, ಅದೇ ಹಿಂದು ಧರ್ಮದ ವಿಶೇಷ. ತಾವು ನಂಬಿದ ಈ ಲೋಕದ ಸರ್ವ ವಸ್ತುಗಳಲ್ಲಿ ದೇವರನ್ನು ಕಾಣುವುದೇ ಒಂದು ವಿಶೇಷ ಸಂಪ್ರದಾಯವಾಗಿರುವ ಹಿಂದು ಧರ್ಮದ ಅನುಯಾಯಿಗಳಲ್ಲಿ ಬಹುದೇವಾರಾದನೆ ರೂಡಿಗೆ ಬರುವುದು ಸಹಜ, ಆಗಿಂದಾಗ್ಗೆ ಸತ್ಯ ಮಾರ್ಗದೆಡೆಗೆ ಕರೆದುಕೊಂಡು ಹೋಗಲು ಮತ್ತು ಅಂದಿನ ಸಮಾಜದ ಅನಿಷ್ಟಗಳನ್ನು ತಿದ್ದಲೆಂದೇ ವಿವಿದ ರೂಪದಲ್ಲಿ ಬರುವ ಬಗವಂತನ ಸ್ವರೂಪದಿಂದ ಕೂಡಿರುವುದೇ ಹಿಂದು ಧರ್ಮ. ಎಲ್ಲಾ ದೇವರು ನಮ್ಮನ್ನು ಸರಿದಾರಿಯಲ್ಲಿ ಇಡಲು ನಮ್ಮ ಬಯಕೆಗಳನ್ನು ಈಡೇರಿಸಲೆಂದೇ ಉದ್ಬವವಾಗಿರುವುದು ಎಂಬುದು ಮರೆಯಬಾರದು.

ಯಂ ಶೈವಾಃ ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನೋ ।
ಬೌದ್ಧಬುದ್ಧ ಇತಿ ಪ್ರಮಾಣಪಟವಃ ಕರ್ತೇತಿ ನೈಯಾಯಿಕಾಃ ॥
ಅರ್ಹಶ್ಚೇತಿಹ ಜೈನಶಾಸನಮತಿಃ ಕರ್ಮೇತಿ ಮೀಮಾಂಸಕಾಃ ।
ಸೋಽಯಂ ವೋ ವಿದಧಾತು ವಾಂಛಿತಫಲಂ ಶ್ರೀಕೇಶವಸ್ಸರ್ವದಾ ॥

ಇದರ ಕನ್ನಡ ಭಾಷಾಂತರವಿದು: ಶಿವನೆಂದು ಶೈವರೂ ಬ್ರಹ್ಮನೆಂದು ವೇದಾಂತಿಗಳೂ ಬುದ್ಧನೆಂದು ಬೌದ್ಧರೂ ಕರ್ತನೆಂದು ಪ್ರಮಾಣಪಟುಗಳಾದ ನೈಯಾಯಿಕರೂ ಅರ್ಹನೆಂದು ಜೈನಧರ್ಮದವರೂ ಕರ್ಮವೆಂದು ಮೀಮಾಂಸಕರೂ ಉಪಾಸಿಸುವ ಆ ಕೇಶವ ಸದಾ ನಮ್ಮ ಬಯಕೆಯನ್ನು ಪುರೈಸಲಿ. ಈಗಲೂ ಈ ಶ್ಲೋಕವನ್ನು ಸಾರ್ವಜನಿಕ ಸಭೆಗಳ ಆರಂಭದಲ್ಲಿ ಪ್ರಾರ್ಥನಾ ಶ್ಲೋಕವಾಗಿ ಹೇಳುವುದು ಕರ್ನಾಟಕದಲ್ಲಿ ರೂಢಿಯಲ್ಲಿದೆ.

ಯೋಗ ಮತ್ತು ಇಸ್ಲಾಂ:– ಭೌತಿಕ ಭಂಗಿಗಳನ್ನು (ಆಸನಗಳು) ಹಾಗೂ ಉಸಿರಿನ ನಿಯಂತ್ರಣ (ಪ್ರಾಣಾಯಾಮ) ಗಳೆರಡನ್ನೂ ಅಳವಡಿಸಿಕೊಂಡ

ಸೂಫಿಪಂಥದ ಬೆಳವಣಿಗೆಯಲ್ಲಿ ಭಾರತೀಯರ ಯೋಗದ ಆಚರಣೆಗಳ ಪ್ರಭಾವವು ಗಮನಾರ್ಹವಾಗಿವೆ. ಪ್ರಾಚೀನ ಭಾರತೀಯ ಯೋಗಕ್ಕೆ ಸಂಬಂಧಿಸಿದ ಗ್ರಂಥವಾದ, ಅಮೃತಕುಂಡವು, ("ಅಮೃತದ ಕೊಳ") 11ನೇ ಶತಮಾನದಷ್ಟು ಮುಂಚೆಯೇ ಅರೇಬಿಕ್ ಹಾಗೂ ಪರ್ಷಿಯನ್ ಭಾಷೆಗಳಿಗೆ ಭಾಷಾಂತರಗೊಂಡಿತ್ತು. ಇಂತಹ ಯೋಗ ಸಂಸ್ಕಾರವನ್ನೊಳಗೊಂಡ ಗ್ರಂಥಗಳ ಬೋದನೆಗಳಲ್ಲಿ ಇವುಗಳನ್ನು ಪಾಲಿಸದವರನ್ನು ಕೊಲ್ಲಿ ಎಂದು ಎಲ್ಲಿಯೂ ಹೇಳಿಲ್ಲ.

ಮಲೇಷಿಯಾದ ಅಗ್ರ ಇಸ್ಲಾಂ ಸಂಸ್ಥೆಯು 2008ರಲ್ಲಿ, ಕಾನೂನಿಗೆ ವಿರುದ್ಧವಲ್ಲದೇ ಹೋದರೂ, ಯೋಗವು "ಹಿಂದೂ ಆಧ್ಯಾತ್ಮಿಕ ಬೋಧನೆಗಳ" ಅಂಶಗಳನ್ನು ಹೊಂದಿರುವುದರಿಂದ ಅದನ್ನು ಆಚರಿಸುವುದು ದೈವದ್ರೋಹ ಹಾಗೂ ಹರಾಮ್ ಆಗುತ್ತದೆ ಎಂದು ಯೋಗವನ್ನು ಆಚರಿಸುತ್ತಿರುವ ಮುಸ್ಲಿಮರ ವಿರುದ್ಧ ಒಂದು ಫತ್ವಾವನ್ನು ಹೊರಡಿಸಿತು. ಮಲೇಷಿಯಾದ ಮುಸ್ಲಿಂ ಯೋಗ ಬೋಧಕರು ಈ ನಿರ್ಧಾರವನ್ನು "ಅಪಮಾನಕರ" ಎಂದು ಟೀಕಿಸಿದರು. ಮಲೇಷಿಯಾದ ಮಹಿಳಾ ಹಕ್ಕುಗಳ ಸಂಘಟನೆ ಸಿಸ್ಟರ್ಸ್ ಇನ್ ಇಸ್ಲಾಂ ಕೂಡಾ ಈ ನಿರ್ಧಾರಕ್ಕೆ ನಿರಾಶಾದಾಯಕ ಎಂಬ ಅಭಿಪ್ರಾಯ ವ್ಯಕ್ತಪಡಿಸಿದುದಲ್ಲದೇ, ತಾವು ತಮ್ಮ ಯೋಗ ತರಗತಿಗಳನ್ನು ಮುಂದುವರೆಸುವುದಾಗಿ ಹೇಳಿತು. ಕೇವಲ ದೈಹಿಕ ವ್ಯಾಯಾಮವಾಗಿ ಆಚರಿಸುವ ಯೋಗವನ್ನು ಒಪ್ಪಬಹುದು, ಆದರೆ ಧಾರ್ಮಿಕ ಮಂತ್ರಗಳ ಪಠಣ ನಿಷೇಧಾರ್ಹವಾಗಿರುತ್ತದೆ, ಹಾಗೂ ಮಾನವನನ್ನು ದೈವದೊಂದಿಗೆ ಸಮೀಕರಿಸುವಂತಹಾ ಬೋಧನೆಗಳು ಇಸ್ಲಾಂ ತತ್ವಶಾಸ್ತ್ರಕ್ಕೆ ವಿರೋಧವಾದುದು ಎಂದು ಮೇಲಿನ ಫತ್ವಾ ಘೋಷಿಸುತ್ತಿತ್ತು. ಇದೇ ತರಹದ ಧಾಟಿಯಲ್ಲಿ, ಇಂಡೋನೇಷ್ಯಾದ ಕೌನ್ಸಿಲ್ ಆಫ್ ಉಲೇಮಾಸ್ ಎಂಬ ಇಸ್ಲಾಂ ಸಂಸ್ಥೆಯು, ಯೋಗವು "ಹಿಂದೂ ಅಂಶಗಳನ್ನು" ಹೊಂದಿದೆ ಎಂಬುದರ ಆಧಾರದ ಮೇಲೆ ಅದನ್ನು ನಿಷೇಧಿಸಿ ಫತ್ವಾವನ್ನು ಹೊರಡಿಸಿತು. ಈ ಫತ್ವಾಗಳನ್ನು ಭಾರತದ ದಾರುಲ್ ಉಲೂಂ ದಿಯೋಬಂದ್ ಎಂಬ ದಿಯೋಬಂದಿ ಇಸ್ಲಾಂ ಬ್ರಹ್ಮಜ್ಞಾನ ಶಿಕ್ಷಣಾಲಯವು ಟೀಕಿಸಿದೆ.

2009ರ ಮೇನಲ್ಲಿ, ಟರ್ಕಿಯ ಅಲಿ ಬರ್ದಕೋಗ್ಲು ಎಂಬ ಧಾರ್ಮಿಕ ವ್ಯವಹಾರಗಳ ನಿರ್ದೇಶನಾಲಯವು ಅತಿರೇಕತೆಯನ್ನು ಉತ್ತೇಜಿಸುವ ಉದ್ಯಮವೆಂದು ಯೋಗದ ವಾಣಿಜ್ಯ ಉದ್ಯಮವನ್ನು ಕಡೆಗಣಿಸಿತು–ಇದಕ್ಕೆ ಕಾರಣವೇನೆಂದರೆ ಯೋಗದ ಆಚರಣೆಯು ಬಹುಶಃ ಇಸ್ಲಾಂನಲ್ಲಿ ಭಾಗವಹಿಸುವಿಕೆಯನ್ನು ನಾಶಗೊಳಿಸುತ್ತಿದೆಯೆಂದು ಹಾಗೂ ಇಸ್ಲಾಂಗೆ ಸ್ಪರ್ಧೆ ನೀಡುತ್ತಿದೆಯೆಂದು ಬಂದ ಟೀಕೆಗಳು.

2017 ರಲ್ಲಿ  ಜಾರ್ಖಂಡ್ ಮುಸ್ಲಿಮ್ ಮಹಿಳೆಯೊಬ್ಬರ ಮೇಲೆ ಫತ್ವ ಹೊರಡಿಸಿದ ಅಲ್ಲಿನ ಮುಸ್ಲಿಮ್ ಮೌಲ್ವಿಗಳು ಆಕೆ ಯೋಗ ಹೇಳಿಕೊಡುತ್ತಿರುವುದು ಇಸ್ಲಾಮಿಗೆ ವಿರೋದ ಅಂದಿತ್ತು.[71]  ಫತ್ವ ನಂತರ ಆಕೆಯ ಮನೆಯನ್ನು ಮುಸ್ಲಿಮ್ ಮತಾಂದರ ದಾಳಿ ಮಾಡಿ ನಾಶ ಮಾಡಿದ್ದರು. ಈ ಬಗ್ಗೆ ಅನೇಕ ಮುಸ್ಲಿಮರಲ್ಲು ಟೀಕೆಗಳು ಕೇಳಿ ಬಂದಿದ್ದವು. ಈ ಬಗ್ಗೆ 1984 ರಲ್ಲಿಯೇ ಯೋಗ ಮುಸ್ಲಿಮ್ ಮತದ ವಿರುದ್ದ ಎಂದು ಫತ್ವ ಹೊರಡಿಸಲಾಗಿತ್ತು ಎನ್ನುತ್ತದೆ ಸಿಂಗಪೂರ್ ಇಸ್ಲಾಮಿಕ್ ಸಂಘಟಣೆ.[72]  ಕ್ರೈಸ್ತರಲ್ಲು ಯೋಗ ಪ್ರತಿದ್ವನಿಸಿತು – 1989ರಲ್ಲಿ, ವ್ಯಾಟಿಕನ್ ಸಿಟಿಯು ಝೆನ್ ಮತ್ತು ಯೋಗದಂತಹಾ ಪೂರ್ವದ ಧ್ಯಾನದ ಆಚರಣೆಗಳು "ಅಸಾಂಪ್ರದಾಯಿಕ ಧಾರ್ಮಿಕ ಸಂಸ್ಥೆಗಳಾಗಿ ಅವನತಿ ಹೊಂದುವ ಸಾಧ್ಯತೆ ಇದೆ" ಎಂದು ಘೋಷಿಸಿತು.[73]  ವ್ಯಾಟಿಕನ್ ಸಿಟಿಯ ಈ ಹೇಳಿಕೆಯ ಹೊರತಾಗಿಯೂ, ಅನೇಕ ರೋಮನ್ ಕ್ಯಾಥೊಲಿಕರು ಯೋಗ, ಬೌದ್ಧಧರ್ಮ ಮತ್ತು ಹಿಂದೂ ಧರ್ಮಗಳ ಅಂಶಗಳನ್ನು ತಮ್ಮ ಧಾರ್ಮಿಕ ಚಟುವಟಿಕೆಗಳಲ್ಲಿ ಬಳಸುತ್ತಲೇ ಇದ್ದಾರೆ.[74]

ಬಹುದೇವಾರಾಧಕರ ಬಗ್ಗೆ ಇಷ್ಟೆಲ್ಲಾ ಚಕಾರ ಎತ್ತುವ ಇಸ್ಲಾಮ್ ಮತದ ಖುರಾನ್ ಅಲ್ಲಾಹರಿಗೆ 99 ಹೆಸರು ಇದೆ, ಒಂದೊಂದು ಹೆಸರು ಒಂದೊಂದು ಅರ್ಥವನ್ನು ಕೊಡುತ್ತದೆ  – ಇವೆಲ್ಲಾ ಖುರಾನಿನಲ್ಲೇ ಉಲ್ಲೇಕವಾದ ಹೆಸರುಗಳಾಗಿವೆ.[75] – ಹೀಗಿದ್ದು ಇವರು ಹೇಗೆ ಏಕದೇವೋಪಾಸನೆ ಅನ್ನುತ್ತಾರೆ. ಏಕಮಾತ್ರ ಅಲ್ಲಾಹನಿಗೆ ವಿವಿದ ಅರ್ಥದ ಅನೇಕ ಹೆಸರುಗಳು, ನಮ್ಮಲೂ ಹಾಗೆ ಏಕ ಮಾತ್ರ ದೇವರಿಗೆ ವಿವಿದ ಕಾರ್ಯಕ್ಷೇತ್ರ ಮತ್ತು ವಿವಿದ ವಿಶಿಷ್ಟತೆಗಳಿಗೆ ಹೆಸರನ್ನು ನೀಡಲಾಗಿದೆ, ನಾವು ಆಕಾರ ನೀಡಿ ಕಲ್ಪಿಸಿಕೊಳ್ಳುತ್ತೇವೆ, ಅವರು ನಿರಾಕಾರವಾಗಿ ಕಲ್ಪಿಸಿಕೊಳ್ಳುತ್ತಾರೆ, ವ್ಯತಾಸ ಇಷ್ಟೆ

---

[71] https://timesofindia.indiatimes.com/india/fatwa-on-woman-for-teaching-yoga-while-muslim/articleshow/61587422.cms

[72] https://www.muis.gov.sg/officeofthemufti/Irsyad/Advisory-on-Yoga-Practice

[73] http://www.ewtn.com/library/curia/cdfmed.htm

[74] https://www.nytimes.com/1990/01/07/weekinreview/ideas-trends-trying-to-reconcile-the-ways-of-the-vatican-and-the-east.html

[75] https://en.wikipedia.org/wiki/Names–of–God–in–Islam

ನಮ್ಮಲ್ಲಿ ನಮ್ಮ ದೇವರನ್ನು ಆರಾಧಿಸದವರು ಜೀವಂತ ಉಳಿಯ ಬಾರದು ಅನ್ನುವ ಸಿದ್ಧಾಂತಗಳು ಜಾರಿಯಲ್ಲಿ ಇಲ್ಲ, ಅವರಲ್ಲಿ ಜಾರಿಯಲ್ಲಿ ಇದೆ.

1. ಅರ್ ರಹಮಾನ್/ (ಪ್ರಯೋಜನಕಾರಿ / ಎಲ್ಲಾ-ಸಹಾನುಭೂತಿಯುಳ್ಳ / ಅತ್ಯಂತ ಮನೋಹರವಾದ) ಸುರಾ-55

2. ಅರ್ ರಹೀಮ್/ (ಹೆಚ್ಚು ಕರುಣಾಮಯಿ/ಯಾವಾಗಲೂ ಕರುಣಾಮಯಿ/ ಕರುಣಾಮಯಿ/ಹೆಚ್ಚು ಕ್ಷಮಿಸುವವನು)-ಎಲ್ಲಾ ಸುರಾದಲ್ಲಿ

3. ಅಲ್ ಮಲಿಕ್/ ಅಲ್ ಮಾಲಿಕ್/ (ರಾಜ/ಒಡೆಯ/ಸಾರ್ವಭೌಮ/ದೇವರು) 59:23, 20:114, 23:116

4. ಅಲ್ ಖುದ್ದೂಸ್ (ಪವಿತ್ರ /ಪೂಜ್ಯ) 59:23, 62:1

5. ಅಲ್ ಸಲಾಮ್/ (ಶಾಂತಿಯನ್ನು ಕೊಡುವವನು) 59:23

6. ಅಲ್ ಮುಮಿನ್ (ನಂಬಿಕೆ ನೀಡುವವನು/ರಕ್ಷಣೆ ನೀಡುವವನು) 59:23

7. ಅಲ್ ಮುಹಾಯಿಮಿನ್ (ಎಲ್ಲರ ಮೆಲೆ ಹಿಡಿತವಿರುವವನು) 59:23

8. ಅಲ್ ಅಜೀಜ್ ( ಸರ್ವ ಶಕ್ತನು)  3:6, 4:158, 9:40, 48:7, 59:23

9. ಅಲ್ ಜಬ್ಬಾರ್ (ಅತಿಶಯವಾದ ಶಕ್ತಿಯುಳ್ಳವನು) 59:23

10. ಅಲ್ ಮುತಾಕಬ್ಬೀರ್ (ಶ್ರೇಷ್ಠತೆ ಉಳ್ಳವನು/ ಸರ್ವೋತ್ತಮ/ನ್ಯಾಯಹಿರಿಮೆಯವನು) 59:23

11. ಅಲ್ ಖಾಲಿಕ್ (ಈ ಜಗತ್ತಿನ ಸೃಷ್ಠಿಕರ್ತನು) 6:102, 13:16, 36:81, 39:62, 40:62, 59:24

12. ಅಲ್ ಬಾರಿ (ಮೊದಲಿಗನು/ಸೃಷ್ಠಿಸುವವನು/ ಬಾಹ್ಯ ಆತ್ಮನು/ಎಲ್ಲರಿಂದ ಪೂಜಿಪನು/ ಎಲ್ಲಾ  ವಸ್ತುಗಳ ಮೇಲೆ ನಿಸರ್ಗದ ಮೇಲೆ ಆಗು ಹೋಗುಗಳ ಮೇಲೆ ಶಕ್ತಿಯುಳ್ಳವನು) 59:24

13. ಅಲ್ ಮುಸಾವಿರ್ - ರೂಪಿಸುವವನು/ರೂಪಕೊಡುವವನು/ಚಿತ್ರಿಸುವವನು/ ಕಲೆಗಾರನು 59:24

14. ಅಲ್ ಗಫ಼ಾರ್ - ಪುನಃ ಪುನ: ಕ್ಷಮಿಸುವವನು/ ಸಂಪೂರ್ಣವಾಗಿ ಕ್ಷಮಿಸುವವನು - 20:82, 38:66, 39:5, 40:42

15. ಅಲ್ ಖಹಾರ್ - ಅಧೀನಗೊಳಿಸುವವನು/ಸೋಲಿಸುವವನು/ ವಶಪಡಿಸಿಕೊಳ್ಳುವವನು/ ಸಂಪೂರ್ಣವಿಜಯನು/ ದುಷ್ಟತನವನ್ನು ಮತ್ತು ದಬ್ಬಾಳಿಕೆಯನ್ನು ಸೋಲಿಸುವ ಅರ್ಹತೆ ಉಳ್ಳವನು. 12:39, 13:16, 14:48, 38:65, 39:4, 40:16.

16. ಅಲ್ ವಹಾಬ್ – ಸಂಪೂರ್ಣ ನೀಡುವವನು/ನೀಡುವವನು/ ದಯಪಾಲಿಸುವವನು/ ಮಹಾನ್ ದಾನಿಯು –38:9, 38:35

17. ಅರ್ ರಜ್ಜಾಕ್ – ನೀಡುವವನು/ಪೋಷಿಸುವವನು/ ಪೋಷಣೆಯನ್ನು ದಯಪಾಲಿಸುವವನು/ಎಲ್ಲವನ್ನೂ ನೀಡುವವನು– 51:58

18. ಅಲ್ ಫ಼ತಾ – ಪ್ರಾರಂಭಿಸುವವನು/ ಆಧಾಯದ ಪ್ರಾರಂಭಿಕನು / ಬಿಡುಗಡೆ ಗೊಳಿಸುವವನು/ ಜಯವನ್ನು ನೀಡುವವನು – 34:26

19. ಅಲ್ ಅಲೀಮ್ – ತಿಳಿದವನು / ಎಲ್ಲವನ್ನು ತಿಳಿದವನು / ಸರ್ವಜ್ಞನು / ಎಲ್ಲಾ ಚೆನ್ನಾಗಿ ತಿಳಿದುಕೊಂಡಿರುವವನು / ಎಲ್ಲಾದರ ಬಗ್ಗೆ ಹೆಚ್ಚು ತಿಳುವಳಿಕೆ ಉಳ್ಳವನು/ ಎಲ್ಲಾ ತಿಳಿದವನು – 2:158, 3:92, 4:35, 24:41, 33:40

20. ಅಲ್ ಖಾಬಿದ್ – ನಿಗ್ರಹಿಸುವವನು/ ತಡೆಹಿಡಿಯುವವನು/ ನೇರಗೊಳಿಸುವವನು/ ಸಂಪೂರ್ಣ ವಶಪಡಿಸಿಕೊಳ್ಳುವವನು –2:245

21. ಅಲ್ ಬಸಿತ್ – ವಿಸ್ತರಣೆಗೊಳಿಸುವವನು/ ವಿಸ್ತರಿಸುವವನು / ದಾರಾಳವಾಗಿ ನೀಡುವವನು – 2:245

22. ಅಲ್ ಖಫೀದ್ – ತುಚ್ಚೀಕರಿಸುವವನು / ಅವಮಾನಿಸುವವನು / ಕೆಳಕ್ಕೆ ಇಳಿಸುವವನು (ಸುಖವನ್ನು ನೀಡುವ ಗುಣವುಳ್ಳವನು, –ನೋವು, ತೊಂದರೆ, ಆತಂಕ ದೂರ ಮಾಡುವ ಗುಣವುಳ್ಳವನು)–56:3

23. ಅರ್ ರಫೀ – ಉನ್ನತೀಕರಿಸುವವನು/ ಹೆಚ್ಚಿನ ಶ್ರೇಯಾಂಕ ನೀಡುವವನು – 58:11, 6:83

24. ಅಲ್ ಮುಯಿಜ್ – ಮಾನ್ಯತೆ ನೀಡುವವನು/ ಗೌರವದ ಆಶೀರ್ವಾದಿಸುವವನು / ಶಕ್ತಗೊಳಿಸುವವನು –3:26

25. ಅಲ್ ಮುದಿಲ್ – ಅವಮಾನ ನೀಡುವವನು, ಅಪಕೀರ್ತಿ ನೀಡುವವನು – 3:26

26. ಅಸ್ ಸಮಿ – ಕೇಳುವವನು, ಎಲ್ಲವನ್ನು ಕೇಳುವವನು, ಆವಾಹನೆಯನ್ನು ಕೇಳುವವನು – 2:127, 2:256, 8:17, 49:1

27. ಅಲ್ ಬಸಿರ್ – ಎಲ್ಲವನ್ನು ನೋಡುವವನು, ಎಲ್ಲವನ್ನು ನೀಡಿರುವವನು, ದಿವ್ಯದೃಷ್ಟಿಯುಳ್ಳವನು, ಸ್ವಷ್ಟ ದೃಷ್ಟಿಯುಳ್ಳವನು, ಸ್ವಷ್ಟವಾಗಿ ನೋಡುವವನು – 4;58, 17:1, 42:11, 42:27.

28. ಅಲ್ ಹಕಮ್ – ನ್ಯಾಯಾಧೀಶನು, ಮಧ್ಯಸ್ತಕಾರನು, ತೀರ್ಪುಗಾರನು, ಎಲ್ಲಾ ಆಜ್ಞಾಕಾರನು, ನಿರ್ದಾರಕ್ಕಾಗಿ ಮತ್ತು ತೀರ್ಪಿಗಾಗಿ ಅಧಿಕಾರ ಉಳ್ಳವನು – 22:69.

29. ಅಲ್ ಅದ್ಲ್ – ಸಕಾರಣವಾದನು, ಸಕಾರಣರೂಪದಲ್ಲಿ ನ್ಯಾಯವನ್ನು ನೇರವಾಗಿ ಮಾಡಲು ಅಧಿಕಾರ ಉಳ್ಳವನು – ಅಲ್ ಕಾಫಮಿ (1992:40)

30. ಅಲ್ ಲತೀಫ್ – ಸೌಮ್ಯದವನು, ಕರುಣಾಮಯಿ, ಸೂಕ್ಷ್ಮ ದಯಾಳು, ಎಲ್ಲಾ ಸೂಕ್ಷ್ಮದವನು – 22:63, 31:16, 33:34

31. ಅಲ್ ಕಬೈರ್ – ಎಲ್ಲವನ್ನು ತಿಳಿದವನು, ಚೆನ್ನಾಗಿ ಪರಿಚಿತನು, ಯಾವಾಗಲೂ ಸಮರ್ಥನು – 6:18, 17:30, 49:13, 59:18

32. ಅಲ್ ಹಲೀಮ್ – ಶ್ರಮಿಸುವವನು, ಪ್ರಸನ್ನಗೊಳಿಸುವವನು, ಆಗಾಗ್ಗೆ ಶ್ರಮಿಸುವವನು, ಎಲ್ಲವನ್ನು ಸಹಿಸುವವನು (ಶಾಂತತೆಯಿಂದ ನೋವುಣ್ಣುವವನು)

33. ಅಲ್ ಅಜಿಮ್ – ಅತ್ಯಂತ ಶ್ರೇಷ್ಠನು, ಎಂದಿಗೂ ಬವ್ಯವಾದವನು, ಅತ್ಯಂತ ಸರ್ವೋಚ್ಚನು, ಉದಾತ್ತನು, ಸಂಪೂರ್ಣ ಘನತೆಯವನು – 2:255, 42:4, 56:96.

34. ಅಲ್ ಗಫ಼ುರ್ – ಎಂದಿಗೂ ಕ್ಷಮಿಸುವವನು, ಆಗಾಗ್ಗೆ ಕ್ಷಮಿಸುವವನು–2:173, 8:69, 16:110, 41:32.

35. ಅಶ್ ಶಕುರ್ – ಕೃತಜ್ಞನು, ಮೆಚ್ಚುವವನು, ಪ್ರತಿಫಲಗಳನ್ನು ಹೆಚ್ಚಿಸುವವನು – 35:30, 35:34, 42:23, 64:17

36. ಅಲ್ ಆಲೀ – ಉದಾತ್ತನು, ಎಂದಿಗೂ ಉದಾತ್ತನು, ಸರ್ವೋಚ್ಚನು, ಅತೀ ಉನ್ನತನು, ಅತ್ಯಂತ ಉದಾತ್ತನು – 4:34, 31:30, 42:4, 42:51, 34:23.

37. ಅಲ್ ಕಬ್ಬೀರ್ – ಮಹಾನ್, ಎಂದಿಗೂ ಮಹಾನ್, ಮಹೋನ್ನತ, ಅತ್ಯಂತ ಮಹಾನ್, ವಿಸ್ತಾರವಾದ, ಸಾಮರ್ಥ್ಯ ಮತ್ತು ಪ್ರಾಮುಖ್ಯತೆಯು ಅಗಾಧವಾದದ್ದು – 13:9, 22:62, 13:30, 34:23

38. ಅಲ್ ಹಫೀಜ್ – ಸಂರಕ್ಷಕನು, ಎಂದಿಗೂ ಸಂರಕ್ಷಿಸುವವನು, ಎಲ್ಲಾ ಗಮನಿಸುವವನು, ರಕ್ಷಿಸುವವನು, ಕಾಯುವವನು, ಹಲವು ಸಂರಕ್ಷಕನು–11:57, 34:21, 42:6.

39. ಅಲ್ ಮುಖಿತ್ – ಪೋಷಿಸುವವನು, ಆಹಾರ ನೀಡುವವನು – 4:85

40. ಅಲ್ ಹಸೀಬ್– ತೀರ್ಪನ್ನು ತರುವವನು, ಎಂದಿಗೂ ಪರಿಶೋಧಕನು (ಎಲ್ಲ ವಿಷಯಗಳನ್ನು ಪರಿಗಣಿಸುವವನು)– 4:6, 4:86, 33:39.

41. ಅಲ್ ಜಲೀಲ್ – ಗಾಂಭೀರ್ಯನು, ಉದ್ದಾತ್ತನು, ಹಲವು ಮಹತ್ವನು, ಪ್ರಚಂಡನು.– 55:27, 7:143.

42. ಅಲ್ ಕರೀಮ್ – ಉದಾತ್ತನು, ದಯೆತ್ತುವವನು, ಉದಾರನು / ಬೆಲೆಬಾಳುವವನು / ಗೌರವನು / ಲಾಭದಾಯಕನು – 27:40, 82:6

43. ಅರ್ ರಕೀಬ್ – ಕಾವಲುಗಾರನು, ವೀಕ್ಷಕನು, ಎಂದಿಗೂ ಕಾಯುವವನು, ಕಾವಲಿಗನು – 4:1, 5:117.

44. ಅಲ್ ಮುಜೀಬ್ – ಪ್ರತಿಕ್ರಿಯಾಶೀಲನು, ಉತ್ತರಿಸುವವನು, ಸರ್ವೋಚ್ಚ ಉತ್ತರಿಪನು, ಅಹ್ವಾನವನ್ನು ಸ್ವೀಕರಿಸುವವನು.– 11:61.

45. ಅಲ್ ವಸೀ – ಬೃಹತ್, ಎಲ್ಲವನ್ನು ಅಪ್ಪಿಕೊಳ್ಳುವವನು, ಸರ್ವವ್ಯಾಪಿಯು, ಮಿತಿಯಿಲ್ಲದವನು, ಎಲ್ಲವನ್ನು ಒಳಗೊಂಡವನು – 2:268, 3:73, 5:54.

46. ಅಲ್ ಹಕೀಮ್ – ಬುದ್ಧಿವಂತನು, ಎಂದಿಗೂ ಬುದ್ಧಿವಂತನು, ಉತ್ತಮ ತೀರ್ಪು ನೀಡುವವನು – 31:27, 46:2, 57:1, 66:2.

47. ಅಲ್ ವದೂದ್ – ಅಕ್ಕರೆಯವನು, ಎಂದಿಗೂ ಅಕ್ಕರೆಯವನು, ಪ್ರೀತಿಯವನು, ಪ್ರೀತಿಸುವವನು, ಬೆಚ್ಚಗಿನ ಹೃದಯವನ್ನು ನೀಡುವವನು– 11:90, 85:14.

48. ಅಲ್ ಮಜೀದ್ – ಎಲ್ಲಾ ಖ್ಯಾತಿಯವನು, ಭವ್ಯವಾದವನು, ಎಂದಿಗೂ ಸುಪ್ರಸಿದ್ಧನು, ಘನತೆಗೆ ಅದ್ಭುತನು, ಕಾರ್ಯದವನು, ಅಥವ ಸಾಧಕನು – 11:73.

49. ಅಲ್ ಬೈತ್ – ಪುನರುತ್ಥಾನಗಾರ, ಜಾಗೃತಗೊಳಿಸುವವನು, ಪ್ರಚೋದಕನು, ಕಳುಹಿಸಿಕೊಡುವವನು – 22:7.

50. ಅಲ್ ಷಹೀದ್ – ಸಾಕ್ಷಿಯಾಗುವವನು, ಪರೀಕ್ಷಕನು, ಎಂದಿಗೂ ಸಾಕ್ಷೀಕರಿಸುವವನು – 4:166, 22:17, 41:53, 48:28.

51. ಅಲ್ ಹಖ್ – ಸತ್ಯವು, ವಾಸ್ತವಿಕತೆ, ಸತ್ಯದಲ್ಲಿ ಏಕೈಕ ನಿಸ್ಸಂಶಯವಾಗಿ ಉತ್ತಮನು ಮತ್ತು ನಿಜದವನು. – 6:62, 22:6, 23:116, 24:25.

52. ಅಲ್ ವಕೀಲ್ – ನಂಬಿಕಸ್ಥನು, ಭರವಸೆ ಇಡತಕ್ಕವನು, ಪ್ರತಿಪಾದಿಸುವವನು – 3:173, 4:171, 28:28, 73:9.

53. ಅಲ್ ಖವೀ – ಬಲವಾದವನು – 22:40, 22:74, 42:19, 57:25

54. ಅಲ್ ಮತೀನ್ – ಸ್ಥಿರವಾದವನು, ಅಚಲವಾದವನು, – 51:58

55. ಅಲ್ ವಲೀ – ಸ್ನೇಹಿತನು, ಸಹಾಯಮಾಡುವವನು – 4:45, 7:196, 42:28, 45:19.

56. ಅಲ್ ಹಮೀದ್ – ಎಲ್ಲಾ ಪ್ರಸಂಸನೀಯನು – 14:8, 31:12, 31:26, 41:42

57. ಅಲ್ ಮುಹ್ಸೀ – ಲೆಕ್ಕತೆಗೆದುಕೊಳ್ಳುವವನು, ಎಲ್ಲಕೂ ಸಂಖ್ಯೆ ನೀಡುವವನು – 72:28, 78:29.

58. ಅಲ್ ಮುಬ್ದೀ – ಜನಕನು, ಉತ್ಪಾದಿಸುವವನು, ಪ್ರಾರಂಭಿಕನು– 10:34, 27:64, 29:19, 85:13.

59. ಅಲ್ ಮುಯೀದ್ – ಮರುಸ್ಥಾಪಕನು, ಪುನರ್ಸ್ಥಾಪಿಸುವವನು, ಎಲ್ಲವನ್ನು ವಾಪಸ್ ತರುವವನು – 10:34, 27:64, 29:19, 85:13

60. ಅಲ್ ಮುಹ್ಯೀ – ಜೀವ ನೀಡುವವನು – 7:158, 15:23, 30:50, 57:2

61. ಅಲ್ ಮುಮೀತ್ – ಸಾವನ್ನು ತರುವವನು – 3:156, 7:158, 15:23, 57:2

62. ಅಲ್ ಹಯೀ – ಜೀವಿಸುವವನು – 2:225, 3:2, 20:111, 25:58, 40:65

63. ಅಲ್ ಖಯೂಮ್ – ಉಪಸ್ಥಿತವಿರುವವನು, ಸ್ವತಂತ್ರನು – 2:225, 3:2, 20:111.

64. ಅಲ್ ವಾಜೀದ್ – ಗ್ರಹಿಸುವವನು, ಕಾಣುವವನು, ವಿಫಲವಾಗದವನು – 38:44.

65. ಅಲ್ ಮಾಜೀದ್ – ಸುಪ್ರಸಿದ್ಧನು, ಭವ್ಯವದವನು – 85:15, 11:73, ಕಾಫಾಮಿ 1992:48

66. ಅಲ್ ವಾಹಿದ್ – ಅನನ್ಯನು, ಏಕಮಾತ್ರನು – 13:16, 14:48, 38:65, 39:4.

67. ಅಲ್ ಅಹಾದ್ – ಏಕೈಕನು, ಅವಿಭಜಿತನು – 112:1

68. ಅಸ್ ಸಮಾದ್ – ಶಾಶ್ವತನು, ಸಂಪೂರ್ಣನು, ಸ್ವಯಂ ಪೂರ್ಣನು – 112:2

69. ಅಲ್ ಖಾದಿರ್ – ಎಲ್ಲಾ ಶಕ್ತನು, ಎಲ್ಲವನ್ನು ಮಾಡತಕ್ಕವನು – 6:65, 46:33, 75:40.

70. ಅಲ್ ಮುಖ್ತಾದಿರ್ – ನಿರ್ಣಾಯಕನು, ಪ್ರಬಲ್ಯನು, – 18:45, 54:42, 6:65

71. ಅಲ್ ಮುಖದ್ದಿಮ್ – ವೇಗವರ್ದಕನು, ಮುಂದಕ್ಕೆ ತರುವವನು – 16:61

72. ಅಲ್ ಮುಅಖಾಹಿರ್ – ನಿಧಾನಗೊಳಿಸುವವನು, ದೂರತಳ್ಳುವವನು – 71:4

73. ಅಲ್ ಅವ್ವಾಲ್ – ಮೊದಲಿಗನು, ಆರಂಭದಲ್ಲಿ ಕಡಿಮೆಯವನು – 57:3

74. ಅಲ್ ಆಖೀರ್ – ಕೊನೆಯವನು, ಕೊನೆಯಿಲ್ಲದವನು – 57:3

75. ಅಜ್ ಜಾಹಿರ್ – ಸ್ಪಷ್ಟದವನು, ಪ್ರತ್ಯಕ್ಷನು, ಬಾಹ್ಯದವನು – 57:3

76. ಅಲ್ ಬತೀನ್ – ಅಡಗಿರುವುದು, ಸ್ಪಷ್ಟವಲ್ಲದ್ದು, ಒಳವಿರುವುದು –57:3

77. ಅಲ್ ವಾಲಿ – ಪೋಷಕನು, ರಕ್ಷಿಸುವ ಸ್ನೇಹಿತನು, ಸ್ನೇಹದ ಒಡೆಯನು – 13:11.

78. ಅಲ್ ಮುತಾಲಿ – ಅತೀವವಾಗಿ ಉದಾತ್ತನು, ಅತ್ಯುನ್ನತನು – 13:9

79. ಅಲ್ ಬಾರ್ರ್ – ಒಳ್ಳೆಯವನು, ಲಾಭದಾಯಕನು – 52:28

80. ಅತ್ ತಾವ್ವಾಬ್ – ಎಂದಿಗೂ ಮರಳಿಬರುವವನು, ಎಂದಿಗೂ ಕರುಣೆಯಿರುವವನು– 2:128, 4:64, 49:12, 110:3

81. ಅಲ್ ಮುಂತಾಖಿಮ್ – ಸೇಡು ತೀರಿಸಿಕೊಳ್ಳುವವನು – 32:22, 43:41, 44:16.

82. ಅಲ್ ಅಫ್ಘೌ – ಕ್ಷಮಿಸುವವನು, ಅಳಿಸುವವನು, – 4:43, 4:99, 4:149, 22:60, 58:2.

83. ಅರ್ ರೌಉಫ್– ದಯಾಳು, ಕರುಣೆಯುಳ್ಳವನು – 9:117, 57:9, 59:10.

84. ಮಾಲಿಕ್ ಉಲ್ ಮುಲ್ಕ್ – ಸಾರ್ವಭೌಮತ್ವದ ಮಾಲೀಕ – 3:26.

85. ದುಲ್ ಜಾಲಲಿ ವಾಲ್ ಇಕ್ರಾಮ್ – ಮಾಲೀಕನು, ಘನತೆ ಮತ್ತು ಗೌರವದ ಒಡೆಯನು – 55:27, 55:78.

86. ಅಲ್ ಮುಖ್ಸಿತ್ – ಸರಿಸಮ್ಮತನು, ಬದಲಿಗೆ ಬದಲಿ ಮಾಡುವವನು – 3:18, (ಕಾಫಿಮಿ 1992:58ಎಫ್ಘ್)

87. ಅಲ್ ಜಾಮಿ – ಒಟ್ಟುಗೂಡಿಸುವವನು, ಒಂದಾಗಿಸುವವನು – 3:9

88. ಅಲ್  ಘಾನಿ – ಶ್ರೀಮಂತನು, ಸ್ವತಂತ್ರನು – 39:7, 47:38, 57:24.

89. ಅಲ್ ಮುಘನಿ – ಹೆಚ್ಚಿಸುವವನು, ವಿಮೋಚಕನು – 9:28

90. ಅಲ್ ಮಾನಿ – ತಡೆಗಟ್ಟುವವನು, ನಿರೋಧಕನು, ರಕ್ಷಕನು, ರಕ್ಷಕ – ಕಫಾಮಿ (1992:61)

91. ಅದ್ ಧಾರ್ – ನಾಶಪಡಿಸುವವನು, ಹಾನಿಮಾಡುವವನು, ಕಿರುಕುಳಕೊಡುವವನು – 6:17, ಕಫಾಮಿ 1992:58

92. ಅನ್ ನಫಿ – ಅನುಕೂಲಕರನು, ಪೋಷಕನು, ಒಳ್ಳೆಯದಕ್ಕೆ ಮೂಲನು – 30:37.

93. ಅನ್ ನೂರ್ – ಬೆಳಕು – 24:35

94. ಅಲ್ ಹಾದಿ – ಮಾರ್ಗದರ್ಶಿ, ದಾರಿ ತೋರುವವನು – 22:54.

95. ಅಲ್ ಬಾದಿ – ಪ್ರಾರಂಬಿಸುವವನು, ಹೋಲಿಸಲಾಗದವನು, ಸಾಧಿಸಬಹುದಾಗದವನು, ಸುಂದರನು – 2:117, 6:101.

96. ಅಲ್ ಬಾಖಿ – ನಿರ್ವಿಕಾರನು, ಅನಂತನು, ಶಾಶ್ವತನು – 55:27, ಅಲ್ ಕಫಾಮಿ 1992:64

97. ಅಲ್ ವಾರೀಥ್ – ಉತ್ತರಾಧಿಕಾರಿ, ಎಲ್ಲರಿಗೂ ಉತ್ತರಾಧಿಕಾರಿ –15:23, 57:10

98. ಅಲ್ ರಶೀದ್ – ಉತ್ತಮ ಮಾರ್ಗದ ಮಾರ್ಗದರ್ಶಿ – ಖುರಾನಿನಲ್ಲಿ ಇಲ್ಲ

99. ಅಸ್ ಸಬುರ್ – ವೇಳೆಯಿಲ್ಲದವನು, ತಾಳ್ಮೆಯವನು – 2:153, 3:200, 103:3.

ಶಾಹಿ ಬುಕ್ಕಾರಿ ಸಂಪುಟ–8, ಪುಸ್ತಕ–75, ಹದಿತ್–419 ರಲ್ಲಿ ಹೇಳಿರುವಂತೆ **ಅಲ್ಲಾಹರಿಗೆ 99 ಹೆಸರಿದೆ, ಅವುಗಳ ಅರ್ಥವನ್ನು ತಿಳಿದವನು ಆರೀತಿ ನಡೆದುಕೊಂಡವನು ಸ್ವರ್ಗಕ್ಕೆ ಹೋಗುತ್ತಾನೆ.**

ಮುಸ್ಲಿಮರು ಹಿಂದುಗಳಲ್ಲಿ ಒಡಕು ಮೂಡಿಸಲು ಹೋಗಿ ಉಗ್ರವಾದಿಗಳಾದ ಕಥೆ[76]

2000 ನೇ ಇಸವಿಯಲ್ಲಿ ಕರ್ನಾಟಾಕ ಮತ್ತು ಇತರೆ ರಾಜ್ಯಗಳಲ್ಲಿ ಚರ್ಚಗಳಲ್ಲಿ ಬಾಂಬ್ ಸ್ಪೋಟವಾದ ಪ್ರಕ್ರಣಗಳು ಬೆಳಕಿಗೆ ಬಂದವು, ಅಂದು ಕೇಂದ್ರದಲ್ಲಿ ವಾಜಪೇಯಿ ಸರ್ಕಾರ ಆಡಳಿತದಲ್ಲಿ ಇತ್ತು. ಸದರಿ ಸ್ಪೋಟ ಮಾಡಲು ಮುಂದಾದದ್ದು ಮುಸ್ಲಿಮ್ ಸಂಘಟನೆ ದೀಂದಾರ್ ಅಂಜುಮಾನ್ ಸಂಸ್ಥೆಯ ಸದಸ್ಯರು. ಇದು ಮೊದಲಿಗೆ 2001 ರಲ್ಲಿ ಟೆರರಿಸ್ಟ್ ಸಂಸ್ಥೆ ಎಂದು ಘೋಷಿತವಾಗಿ ನಂತರ ಅನೇಕ ತಿರುವು ಪಡೆದು, ಈಗಲೂ ಇದು ಉಗ್ರ ಸಂಘಟಣೆ ಎಂದು ಕೇಂದ್ರ ಸರ್ಕಾರದ ಪಟ್ಟಿಯಲ್ಲಿ ಇದ್ದರೂ ಕೂಡ ಅದರ ವೆಬ್ ತಾಣ ಇನ್ನು ತೆರೆದೇ ಇರುವುದು ಆಶ್ಚರ್ಯಕರ. ಬೆಂಗಳೂರಿನಲ್ಲಿ ಈ ಪ್ರಕರಣಗಳ ವಿಚಾರಣೆಗಾಗಿ ಕರ್ನಾಟಕ ಸರ್ಕಾರ ವಿಶೇಷ ನ್ಯಾಯಾಲಯವನ್ನು ರಚಿಸಿತ್ತು.

2008 ರಲ್ಲಿ ವಿಶೇಷ ನ್ಯಾಯಾಲಯ ಹಲವರಿಗೆ ಗಲ್ಲು ಶಿಕ್ಷೆ ಮತ್ತು ಹಲವರಿಗೆ ಜೀವಾವಾದಿ ಶಿಕ್ಷೆ ವಿಧಿಸಿ ತೀರ್ಪು ನೀಡಿತ್ತು. ಈ ಪ್ರಕರಣಗಳು ಕರ್ನಾಟಕ ಹೈಕೋರ್ಟಿನ ಮೆಟ್ಟಿಲೇರಿತ್ತು. ಗಲ್ಲು ಶಿಕ್ಷೆ ಕಾಯಂ ಗೊಳಿಸಬೇಕೆ ಇಲ್ಲವೆ ಎಂಬ ವಿಚಾರಕ್ಕೆ ಒಂದು ಅಂಶವಾದರೆ. ಆರೋಪಿಗಳು ಮೇಲ್ಮನವಿ ಸಲ್ಲಿಸಿದ್ದರು. ಬೆಂಗಳೂರಿನ ಮಿನರ್ವ ಮಿಲ್ ಬಳಿ ಮಾರುತಿ ವ್ಯಾನಿನಲ್ಲಿ ಕೊಂಡು ಹೋಗುತ್ತಿದ್ದ ಸ್ಪೋಟಕಗಳಿಗೆ ಬೆಂಕಿ ತಗಲಿ ಸ್ಪೋಟವಾಗಿದ್ದ ಪ್ರಕರಣ ಒಂದಾದರೆ, ಇದು ಯಾವುದೋ ಚರ್ಚವೊಂದರಲ್ಲಿ ಸ್ಪೋಟಕ ಇಡಲು ತೆಗೆದುಕೊಂಡು ಹೋಗಲಾಗುತ್ತಿದ್ದ ಪ್ರಕರಣವೆಂದೂ ಗುರುತಿಸಲ್ಪಟ್ಟಿರುವ ಪ್ರಕರಣ. ಇನ್ನೊಂದು ಸೆಂಟ್ ಆನ್ಸ್ ಕ್ಯಾತೋಲಿಕ್ ಚರ್ಚ್ ವಾಡಿ, ಚಿತ್ತಾಪುರ ತಾಲ್ಲೂಕು, ಗುಲ್ಬರ್ಗ ಜಿಲ್ಲೆಯಲ್ಲಿ ಎರಡು ಪ್ರತ್ಯೇಕ ಸಮಯದಲ್ಲಿ ಸ್ಪೋಟಗೊಂಡ ಬಾಂಬ್ ಪ್ರಕರಣ. ಇನ್ನೊಂದು

---

[76] http://indiankanoon.org/doc/64598578/

ಸೆಂಟ್ ಜಾನ್ ಲೂತ್ರನ್ ಚರ್ಚ್ ಹುಬ್ಬಳ್ಳಿ ಇಲ್ಲಿ ನಡೆದೆ ಬಾಂಬ್ ಸ್ಫೋಟ ಪ್ರಕರಣ. ಇನ್ನೊಂದು ಸೆಂಟ್ ಪೀಟರ್ ಅಂಡ್ ಪೌಲ್ ಚರ್ಚ್ ಜೆ.ಜೆ.ನಗರ ಬೆಂಗಳೂರು. ಈ ಬಗ್ಗೆ ನಾಲ್ಕು ಕೇಸು ನೊಂದಾವಣೆ ಆಗಿ ನಾಲ್ಕು ಕೇಸುಗಳಾಗಿ ವಿಂಗಡಿಸಿ ವಿಶೇಷ ನ್ಯಾಯಾಲಯದಲ್ಲಿ ಪ್ರತ್ಯೇಕ ವಿಚಾರಣೆ ನಡೆದಿತ್ತು.

ವಿಶೇಷ ನ್ಯಾಯಾಲಯದಲ್ಲಿ ನಡೆದ ಮಾರುತಿ ವ್ಯಾನ್ ಬ್ಲಾಸ್ಟ್ ಪ್ರಕರಣದಲ್ಲಿ 67 ಸಾಕ್ಷಿಗಳ ವಿಚಾರಣೆ, 298 ದಾಖಲೆಗಳ ಪರಿಶೀಲನೆ, 212 ವಸ್ತುಗಳ ಪರಿಶೀಲನೆ ಮಾಡಿ ಆರೋಪಿಗಳಿಗೆ ವಿವಿದ ಆರೋಪಗಳಿಗೆ, ಗಲ್ಲು, ಜೀವಾವಾದಿ ಮತ್ತು ಇತರೆ ಶಿಕ್ಷೆಗಳನ್ನು ನೀಡಿತ್ತು.

ಜೆಜೆ ನಗರ ಚರ್ಚ್ ಬ್ಲಾಸ್ಟ್ ಕೇಸಿನಲ್ಲಿ 64 ಸಾಕ್ಷಿಗಳ ವಿಚಾರಣೆ, 262 ದಾಖಲೆಗಳ ಪರಿಶೀಲನೆ, 80 ವಸ್ತುಗಳ ಪರಿಶೀಲನೆ ಮಾಡಿ ಆರೋಪಿಗಳಿಗೆ ವಿವಿದ ಆರೋಪಗಳಿಗೆ, ಗಲ್ಲು, ಜೀವಾವಾದಿ ಮತ್ತು ಇತರೆ ಶಿಕ್ಷೆಗಳನ್ನು ನೀಡಿತ್ತು.

ಹುಬ್ಬಳ್ಳಿ ಚರ್ಚ್ ಬ್ಲಾಸ್ಟ್ ಕೇಸಿನಲ್ಲಿ 96 ಸಾಕ್ಷಿಗಳ ವಿಚಾರಣೆ, 244 ದಾಖಲೆಗಳ ಪರಿಶೀಲನೆ, 80 ವಸ್ತುಗಳ ಪರಿಶೀಲನೆ ಮಾಡಿ ಆರೋಪಿಗಳಿಗೆ ವಿವಿದ ಆರೋಪಗಳಿಗೆ, ಗಲ್ಲು, ಜೀವಾವಾದಿ ಮತ್ತು ಇತರೆ ಶಿಕ್ಷೆಗಳನ್ನು ನೀಡಿತ್ತು.

ಗುಲ್ಬರ್ಗ ಚರ್ಚ್ ಬ್ಲಾಸ್ಟ್ ಕೇಸಿನಲ್ಲಿ 61 ಸಾಕ್ಷಿಗಳ ವಿಚಾರಣೆ, 161 ದಾಖಲೆಗಳ ಪರಿಶೀಲನೆ, 40 ವಸ್ತುಗಳ ಪರಿಶೀಲನೆ ಮಾಡಿ ಆರೋಪಿಗಳಿಗೆ ವಿವಿದ ಆರೋಪಗಳಿಗೆ, ಗಲ್ಲು, ಜೀವಾವಾದಿ ಮತ್ತು ಇತರೆ ಶಿಕ್ಷೆಗಳನ್ನು ನೀಡಿತ್ತು.

ಕರ್ನಾಟಕ ಹೈ ಕೋರ್ಟಿನ ಮುಂದೆ ಬಂದಿದ್ದ ಮಾರುತಿ ವ್ಯಾನ್ ಸ್ಫೋಟ ಪ್ರಕರಣದಲ್ಲಿ (ಸೈಯದ್ ಮೊಹಮ್ಮದ್ ಇಬ್ರಾಹಿಮ್ ವಿರುದ್ದ ಕರ್ನಾಟಕ ರಾಜ್ಯ ಸರ್ಕಾರ (12-12-12) ರಲ್ಲಿ ನೀಡಿರುವ ಆದೇಶದಲ್ಲಿ. ಮಾನ್ಯ ನ್ಯಾಯಾಧೀಶರಾಗಿ ನ್ಯಾಯಮೂರ್ತಿ ಡಿ.ವಿ. ಶೈಲೇಂದ್ರಕುಮಾರ್ ಮತ್ತು ನ್ಯಾಯಮೂರ್ತಿ ಹೆಚ್.ಎಸ್. ಕೆಂಪಣ್ಣ ಇವರಿದ್ದ ವಿಭಾಗ ಪೀಠದ ಮುಂದೆ) ಒಬ್ಬ ಆರೋಪಿಗೆ ಮಾತ್ರ 10 ವರ್ಷದವರೆಗೆ ಶಿಕ್ಷಿ ವಿದಿಸಿ ಬಾಕಿ ಎಲ್ಲರನ್ನು ರುಜುವಾತು ಪಡಿಸುವಂತಾ ಸಾಕ್ಷಿ ಇಲ್ಲ, ಮಹಜರ್ ಮಾಡುವ ವೇಳೆ ವ್ಯತ್ಯಾಸಗಳಿವೆ. ಎಂದು ತೀರ್ಮಾನಿಸಿ ತೀರ್ಪು ನೀಡಿತ್ತು. ಇದರ ವಿರುದ್ದ ಸರ್ಕಾರ ಮೇಲ್ಮನವಿ ಸುಪ್ರೀಮ್ ಕೋರ್ಟಿನಲ್ಲಿ ಸಲ್ಲಿಸಿದ್ದು ಬಾಕಿ ಇದೆ ಎಂದು ತಿಳಿದು ಬಂದಿದೆ.

ಬಾಕಿ ಪ್ರಕರಣಗಳು ಮೇಲ್ಮನವಿಯ ವಿಚಾರಣೆ ಹೈಕೋರ್ಟಿನ ದ್ವಿಸದಸ್ಯ ಪೀಟದಲ್ಲಿ ಇದ್ದ ನ್ಯಾಯಮೂರ್ತಿ ಎನ್. ಕುಮಾರ್ ಮತ್ತು ನ್ಯಾಯಮೂರ್ತಿ ರತ್ನಕಲಾ ಇವರು 17-12-2014 ರಲ್ಲಿ ತೀರ್ಪು ನೀಡಿ ಆರೋಪಿಗಳ ಬಗ್ಗೆ ಇದ್ದ ಆರೋಪಗಳೆಲ್ಲಾ

ರುಜುವಾತಾಗಿದೆ, ಶಿಕ್ಷೆಯ ಪ್ರಮಾಣವನ್ನು ಜೀವಾವಾದಿ ಮತ್ತು ಇತರೆ ಶಿಕ್ಷೆಗಳಿಗೆ ಇಳಿಸಿ ತೀರ್ಪು ನೀಡಿರುತ್ತದೆ.

ಇದರಲ್ಲಿ ಆರೋಪಿಗಳು ಯಾರು ಅವರು ನಿರುದ್ಯೋಗಿಗಳೆ ವಿದ್ಯಾವಂತರೆ ಎಲ್ಲರೂ ಮುಸ್ಲಿಮರೇ ಎಂದು ಪರಿಶೀಲಿಸಿದಾಗ ಆಶ್ಚರ್ಯಕರ ವಿಚಾರಗಳು ಬೆಳಕಿಗೆ ಬರುತ್ತೆ. ಇವರಲ್ಲಿ ಪ್ರಮುಖ ಆರೋಪಿ ಬೆಂಗಳೂರಿನ ಮಲ್ಟಿ ನ್ಯಾಷನಲ್ ಕಂಪನಿಯಲ್ಲಿ ಅಕೌಂಟ್ಸ್ ಮ್ಯಾನೇಜರ್ ಆಗಿದ್ದ ಇಬ್ರಾಹಿಮ್ ಅಲಿಯಾಸ್ ಸೈಯದ್ ಮೊಹಮದ್ ಇಬ್ರಾಹಿಮ್ ಈತನಿಗೆ ಮಾರುತಿ ಕಾರ್ ಬ್ಲಾಸ್ಟ್ ನಲ್ಲೂ ಹೈಕೋರ್ಟಿನಲ್ಲಿ ಆರೋಪ ಸಾಬೀತಾಗಿತ್ತು.

ಹೈದರಾಬಾದಿನ ಇಜೆರ್ ಬೈಗ್ (ಅಗರ್ಭತ್ತಿ ವ್ಯಾಪಾರಿ), ಸೈಯದ್ ಅಬ್ಬಾಸ್ ಆಲಿ (ಕಾರ್ಪೆಂಟರ್), ಮೊಹಮ್ಮದ್ ಸರ್ಫುದ್ದೀನ್(ಬುಕ್ ವ್ಯಾಪಾರಿ), ಮೊಹಮ್ಮದ್ ಕಾಲೀದ್ ಚೌದ್ರಿ (ಏರ್ ಕಂಡೀಷನ್ ರಿಪೇರಿಯವನು), ಶೇಖ್ ಹಶೀಮ್ ಆಲಿ (ವಿಡಿಯೋಗ್ರಾಫರ್), ಮೊಹಮ್ಮದ್ ಫಾರೂಕ್ ಆಲಿ (ಕಿರಾಣ ಅಂಗಡಿ),

ಮೀರ್ ಸಾಬ್ – ಬೆಳಗಾಮ್ (ವ್ಯವಸಾಯಗಾರ), ಬಶೀರ್ ಅಹಮದ್ ಅಲಿಯಾಸ್ ಭಕ್ತ ಭಾರ್ಗವ ಬಶೀರ್ ಅಹಮದ್–ಬೆಳಗಾಮ್ (ವ್ಯವಸಾಯಗಾರ), ಸಾಂಗ್ಲಿ ಬಾಷ–ಬೆಳಗಾಮ್ (ವ್ಯವಸಾಯಗಾರ)

ರಿಶೀ ಹಿರೇಮಠ್ ಅಲಿಯಾಸ್ ಅಬ್ದುಲ್ ರಶೀದ್ ಮುನ್ನಾ ಬಿನ್ ಬಸವರಾಜ ಹಿರೇಮಠ್–ಹುಬ್ಬಳಿ (ಕಂಪ್ಯೂಟರ್ ಮಾರಾಟ ದಳ್ಳಾಳಿ), ಮುನೀರುದ್ದೀನ್ ಮುಲ್ಲಾ–ಹುಬ್ಬಳಿ (ರೈಲ್ವೆ ಉದ್ಯೋಗಿ),

ಅಬ್ದುಲ್ ರೆಹೆಮಾನ್ ಸೇಟ್–ಬೆಂಗಳೂರು (ಬೆಮೆಲ್ ನಲ್ಲಿ ಸೀನಿಯರ್ ಅಡ್ಮಿನಿಸ್ಟ್ರೇಟೀವ್ ಅಸಿಸ್ಟೆಂಟ್), ಅಮಾನಾಥ್ ಹುಸೈನ್ ಮುಲ್ಲಾ–ಬೆಂಗಳೂರು (ಬೆಮೆಲ್ ನಲ್ಲಿ ಸೂಪರ್ವೈಸರ್), ಮೊಹಮ್ಮದ್ ಸಿದ್ದಿಕಿ–ಚಿಕ್ಕಬಳ್ಳಾಪುರ (ಗಾರ್ಮೆಂಟ್ ಶಾಪ್),

ಸೈಯದ್ ಹಸನುಜಾಮಾ– ನವದೆಹಲಿ (ಏರ್ಫೋರ್ಸ್ ನಲ್ಲಿ ಜೂನಿಯರ್ ವಾರೆಂಟ್ ಆಫೀಸರ್), ಮೊಹಮ್ಮದ್ ಹುಸೈನ್–ಮುಂಬೈ (ಕೇಂದ್ರ ಸರ್ಕಾರದ ಉದ್ಯೋಗಿ)

ಶಂಶುಜಾಮಾ–ಆಂದ್ರ (ಎ.ಪಿ. ಬಸ್ ಕಂಡಕ್ಟರ್), ಸೈಯದ್ ಅಬ್ದುಲ್ ಖಾದರ್ ಜಿಲಾನಿ–ಆಂದ್ರ (ಮೆಕಾನಿಕ್), ಶೇಖ್ ಫರ್ದೀನ್ ವಾಲಿ– ಆಂದ್ರ (ಸಿವಿಲ್ ಕಾಂಟ್ರಾಕ್ಟರ್), ಅಬ್ದುಲ್ ಹಬೀಬ್–ಆಂದ್ರ (ಎ.ಪಿ. ಬಸ್ ಡ್ರೈವರ್), ಮೊಹಮ್ಮದ್ ಗೈಸುದ್ದೀನ್–ಆಂದ್ರ (ದನದ ಮಾಂಸ ವ್ಯಾಪಾರಿ),

ಹಳ್ಳಿಯಿಂದ ದಿಲ್ಲಿವರೆಗೆ, ಸಣ್ಣ ಕಿರಾಣಿ ವ್ಯಾಪಾರ ನಿರ್ವಾಹಕನಿಂದ ಮಲ್ಟಿ ನ್ಯಾಷನಲ್ ವ್ಯಾಪಾರ ನಿರ್ವಹಿಸುವವನ ವರೆಗೆ, ವಾಹನ ಚಾಲಕ ನಿಂದ ವೈಮಾನಿಕ ಸಂರಕ್ಷಣಾ ದಳದವರೆಗೆ, ಹೀಗೆ ಎಲ್ಲಾ ದುಡಿಮೆ ವರ್ಗದಿಂದ ಬಂದರಾಗಿದ್ದಾರೆ. ನಿರುದ್ಯೋಗಕ್ಕೂ ಉಗ್ರವಾದಕ್ಕೂ ಸಂಬಂದವಿಲ್ಲ ಅಂತ ತೋರುತ್ತಿದೆ. ಇಲ್ಲಿ ಎಲ್ಲರೂ ಮುಸ್ಲಿಮರೇ ಆದರೆ ಲಿಂಗಾಯಿತ ನಿಂದ ಮುಸ್ಲಿಮನಾಗಿ ಪರಿವರ್ತನೆ ಆಗಿರ ಬಹುದಾದ ವ್ಯಕ್ತಿಯೊಬ್ಬ ರಿಶೀ ಹಿರೇಮಠ್ ಅಲಿಯಾಸ್ ಅಬ್ದುಲ್ ರಶೀದ್ ಮುನ್ನಾ ಬಿನ್ ಬಸವರಾಜ ಹಿರೇಮಠ್-ಹುಬ್ಬಳಿ (ಕಂಪ್ಯೂಟರ್ ಮಾರಾಟ ದಳ್ಳಾಳಿ), ಈ ವ್ಯಕ್ತಿಯನ್ನು ಗಮನಿಸಿ.

"ಈ ಕೇಸುಗಳ ಪೋಲೀಸರ ತನಿಖಾ ಸಾರಾಂಶವೇನೆಂದರೆ - "ಹಜರತ್ ಸಿದ್ದಿಕ್" ಎಂದು ಕರೆಯಲ್ಪಡುವ ಶ್ರೀ ಹಜರತ್ ಮೌಲಾನಾ ಸಯ್ಯದ್ ಸಿದ್ದಿಕ್ ಕಿಬ್ಲಾ @ ಸಿದ್ದಿಕ್ ದೀಂದಾರ್ ಚನಬಸವೇಶ್ವರ ಅವರು ಹೈದರಾಬಾದಿನ ಅಸಿಫ಼ ನಗರದಲ್ಲಿ ನೆಲೆಸಿರುವ ದೀನ್ದಾರ್ ಅಂಜುಮಾನ್ ಆಶ್ರಮದ ಸಂಸ್ಥಾಪಕರಾಗಿದ್ದಾರೆ. ಇವರು ಮೊದಲಿಗೆ ನೇತ್ರ ತಜ್ಞರಾಗಿದ್ದರು. ಇವರು ರಾಮಾಯಣ, ಮಹಾಭಾರತ, ಖುರಾನ್, ವಚನ ಸಾಹಿತ್ಯ ಇನ್ನು ಮುಂತಾದ ಇತರೆ ಭಾರತದ ಮತಗಳ ಸಾಹಿತ್ಯವನ್ನು ಓದಿದವರಾಗಿದ್ದರು ಮತ್ತು ಲಿಂಗಾಯಿತ ಸಮುದಾಯದೊಂದಿಗೆ ಮತ್ತು ಸಾಹಿತ್ಯದೊಂದಿಗೆ ಹತ್ತಿರವಾಗಿದ್ದರು. ಚೆನ್ನಾಗಿ ಮಾತನಾಡಲು ಬರುವವರಾದ್ದರಿಂದ ಅಲ್ಲಿನ ಸಮುದಾಯವನ್ನು ಆಕರ್ಶಿಸುತ್ತಿದ್ದರು.

ಸಿದ್ದಿಕ್ ದೀಂದರ್ ಚನ್ನಬಸವೇಶ್ವರ ಅವರು 'ಏಕ ದೇವೋ ಭವ ಮತ್ತು ಸರ್ವ ಮತ' ದ ನಂಬಿಕೆಯೆಂದು ಎಲ್ಲ ಮತಗಳ ಗೌರವ ಮತ್ತು ಎಲ್ಲರೂ 'ಏಕೋಮತ, ಏಕೋಜಗದ್ಗುರು ಮತ್ತು ಏಕೋಜಗಿದೇಶ್ವರ'ದಲ್ಲಿ ನಂಬಿಕೆ ಇಟ್ಟುಕೊಳ್ಳುತ್ತಾರೆ ಎಂದು ಹೇಳಿದರು. ಇದನ್ನು ನಂಬುತ್ತಾ, ಅಸಹ್ಯಕರ ಜನರು ಅವನನ್ನು ಗುರುವಾಗಿ ಒಪ್ಪಿಕೊಂಡರು ಮತ್ತು ಎಲ್ಲಾ ಸಭೆಗಳಲ್ಲಿ ಭಾಗವಹಿಸಿದರು. ಅವರು ಸಾರ್ವಜನಿಕರನ್ನು ಸಾರ್ವಜನಿಕವಾಗಿ ಮೂರ್ಖನನ್ನಾಗಿ ಮಾಡಲು ಮುಂದಾದರು, ಆದರೆ ವಾಸ್ತವದಲ್ಲಿ, ಏಕೊ ಜಗದೀಶ್ವರ ಅಲ್ಲಾ, ಏಕೋ ಜಗದ್ಗುರು-ಮೊಹಮ್ಮದ್ ಪೈಗಂಬರ್ ಮತ್ತು ಏಕೋ ಮತ-ಇಸ್ಲಾಂ ಮತ ಎಂದು ಅರ್ಥೈಸಿದನು; ಮತ್ತು ಸಿದಿಕ್ ದೀಂದರ್ ಚನ್ನಬಸವೇಶ್ವರ ಅವರ ಗುಪ್ತ ಕಾರ್ಯಸೂಚಿಯು ಭಾರತ ಸೇರಿದಂತೆ ಇಡೀ ವಿಶ್ವವನ್ನು ಇಸ್ಲಾಮೀಕರಿಸುವುದಾಗಿತ್ತು.

ಈ ಉದ್ದೇಶವನ್ನು ಸಾಧಿಸಲು, ಸಿದಿಕ್ ದೀಂದರ್ ಚನ್ನಬಸವೇಶ್ವರ ಅವರು ಒಂದು ಸಿದ್ದಾಂತವನ್ನು ಹೊರಬಿಟ್ಟರು, "ಲಿಂಗಾಯಿತರು ಮೂಲತಃ ಅರಬ್ ದೇಶಕ್ಕೆ

